ವಿಷಯಾನುಕ್ರಮಣಿಕೆ

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ನಂ—೧೬

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಪದ್ಮಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದ ಅರ್ಥಾನುವಾದವಿವರಣೆಗಳೊಡನೆ)

## ಉತ್ತರಖಂಡ—ಮೊದಲನೆಯ ಭಾಗ

( ೧—೨೫ ಅಧ್ಯಾಯಗಳು )



ಅನುವಾದಕ :

ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ

ಸಾಹಿತ್ಯ ವಿದ್ವಾನ್

ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸು)



ಮೈಸೂರು :

ಶ್ರೀ ಹನುಮಾನ್ ಪ್ರೆಸ್

೧೯೪೫

॥ ಶ್ರೀಃ ॥

-X-

# ಮುನ್ನುಡಿ



ಪದ್ಮಮಹಾಪುರಾಣದಲ್ಲಿ ಇದು ಕೊನೆಯದಾದ ಉತ್ತರಖಂಡವಾಗಿರುತ್ತದೆ. ಉಳಿದ ಖಂಡಗಳಂತೆ ಈ ಖಂಡಕ್ಕೂ ಒಂದು ಹೆಸರನ್ನಿಡಬಹುದಾಗಿದ್ದರೂ, ಮೊದಲನೆಯದಕ್ಕೆ ಆದಿಖಂಡವೆಂದು ಹೆಸರನ್ನಿಡುವಂತೆ ಕೊನೆಯದಕ್ಕೆ ಉತ್ತರ ಖಂಡವೆಂದು ಹೆಸರಿಡುವುದು ವಾಡಿಕೆಯಾಗಿದೆ. ಒಬ್ಬ ಮನುಷ್ಯನಿಗೆ ಅನೇಕ ಜನ ಮಕ್ಕಳಿದ್ದರೆ, ಮೊದಲನೆಯವನಿಗೆ ಹಿರಿಯವನೆಂದೂ, ಕೊನೆಯವನಿಗೆ ಕಿರಿಯಮಗನೆಂದೂ ಹೇಳುವುದು ವಾಡಿಕೆ. ಅದರಂತೆಯೇ ಇದಕ್ಕೂ ಆ ಹೆಸರು ಸಂಖ್ಯೆಯಿಂದಾಗಲಿ, ವಿಷಯದಿಂದಲಾಗಲಿ ಬರದೆ, ರೂಢಿಯಿಂದ ಬಂದಿರುವುದು ಯುಕ್ತವಾಗಿದೆ. ಅಲ್ಲದೆ ಇದರಲ್ಲಿ ನಿರ್ದಿಷ್ಟವಾದ ಒಂದೇ ವಿಷಯವು ಇಲ್ಲದೆ ಇರುವುದೂ ಇದಕ್ಕೆ ಕಾರಣವಾಗಿದೆ.

ಇದರಲ್ಲಿ ಜಲಂಧರನ ಉತ್ಪತ್ತಿ, ಶಕ್ತಿ; ವೃಂದೆಯ ಪಾತಿವ್ರತ್ಯ, ಈ ಪಾತಿವ್ರತ್ಯದಿಂದ ಜಲಂಧರನಿಗೆ ಬಂದಿದ್ದ ಶಕ್ತಿ ಇವೆಲ್ಲವೂ ಬಹು ರಮ್ಯವಾಗಿ ವರ್ಣಿತವಾಗಿವೆ. ಮತ್ತು ಈ ಜಲಂಧರನು ತನ್ನ ಅಕ್ಕ ಲಕ್ಷ್ಮಿಯ ಗಂಡನಾದ ವಿಷ್ಣುವನ್ನು ತನ್ನ ಮನೆಯಲ್ಲಿರಹೇಳಿದುದಕ್ಕೆ ಅವನು ಮಾಡಿದ ಅಪಕಾರವನ್ನು ಸ್ಮರಿಸಿಕೊಂಡು—

" ಗೃಹೇ ಸ್ಥಿತಸ್ಯ ಜಾಮಾತುಃ ವಿಶ್ವಸೇನ್ನೈವ ಬುದ್ಧಿಮಾನ್ |
ನೂನಂ ತಸ್ಮೈ ಪ್ರದತ್ವಾ ಚ ಕನ್ಯಕಾಂ ವಿಸೃಜೇದ್ಬುಧಃ ||
ಜಾಮಾತಾರಂ ಗೃಹೇ ನೈವ ಸ್ಥಾಪಯೇತ್ಸರ್ವಥಾ ನರಃ |
ಧನದಾರಾದಿಕಂ ಸರ್ವಂ ಸ ಗೃಹ್ಣಾತಿ ಶನೈಶ್ಶನೈಃ || "

—ಹೀಗೆ ಹೇಳಿರುವ ನೀತಿಯು ಅಕ್ಷರಶಃ ನಿಜವಾಗಿರುವಂತೆ ಎದ್ದು ಕಾಣುತ್ತದೆ. ಅನಂತರ ಶ್ರೀಶೈಲ, ಹರಿದ್ವಾರ ಮುಂತಾದ ಕ್ಷೇತ್ರ ಮಹಿಮೆಯನ್ನು ವರ್ಣಿಸಿ; ಭಾವಿ, ತೋಪು, ಕಟ್ಟೆ, ಅರವಟ್ಟಿಗೆಗಳನ್ನು ಸ್ಥಾಪಿಸುವುದರಿಂದ ಬರುವ ಧರ್ಮ ವಿವರಿಸಲ್ಪಟ್ಟಿದೆ. ಗಂಗಾ ಸಾಗರಸಂಗಮ, ಜೀರ್ಣೋದ್ಧಾರದ ಪುಣ್ಯ, ಚಾತುರ್ವರ್ಣ್ಯಗಳ ಧರ್ಮ, ಹೆಂಗಸರಿಗೆ ವಿಶೇಷ ಧರ್ಮ ಇವೆಲ್ಲವೂ ಹೇಳಲ್ಪಟ್ಟಿವೆ. ಪ್ರತಿಮೆಗಳ ವಿಧಿಗಳು, ಅವುಗಳ ಲಕ್ಷಣಗಳಿಂದ ಇದು ಇಂತಹ ಮೂರ್ತಿಯೆಂದು ತಿಳಿಯುವ ಬಗೆ, ಇವೆಲ್ಲವೂ ವಿಶದವಾಗಿ ವರ್ಣಿತವಾಗಿವೆ. ಇಪ್ಪತ್ತನಾಲ್ಕು ಏಕಾದಶಿಯ ವ್ರತಗಳು, ಅಂತೆಯೆ ದ್ವಾದಶಿಗಳು, ಶಂಖ ಚಕ್ರಾದಿ ಧಾರಣೆಯ ವಿಷಯಗಳು, ಯಮುನೆಯ ಮಹಿಮೆ, ಗೋದಾವರಿಯ ಮಹಿಮೆ, ಸಾಲಗ್ರಾಮ ಮಹಿಮೆಗಳನ್ನು ಸಾಂಗವಾಗಿಯೂ, ಇತಿಹಾಸಪೂರ್ವಕವಾಗಿಯೂ ವಿವರಿಸಿವೆ. ಅಂತೆಯೇ ಮಾಸಗಳ ಮಹಿಮೆ, ಗೋ ಪೂಜೆಯ ಮಹಿಮೆ, ದಾನಗಳ ಮಹಿಮೆ, ಗುರುವಿನ ಲಕ್ಷಣ, ಜಪದ ವಿಧಿ, ಪಾದೋದಕ ಮಹಿಮೆ, ವೃಷೋತ್ಸರ್ಗದ ಮಹಿಮೆ, ದಂಡಕಾರಣ್ಯಾದಿಗಳ ಮಹಿಮೆ, ಗೀತೆಯ ಮಹಿಮೆ, ಭಾಗವತದ ಮಹಿಮೆ, ಕಾಳಿಂದಿಯ ಮಹಿಮೆ, ಇಂದ್ರಪ್ರಸ್ಥದ ವರ್ಣನೆ, ವೈಷ್ಣವ ಭೋಜನದ ಫಲ, ರುಕ್ಮಾಂಗದ ಚರಿತ್ರೆ, ವೈಷ್ಣವ ಲಕ್ಷಣ, ವಿಷ್ಣುನಿಂದಾಕರ ದೋಷ, ಜ್ವಾಲಾಮುಖಿಯ ಕಥೆ, ಬ್ರಹ್ಮೋತ್ಪತ್ತಿಯ ಪ್ರದೇಶ, ಕಾಯಸ್ಥರ ಉತ್ಪತ್ತಿ, ಗಯೆಯ ವರ್ಣನೆ, ಗದಾಧರನ ಉತ್ಪತ್ತಿ, ರಾಮಗಯೆಯ ಮಹಿಮೆ ಇವೆಲ್ಲವೂ ವರ್ಣಿತವಾಗಿವೆ. ಎಲ್ಲಾ ತೀರ್ಥಗಳ ವರ್ಣನೆ, ಅಲ್ಲಿ ತರ್ಪಣ ಮಾಡುವುದರಿಂದ ಬರುವ ಪುಣ್ಯ, ತುಳಸೀದಳವನ್ನು ಸೇರಿಸಿಕೊಂಡು ತರ್ಪಣ ಮಾಡಿದರೆ ಬರುವ ಅಧಿಕ ಪುಣ್ಯ, ಶಂಖವನ್ನು ಊದಿದರೆ ಬರುವ ಪುಣ್ಯ, ವಾರ ವೈಧೃತಿ ವ್ಯತೀಪಾತ ಇವುಗಳ ಮಹಿಮೆ, ಜನ್ಮಾಷ್ಟಮಿಯ ವ್ರತ, ಮಹಾದಾನಗಳ ವಿವರಣೆ, ಪ್ರಹ್ಲಾದ ಮುಂತಾದ ಭಕ್ತರ ವಿಷಯ, ವೇದ ಪುರಾಣಗಳ ರೂಪ ಇವೆಲ್ಲವೂ ಈ ಖಂಡದಲ್ಲಿ ವರ್ಣಿತವಾಗಿವೆ. ಮುಖ್ಯವಾಗಿ ಒಂದೇ ಮಾತಿನಲ್ಲಿ ಹೇಳುವುದಾದರೆ ಇದು ಧರ್ಮಸೂಕ್ಷ್ಮವನ್ನು ಬೋಧಿಸುವ ಕೈಪಿಡಿಯೆಂದು ಹೇಳಬಹುದು.

ಭಾಗವತ ಸಪ್ತಾಹ ವಿಷಯವು ಅತಿ ರಮ್ಯವಾಗಿಯೂ ಅಸದೃಶವಾಗಿಯೂ, ಆಚರಣೀಯವಾಗಿಯೂ ಇದೆ. ಕಾಳಿಂದಿಯ ಮಹಿಮೆಯನ್ನು ಹೇಳುವಾಗ ಇಂದ್ರಪ್ರಸ್ಥವು (ದೆಹಲಿಯು) ಬಹು ಪುಣ್ಯಕ್ಷೇತ್ರವೆಂದು ವರ್ಣಿತವಾಗಿದೆ. ಮಾಘ ಮಾಸದ ವಿಷಯವನ್ನು ಹೇಳುತ್ತ ಅದರ ಮಹಿಮೆಯು ಅತಿಶಯವಾದುದೆಂದು ವಿಸ್ತಾರವಾಗಿ ವರ್ಣಿತವಾಗಿದೆ. ವಿವಾಹದ ವಿಧಿಗಳೂ, ಅವುಗಳ ರೀತಿಯೂ ಮನೋಹರವಾಗಿವೆ. ಕೊನೆಗೆ ವಿಷ್ಣುವಿನ ಅವತಾರಗಳೆಲ್ಲವೂ ವರ್ಣಿತವಾಗಿವೆ. ಕೃಷ್ಣಾವತಾರದ ಕಥೆಯು ವಿಶೇಷವಾಗಿ ವರ್ಣಿತವಾಗಿ, ಕೃಷ್ಣನು ಕೊಂದ ಜರಾಸಂಧ, ದಂತವಕ್ತ್ರ, ಕಂಸ ಇವರ ಕಥೆಯು ವಿಸ್ತಾರವಾಗಿ ಹೇಳಲ್ಪಟ್ಟಿದೆ. ನಾವು ಪೂಜಿಸುವ ದೇವತೆಗಳಿಗೆಲ್ಲಾ ಕೈಕಾಲುಗಳಿದ್ದು ಸಾಧಾರಣವಾಗಿ ಮನುಷ್ಯ ರೂಪವಾಗಿದ್ದಾರೆ. ಆದರೆ ಶಿವನನ್ನೇಕೆ ಬೇರೆ ರೀತಿಯ ಪ್ರತಿಮೆಯನ್ನಾಗಿ ಮಾಡಿ ಪೂಜಿಸಬೇಕೆಂಬುವುದಕ್ಕೆ ಕಾರಣವು ಮನೋಹರವಾಗಿ ವರ್ಣಿತವಾಗಿದೆ.

ಕೊನೆಯದಾದ ಈ ಖಂಡವು ವ್ರತಗಳಿಗೂ, ಧರ್ಮಗಳಿಗೂ ಬಹುವಾಗಿ ಪ್ರಾಶಸ್ತ್ಯವನ್ನು ಕೊಟ್ಟಿದೆ. ಧರ್ಮಶಾಸ್ತ್ರಗಳಿಂದಲೂ ನಿರ್ಧರವಾಗದ ಅನೇಕ ವಿಷಯಗಳು ಇದರಲ್ಲಿ ಇತಿಹಾಸಗಳ ಮೂಲಕ ಸಂದೇಹ ಪರಿಹಾರಕಗಳಾಗಿವೆ. ಒಟ್ಟಿನಲ್ಲಿ ಇದು ಒಂದು ಧರ್ಮಗ್ರಂಥವಾಗಿ ಆಚಾರಗಳನ್ನು ಬೋಧಿಸುತ್ತದೆ ಎಂದರೆ ಸ್ವಲ್ಪವೂ ತಪ್ಪಾಗಲಾರದು.

ಉತ್ತರಖಂಡದ ಮೊದಲನೆಯ ಭಾಗವಾದ ಈ ಪುಸ್ತಕದಲ್ಲಿ ಜಲಂಧರನ ಉತ್ಪತ್ತಿ, ರಾಜ್ಯಭಾರ, ವಿಷ್ಣುವಿನ ಪರಾಜಯ, ವೃಂದೆಯ ಪಾತಿವ್ರತ್ಯ ಮಹಿಮೆ, ಶಿವ-ಜಲಂಧರರ ದ್ವಂದ್ವ ಯುದ್ಧ, ಪರಮೇಶ್ವರನಿಂದ ಜಲಂಧರನ ವಧೆ, ಮೋಕ್ಷ ಇತ್ಯಾದಿ ವಿಷಯಗಳು ಬಲು ಮನೋರಂಜಕವಾಗಿ ವಿವರಿಸಲ್ಪಟ್ಟಿದೆ. ಹಾಗೂ ಶ್ರೀಶೈಲ ಮಹಾತ್ಮ್ಯೆ, ಸಗರ ವಂಶೋತ್ಪತ್ತಿ, ಗಂಗೋತ್ಪತ್ತಿ ವರ್ಣನೆ, ಗಂಗಾ ಸ್ನಾನ ಮಹಿಮೆ, ಹರಿದ್ವಾರ ಮಹಿಮೆ, ಪ್ರಯಾಗ ಯಮುನೆಗಳ ಸ್ತುತಿ, ತುಳಸೀ ಕಾಷ್ಠ, ಸಾಲಿಗ್ರಾಮ ಪ್ರಯಾಗಗಳ ಮಹಿಮೆಗಳು ಚೆನ್ನಾಗಿ ವಿಶದೀಕರಿಸಲ್ಪಟ್ಟಿದೆ.

ಪಂಡಿತರುಗಳಿಗೆ ಉದಾರಾಶ್ರಯವನ್ನಿತ್ತು ಇಂತಹ ಉತ್ತಮ ಗ್ರಂಥಗಳ ಪ್ರಚಾರಕಾರ್ಯವನ್ನು ಕನ್ನಡಿಗರ ಮಾತೃಭಾಷೆಯಾದ ಕನ್ನಡದಲ್ಲಿ ಸುಲಭವಾಗಿ ತಿಳಿಯುವ ಹಾಗೆ ಉಪಕರಿಸುತ್ತಿರುವ ನಮ್ಮನ್ನಾಳುವ ಮಹಾಸ್ವಾಮಿಯವರಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೆ ಸರ್ವೇಶ್ವರನು ಸಕಲ ಸೌಭಾಗ್ಯ, ಸಂಪತ್ತು, ಸತ್ಪುತ್ರಾದಿ ಸನ್ಮಂಗಳವನ್ನು ಕರುಣಿಸಲೆಂದು ಪ್ರಾರ್ಥಿಸಿ, ಮಹಾಸ್ವಾಮಿಯವರಿಗೆ ನನ್ನ ಹೃತ್ಪೂರ್ವಕವಾದ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಮೈಸೂರು,
26—7—1945

ಅನುವಾದಕ,
**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



# ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಮೊದಲನೆಯ ಭಾಗದ

## ವಿಷಯಾನುಕ್ರಮಣಿಕೆ




ಪುಟಸಂಖ್ಯೆ

**ಮೊದಲನೆಯ ಅಧ್ಯಾಯವು**

ಋಷಿಸೂತರ ಸಂವಾದದಲ್ಲಿ ನಾರದ ಮಹೇಶ್ವರರ ಸಂವಾದವು, ನಾರದನು ಭಗವಂತನ ತತ್ವವನ್ನುದ್ದೇಶಿಸಿ ಮಹೇಶ್ವರನನ್ನು ಕುರಿತುಪ್ರಶ್ನಿಸುವುದು. ಉತ್ತರ ಖಂಡದಲ್ಲಿ ಹೇಳಿರುವ ವಿಷಯಗಳ ಪರಿಮಿತಿಯ ವರ್ಣನೆಯು. 1–14

**ಎರಡನೆಯ ಅಧ್ಯಾಯವು**

ಬದರಿಯೆಂಬ ಆಶ್ರಮದ ವರ್ಣನೆ. ಅಲ್ಲಿರುವ ನರನಾರಾಯಣರ ವರ್ಣನೆಯು. ಬದರ್ಯಾಶ್ರಮದಲ್ಲಿರುವ ಅಲಕನಂದ ಎಂಬ ಗಂಗಾ ನದಿಯಲ್ಲಿ ಸ್ನಾನಮಾಡುವುದರ ಫಲದ ವರ್ಣನೆ. ಬದರ್ಯಾಶ್ರಮದಲ್ಲಿ ರುದ್ರನು ತಪಸ್ಸು ಮಾಡಿದುದರಿಂದ ಅವನಿಗೆ ಕೈಲಾಸಾಧಿಪತ್ಯವು ಸಿಕ್ಕಿತು ಎಂಬುವುದರ ವರ್ಣನೆ. 15–19

**ಮೂರನೆಯ ಅಧ್ಯಾಯವು**

ಜಲಂಧರನ ಕಥೆಯ ಪ್ರಾರಂಭವು- ಕೈಲಾಸದ ವರ್ಣನೆ. ಕೈಲಾಸಕ್ಕೆ ಹೋದ ದೇವೇಂದ್ರನು ನರ್ತನವನ್ನು ಮಾಡಿ ಮಹೇಶ್ವರನನ್ನು ಸಂತೋಷಗೊಳಿಸಿ ಅವನನ್ನು ಕುರಿತು ಯುದ್ಧವನ್ನು ಕೊಡಬೇಕೆಂದು ವರವನ್ನುಕೇಳವುದು. ಇಂದ್ರನ ಬಾಹುಬಲದ ಗರ್ವವನ್ನು ನೋಡಿ ಕೋಪಗೊಂಡ ಶಿವನ ದೆಸೆಯಿಂದ ಅವನ ಕೋಪವು ಹೊರಹೊಮ್ಮಿ ಅದು ಆಕಾರವನ್ನು ಹೊಂದಿ ಶಿವನನ್ನೇ ಏನು ಮಾಡಬೇಕೆಂದು

ಪುಟಸಂಖ್ಯೆ

ಕೇಳುವುದು. ಆಗ ಆ ಶಿವನ ಅಪ್ಪಣೆಯಂತೆ ಆ ಕೋಪವು ಸಮುದ್ರರಾಜನ ದೆಶೆಯಿಂದ ಗಂಗಾನದಿಯಲ್ಲಿ ಹುಟ್ಟುವುದು. ಅವನಿಗೆ ಜಲಂಧರನೆಂದು ಹೆಸರು ಬರಲು ಕಾರಣವನ್ನು ಸೂಚಿಸುವುದು. ಜಲಂಧರನಿಗೆ ಬ್ರಹ್ಮನು ವರವನ್ನು ಕೊಡುವುದು. 20–32

**ನಾಲ್ಕನೆಯ ಅಧ್ಯಾಯವು**

ಜಲಂಧರನ ಬಾಲ್ಯದ ವರ್ಣನೆ. ಜಲಂಧರನ ರಾಜ್ಯಾಭಿಷೇಕ ವರ್ಣನೆಯು. ಜಲಂಧರನು ವೃಂದೆಯನ್ನು ಮದುವೆ ಆಗುವುದು. 33–45

**ಐದನೆಯ ಅಧ್ಯಾಯವು**

ಜಲಂಧರನು ತನ್ನ ಚಿಕ್ಕಪ್ಪನಾದ ಕ್ಷೀರಸಮುದ್ರನನ್ನು ಇಂದ್ರನು ಕಡೆದುದೇಕೆ ಎಂಬುದನ್ನು ತಿಳಿಯಲು ದೂತನನ್ನು ಇಂದ್ರನ ಬಳಿಗೆ ಕಳುಹಿಸುವುದು. 46–51

**ಆರನೆಯ ಅಧ್ಯಾಯವು**

ಜಲಂಧರನನ್ನು ಅನುಸರಿಸಿರುವ ದೈತ್ಯರಿಗೂ ದೇವತೆಗಳಿಗೂ ನಡೆದ ಯುದ್ಧದ ವರ್ಣನೆ. ವಿಷ್ಣುವೇ ಮುಂತಾದವರು ಕಾಲನೇಮಿಮುಂತಾದವರೊಡನೆ ಯುದ್ಧಮಾಡುವುದು. 52–66

**ಏಳನೆಯ ಅಧ್ಯಾಯವು**

ಇಂದ್ರನಿಗೂ ವಲನಿಗೂ ದ್ವಂದ್ವಯುದ್ಧವು ನಡೆಯುತ್ತಿರಲು ಇಂದ್ರನು ವಲನನ್ನು ಮುದ್ಗರದಿಂದ ಹೊಡೆಯಲು ಅವನ ಅವಯವದಿಂದ ವಜ್ರವೇ ಮುಂತಾದ ಅನೇಕ ಬಗೆಯ ರತ್ನಗಳು ಹುಟ್ಟುವುದರ ವರ್ಣನೆ. ಇಂದ್ರನು ವಲನನ್ನು ಕೊಂದುದರ ವರ್ಣನೆ. ವಲನ ಅಪ್ಪಣೆಯಂತೆ ಆತನ ಹೆಂಡತಿಯಾದ ಪ್ರಭಾವತಿಯು ನದಿಯಾಗಿ ಮಾರ್ಪಡುವುದು. 67–78

ಪುಟಸಂಖ್ಯೆ

**ಎಂಟನೆಯ ಅಧ್ಯಾಯವು**

ಜಲಂದರನು ಇಂದ್ರನನ್ನು ಸೋಲಿಸುವುದು. ವಿಷ್ಣು ಜಲಂಧರರಿಗೆ ಯುದ್ಧವಾಗುತ್ತಿರಲು ವಿಷ್ಣುವು ಜಲಂಧರ ಸೈನ್ಯವನ್ನೆಲ್ಲವನ್ನೂ ಕೊಲ್ಲುವುದು. ಜಲಂಧರನು ದಿವ್ಯೌಷಧಿಯಿಂದ ಕೂಡಿರುವ ದ್ರೋಣಪರ್ವತವನ್ನು ಹೊಡೆಯಲು ಹೋದಾಗ ಅದು ಪಾತಾಳಕ್ಕೆ ಹೋಗುವುದು. ಜಲಂಧರನ ಬಾಣದ ಏಟಿನಿಂದ ವಿಷ್ಣುವು ಮೂರ್ಛೆಗೊಳ್ಳುವುದು. ಲಕ್ಷ್ಮಿಯ ಅಪ್ಪಣೆಯಂತೆ ಜಲಂಧರನು ವಿಷ್ಣುವಿಗೆ ನಮಸ್ಕರಿಸಲು ವಿಷ್ಣುವು ವರವನ್ನು ಕೊಡುವುದು. ಜಲಂಧರನ ಪ್ರಾರ್ಥನೆಯ ಪ್ರಕಾರ ವಿಷ್ಣುವು ಜಲಂಧರನ ಮನೆಯಲ್ಲಿ ಲಕ್ಷ್ಮಿಯೊಡನೆ ವಾಸಿಸುವುದರ ವರ್ಣನೆ. 79–99

**ಒಂಭತ್ತನೆಯ ಅಧ್ಯಾಯವು**

ದೇವತೆಗಳೆಲ್ಲರನ್ನೂ ಗೆದ್ದು ಜಾಲಂಧರನು ಸುಖವಾಗಿ ರಾಜ್ಯವನ್ನು ಆಳುವುದರ ವರ್ಣನೆ. 100–105

**ಹತ್ತನೆಯ ಅಧ್ಯಾಯವು**

ದೇವತೆಗಳ ಪ್ರಾರ್ಥನೆಯಂತೆ ಶಂಕರನು ಎಲ್ಲರ ತೇಜಸ್ಸಿನಿಂದಲೂ ಚಕ್ರವನ್ನು ನಿರ್ಮಿಸುವಿಕೆಯ ವರ್ಣನೆ. 106–114

**ಹನ್ನೊಂದನೆಯ ಅಧ್ಯಾಯವು**

ಜಲಂಧರನು ನಾರದರ ಮುಖದಿಂದ ಪಾರ್ವತಿಯ ಸೌಂದರ್ಯವನ್ನು ಕೇಳಿ ಮೋಹಪರವಶನಾಗಿ ಶಂಕರನ ಬಳಿಗೆ ದೂತನನ್ನು ಕಳುಹಿಸುವುದು. ಕೀರ್ತಿಮುಖನು ಹುಟ್ಟುವುದರ ವರ್ಣನೆ. 115–127

ಪುಟಸಂಖ್ಯೆ

**ಹನ್ನೆರಡನೆಯ ಅಧ್ಯಾಯವು**

ಜಲಂಧರನು ಶಂಕರನ ಮೇಲೆ ಯುದ್ಧಕ್ಕೆ ಹೋಗುವುದು. ನಂದಿಯೇ ಮುಂತಾದ ಗಣಗಳಿಗೂ, ದೇವತೆಗಳಿಗೂ, ಜಲಂಧರನ ಸೈನ್ಯದೊಡನೆ ಯುದ್ಧ ಪ್ರಾಪ್ತವಾಗಲು ಜಲಂಧರನ ಸೈನ್ಯವು ಸೋಲುವುದರ ವರ್ಣನೆ. 128–145

**ಹದಿಮೂರನೆಯ ಅಧ್ಯಾಯವು**

ಶುಂಭನೇ ಮುಂತಾದ ದೈತ್ಯರಿಗೂ, ನಂದಿ ಮುಂತಾದ ಗಣಗಳಿಗೂ ದ್ವಂದ್ವ ಯುದ್ಧವು ನಡೆಯುತ್ತಿರಲು ನಂದಿಯೇ ಮುಂತಾದವರು ಸೋಲುವುದು. ಅನಂತರ ಶಂಕರನು ಬಂದು ಆ ದೈತ್ಯರೊಡನೆ ಯುದ್ಧಮಾಡಿ ಅವರನ್ನು ಸೋಲಿಸುವುದು. 146–159

**ಹದಿನಾಲ್ಕನೆಯ ಅಧ್ಯಾಯವು**

ಶಂಕರ ಜಲಂಧರರಿಗೆ ಯುದ್ಧವಾಗುತ್ತಿರಲು ಜಲಂಧರನು ಸೋಲುವುದು. ಮಾಯೆಯಿಂದ ಶಂಕರನ ವೇಷ ಹಾಕಿಕೊಂಡು ಜಲಂಧರನು ಗೌರಿಯ ಬಳಿಗೆ ಹೋಗುವುದು. ಆ ಮಾಯಾ ಶಂಕರನಿಗೂ ಪಾರ್ವತಿಗೂ ನಡೆದ ಮಾತುಕಥೆಗಳು. ಪಾರ್ವತಿಯು ಯೋಚನೆಗೊಳಗಾಗುವುದು. 160–172

**ಹದಿನೈದನೆಯ ಅಧ್ಯಾಯವು**

ಜಲಂಧರನು ಪಾರ್ವತಿಯನ್ನು ವಂಚಿಸುತ್ತಿರುವುದನ್ನು ತಿಳಿದು ವಿಷ್ಣುವು ಜಲಂಧರನ ಹೆಂಡತಿಯಾದ ವೃಂದೆಯನ್ನು ಕದಿಯಬೇಕೆಂದು ಯೋಚಿಸುವುದು. ವೃಂದೆಯು ಕನಸ್ಸಿನಲ್ಲಿ ಜಲಂಧರನ ತಲೆಯನ್ನು ಕಾಳಿಯು ತಿನ್ನುತ್ತಿರುವಂತೆ ಕಾಣುವುದು. ಈ ರೀತಿಯಾದ ಕನಸ್ಸಿನಿಂದ ದುಃಖಗೊಂಡ

ಪುಟಸಂಖ್ಯೆ

ವೃಂದೆಯು ಕಾಡಿಗೆ ಹೋಗುವುದು. ವೃಂದೆಯು ಅಲ್ಲಿ ರಾಕ್ಷಸರನ್ನು ನೋಡುವುದು. 173–189

ಹದಿನಾರನೆಯ ಅಧ್ಯಾಯವು

ವಿಷ್ಣುವು ತನ್ನ ಶಿಷ್ಯನೊಡನೆ ತಾಪಸ ವೇಷವನ್ನು ಹಾಕಿಕೊಂಡು ವೃಂದೆಯನ್ನು ರಾಕ್ಷಸನಿಂದ ಬಿಡಿಸುವುದು. ಬೇಡನನ್ನು ನೋಡಿ ಹೆದರಿದ ವೃಂದೆಯು ತಾಪಸ ವೇಷವನ್ನು ಹಾಕಿಕೊಂಡಿರುವ ವಿಷ್ಣುವಿನ ಆಶ್ರಮಕ್ಕೆ ಹೋಗುವುದು. ಚಿತ್ರಶಾಲೆಯಲ್ಲಿ ವೃಂದೆಯು ತನ್ನ ಗಂಡನ ತಲೆಯನ್ನು ಆಲಂಗಿಸಿಕೊಳ್ಳಲು ಆ ತಲೆಗೆ ಎಲ್ಲಾ ಅವಯವಗಳೂ ಬರಲೆಂದು ಆ ತಾಪಸನಿಂದ ಆಶೀರ್ವಾದವನ್ನು ಪಡೆದು ವೃಂದೆಯು ಚಿತ್ರಶಾಲೆಗೆ ಹೋಗುವುದು. ವೃಂದೆಯು ಗಂಡನ ತಲೆಗೆ ಮುತ್ತಿಕ್ಕಿದ ಮಾತ್ರಕ್ಕೆ ಆ ತಲೆಗೆ ಅವಯವಗಳೆಲ್ಲವೂ ಬಂದು ಅದು ಗಂಡನಾದ ಜಲಂಧರನ ರೂಪವನ್ನು ಹೊಂದುವುದು. ಮಾಯಾ ಜಲಂಧರನೊಡನೆ ವೃಂದೆಯು ಸುಖಿಸುವುದರ ವರ್ಣನೆ. ಹೀಗಿರುತ್ತಿರಲು ಒಂದು ಸಾರಿ ಸುರತ ಸುಖವನ್ನು ಅನುಭವಿಸಿದ ಮೇಲೆ ವೃಂದೆಯು ವಿಷ್ಣುವಿನ ಮೋಸವನ್ನು ತಿಳಿದು ಬಯ್ಯುವುದು. ವೃಂದೆಯು ಆ ವಿಷ್ಣುವಿಗೆ ನಿನ್ನ ಹೆಂಡತಿಯನ್ನು ತಾಪಸನು ಕದ್ದುಕೊಂಡು ಹೋಗಲಿ ಎಂದು ಶಾಪವನ್ನು ಕೊಡುವುದು. ವಿಷ್ಣುವಿನಿಂದ ದೂಷಿತವಾದ ಶರೀರವನ್ನು ವೃಂದೆಯು ತಪಸ್ಸಿನಿಂದ ಶೋಷಿಸುವುದು. ವೃಂದೆಯು ಯೋಗಾಭ್ಯಾಸದಿಂದ ಮೃತಳಾಗಿ ಬ್ರಹ್ಮಲೋಕಕ್ಕೆ ಹೋಗುವುದು. ವೃಂದೆಯ ದೇಹವನ್ನು ಆಕೆಯ ಸಖಿಯರು ಸುಡುವುದು. ಎಲ್ಲಿ ವೃಂದೆಯು ಪ್ರಾಣಬಿಟ್ಟಳೋ ? ಆ ಜಾಗವು ವೃಂದಾವನವಾಯಿತೆಂದು ವರ್ಣಿಸುವುದು. 190–207

ಪುಟಸಂಖ್ಯೆ

**ಹದಿನೇಳನೆಯ ಅಧ್ಯಾಯವು**

ಶಿವನ ವೇಷವನ್ನು ಹಾಕಿಕೊಂಡು ಬಂದಿರುವ ಜಲಂಧರನನ್ನು ಪರೀಕ್ಷಿಸಲು ಗೌರಿಯು ತನ್ನ ಸಖಿಯನ್ನು ಕಳುಹಿಸುವುದು ಆಕೆಯು ಪಾರ್ವತಿಯ ವೇಷವನ್ನು ಹಾಕಿಕೊಂಡು ಜಲಂಧರನ ಬಳಿಗೆ ಬರುವುದು. ಆ ಪಾರ್ವತಿವೇಷದ ಸಖಿಯನ್ನು ಜಲಂಧರನು ಆಲಂಗಿಸಿಕೊಳ್ಳುವಷ್ಟರಲ್ಲಿಯೇ ವೀರ್ಯವು ಸ್ಖಲನವಾಗಲುಸಖಿಯು ಇವನು ಮಾಯಾಶಿವ ನೆಂದು ನಿಶ್ಚಯಿಸಿ ಗೌರಿಗೆ ತಿಳಿಸುವುದು. ಆಕೆಯು ಈ ಜಲಂಧರನ ಹೆದರಿಕೆಯಿಂದ ಕಮಲವನ್ನು ಸೇರಿಕೊಂಡು ವಾಸಿಸುವುದು. ಆ ಗೌರಿಯ ಸಖಿಯರೂ ದುಂಬಿಗಳಾಗಿ ಕಮಲದ ಬಳಿಯಲ್ಲಿರುವುದು. ಚಂಡಮುಂಡರೆಂಬ ದೂತರು ಬಂದು ವಿಷ್ಣುವು ವೃಂದೆಯನ್ನು ಕದ್ದು ಪಾತಿವ್ರತ್ಯ ಭಂಗ ಮಾಡಿದನೆಂದು ಜಲಂಧರನಿಗೆ ತಿಳಿಸಲು ಅವನು ಯುದ್ಧ ಭೂಮಿಗೆ ಹೋಗುವುದು. 208–217

**ಹದಿನೆಂಟನೆಯ ಅಧ್ಯಾಯವು**

ಜಲಂಧರ ಶಂಕರ ಯುದ್ಧ ವರ್ಣನೆ. ಜಲಂಧರನ ಸೈನ್ಯಕ್ಕೂ ವೀರಭದ್ರಾದಿ ರುದ್ರಗಣಗಳಿಗೂ ನಡೆದ ಯುದ್ಧ ವರ್ಣನೆ. ಸತ್ತ ದೈತ್ಯರನ್ನೆಲ್ಲಾ ಶುಕ್ರಾಚಾರ್ಯನು ಬದುಕಿಸುತ್ತಿರಲು ಶಿವನು ಒಂದು ಕೃತ್ಯೆಯನ್ನು ಸೃಷ್ಟಿಸಿ ಶುಕ್ರನ ಬಳಿಗೆ ಕಳುಹಲು ಆ ಕೃತ್ಯೆಯು ಶುಕ್ರನನ್ನು ತನ್ನ ಗುಹ್ಯ ಪ್ರದೇಶದಲ್ಲಿ ಇಟ್ಟು ಕೊಳ್ಳುವುದರ ವರ್ಣನೆ. 218–236

**ಹತ್ತೊಂಭತ್ತನೆಯ ಅಧ್ಯಾಯವು**

ದೈತ್ಯರು ಶಿವಗಣಗಳೊಡನೆ ಯುದ್ಧಮಾಡುವುದು. ಜಲಂಧರನು ಮಾಯಾಬಲದಿಂದ ಪಾರ್ವತಿಯನ್ನು ಸೃಷ್ಟಿಸಿ ಆಕೆಯನ್ನು

ಪುಟಸಂಖ್ಯೆ

ಆ ಶಿವನೆದುರಿಗೆ ಕೊಲ್ಲುವುದು. ಇದನ್ನು ನೋಡಿ ಶಿವನು ಮೋಹಿತನಾಗಲು ಬ್ರಹ್ಮನ ಬೋಧನೆಯಿಂದ ಶಿವನಿಗೆ ಮಾಯೆಯ ಜ್ಞಾನವುಂಟಾಗುವುದು. ಶಿವನು ಜಲಂಧರನನ್ನು ಕೊಲ್ಲುವುದು. ಜಲಂಧರನು ಶಿವಸಾಯುಜ್ಯ ಮುಕ್ತಿಯನ್ನು ಹೊಂದುವುದು. ಕೈಲಾಸ ಪರ್ವತದ ಉತ್ತರ ದಿಕ್ಕಿನಲ್ಲಿ ಇರುವ ಪಟ್ಟಣದಲ್ಲಿ ಜಲಂಧರನ ರಕ್ತವು ಬಿದ್ದುದರಿಂದ ಅದಕ್ಕೆ ಶೋಣಿತಪುರವೆಂದು ಹೆಸರು ಬಂದುದು. ಶಂಕರನ ಅಪ್ಪಣೆ ಯಂತೆ ಅಲ್ಲಿ ಯುದ್ಧದಲ್ಲಿ ಸತ್ತವರ ಮಾಂಸವನ್ನು ಯೋಗಿನಿ ಗಳು ತಿನ್ನುವುದು. ನಿಮ್ಮನ್ನು ಪೂಜಿಸುವುದರಿಂದ ಎಲ್ಲಾ ಇಷ್ಟಗಳೂ ನೆರವೇರಲೆಂದು ಯೋಗಿನಿಯರಿಗೆ ಶಂಕರನು ವರವನ್ನು ಕೊಡುವುದು. ಈ ಕಥೆಯನ್ನು ಕೇಳುವುದರ ಫಲ ನಿರೂಪಣೆ. ತುಲಸಿಯ ಪ್ರಶಂಸೆ. 237–271

ಇಪ್ಪತ್ತನೆಯ ಅಧ್ಯಾಯವು

ಶ್ರೀಶೈಲದ ಮಹಿಮೆ. 272–276

ಇಪ್ಪತ್ತೊಂದನೆಯ ಅಧ್ಯಾಯವು

ಹರಿದ್ವಾರದ ಮಹಿಮೆಯ ಪ್ರಾರಂಭವು. ಗಂಗೆಯು ಹುಟ್ಟಿದು ದನ್ನು ಹೇಳಲು ಸಗರನ ಕಥೆಯ ವರ್ಣನೆ. 277–286

ಇಪ್ಪತ್ತೆರಡನೆಯ ಅಧ್ಯಾಯವು

ಹರಿದ್ವಾರದ ಪ್ರಶಂಸೆ. 287–293

ಇಪ್ಪತ್ತಮೂರನೆಯ ಅಧ್ಯಾಯವು

ಗಂಗೆಯ ಮಹಿಮೆ. ಗಂಗಾ ಯಮುನೆಯರ ಸ್ತುತಿ. ಪ್ರಯಾಗ ಸ್ತೋತ್ರ. ಕಾಶೀಸ್ತೋತ್ರ. ಗಯೆಯ ಮಹಿಮೆ. 294–311

ಪುಟಸಂಖ್ಯೆ

**ಇಪ್ಪತ್ತನಾಲ್ಕನೆಯ ಅಧ್ಯಾಯವು**

ತುಳಸೀ ಮಹಿಮೆ. 312–321

**ಇಪ್ಪತ್ತೈದನೆಯ ಅಧ್ಯಾಯವು**

ಪ್ರಯಾಗ ಮಹಿಮೆಯ ವರ್ಣನೆ. 322–326



|| ಶ್ರೀ ||

ಮಹಾಮುನಿ ಶ್ರೀ ವ್ಯಾಸಪ್ರಣೀತಂ

# ಪದ್ಮಮಹಾಪುರಾಣಂ

## ತತ್ರ ಷಷ್ಠಮುತ್ತರಖಂಡಂ



## || ಅಥ ಪ್ರಥಮೋಽಧ್ಯಾಯಃ ||



|| ಋಷಯ ಊಚುಃ ||

**ಶ್ರುತಂ ಪಾತಾಳಖಂಡಂ ಚ ತ್ವಯಾಖ್ಯಾತಂ ವಿದಾಂ ವರ ।**
**ನಾನಾಖ್ಯಾನಸಮಾಯುಕ್ತಂ ಪರಮಾನಂದದಾಯಕಂ || ೧ ||**

**ಅಧುನಾ ಶ್ರೋತುಮಿಚ್ಛಾನೋ ಭಗವದ್ಭಕ್ತಿವರ್ಧನಂ ।**
**ಪಾದ್ಮೇ ಯಚ್ಛೇಷಮಸ್ತೀಹ ತದ್ಬ್ರೂಹಿ ಕೃಪಯಾ ಗುರೋ || ೨ ||**

---

### ಮೊದಲನೆಯ ಅಧ್ಯಾಯವು

೧. ಎಲೈ ಸೂತಮಹರ್ಷಿಯೆ ! ಅನೇಕ ಕಥೆಗಳಿಂದಲೂ ವಿಷಯಗಳಿಂದಲೂ ಕೂಡಿದ ಬಹುವಾದ ಸಂತೋಷವನ್ನುಂಟುಮಾಡುವ ಪಾತಾಳಖಂಡವನ್ನು ನಿನ್ನ ಮುಖದಿಂದ ಕೇಳಿದೆನು.

೨. ಭಗವಂತನಲ್ಲಿ ಭಕ್ತಿಯನ್ನು ಹೆಚ್ಚಿಸುವ ಪದ್ಮಪುರಾಣದಲ್ಲಿ ಉಳಿದಿರುವ ಭಾಗವನ್ನು ಹೇಳು. ಅದನ್ನು ಕೇಳಬೇಕೆಂಬ ಕುತೂಹಲವು ಬಹುವಾಗಿದೆ.

॥ ಸೂತ ಉವಾಚ ॥

ಶೃಣುಧ್ವಂ ಮುನಯಸ್ಸರ್ವೇ ಯದುಕ್ತಂ ಶಂಕರೇಣ ಹಿ ।
ಪೃಚ್ಛತೋ ನಾರದಾಯೈವ ವಿಜ್ಞಾನಂ ಪಾಪನಾಶನಂ ॥ ೩ ॥

ಏಕದಾ ನಾರದೋ ಲೋಕಾನ್ ಪರ್ಯಟನ್ಭಗವತ್ಪ್ರಿಯಃ ।
ಗತೋಽದ್ರಿಂ ಮಂದರಂ ಶಂಭುಂ ಪ್ರಷ್ಟುಂ ಕಿಂಚಿನ್ಮನೋಗತಂ ॥ ೪ ॥

ತತ್ರಾಸೀನಮುಮಾನಾಥಂ ಪ್ರಣಿಪತ್ಯ ಶಿವಾಜ್ಞಯಾ ।
ಉಪವಿಷ್ಟಸ್ಸಮಾದಿಷ್ಟ ಆಸನೇ ಭಿಮುಖೇ ವಿಭೋಃ ॥ ೫ ॥

ಪಪ್ರಚ್ಛ ಇದಮೇವೇಶಂ ಯನ್ಮಾಂ ಪೃಚ್ಛಥ ಸತ್ತಮಾಃ ॥ ೬ ॥

॥ ನಾರದ ಉವಾಚ ॥

ಭಗವನ್ ದೇವದೇವೇಶ ಪಾರ್ವತೀಶ ಜಗದ್ಗುರೋ ।
ಭಗವತ್ತತ್ವವಿಜ್ಞಾನಂ ಯೇನಸ್ಯಾತ್ತನ್ಮಮಾದಿಶ ॥ ೭ ॥

---

೩. ಸೂತನು ಹೇಳಿದನು– ಎಲೈ ಋಷಿಗಳಿರಾ ! ಕೇಳಿರಿ. ಇದನ್ನೇ ಶಂಕರನನ್ನು ನಾರದನು ಕೇಳಿದನು. ಅವನಿಗೆ ಶಂಕರನು ಹೇಳಿದನು. ಅವನ್ನೇ ನಾನೂ ನಿಮಗೆ ಹೇಳುತ್ತೇನೆ. ಅದು ಜ್ಞಾನವನ್ನುಂಟುಮಾಡುವುದಾಗಿಯೂ ಪಾಪನಾಶಕವಾಗಿಯೂ ಇದೆ.

೪. ಭಗವಂತನಲ್ಲಿ ಭಕ್ತಿಯುಳ್ಳ ನಾರದನು ಲೋಕಗಳನ್ನೆಲ್ಲಾ ಸಂಚರಿಸುತ್ತ ಒಂದು ಬಾರಿ ತನ್ನ ಮನಸ್ಸಿನಲ್ಲಿರುವ ಒಂದು ವಿಷಯವನ್ನು ಕೇಳಲು ಮಂದರ ಪರ್ವತದಲ್ಲಿರುವ ಶಂಭುವಿನ ಬಳಿಗೆ ಹೋದನು.

೫–೬. ಆ ಪರ್ವತಕ್ಕೆ ಹೋಗಿ ಶಿವನಿಗೆ ನಮಸ್ಕರಿಸಿದನು. ಅನಂತರ ಶಿವನ ಅಪ್ಪಣೆಯಂತೆ ಆ ಶಿವನ ಎದುರಿಗೆ ಕುಳಿತುಕೊಂಡು ನೀವು ನನ್ನನ್ನು ಕೇಳಿದಿರಲ್ಲ ! ಇದೇ ವಿಷಯವನ್ನು ಆ ನಾರದನು ಆ ಮಹೇಶನನ್ನು ಕೇಳಿದನು.

೭. ನಾರದನು ಹೇಳಿದನು– ಸ್ವಾಮಿ ! ದೇವ ದೇವನೆ ! ಪಾರ್ವತಿ ವಲ್ಲಭನೆ ! ಜಗದ್ಗುರುವೆ ! ತತ್ತ್ವಜ್ಞಾನವು ಹೇಗೆ ಉಂಟಾಗುವುದೋ ಆ ರೀತಿಯನ್ನು ನನಗೆ ತಿಳಿಸು.

|| ಉಮಾಪತಿರುವಾಚ ||

ಶೃಣು ನಾರದ ವಕ್ಷ್ಯಾಮಿ ಪುರಾಣಂ ವೇದಸಮ್ಮಿತಂ ।
ಯಚ್ಛ್ರುತ್ವಾ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯಃ || ೮ ||

ಪ್ರಥಮೋತ್ತರಕೀರ್ತಿಸ್ಸ್ಯಾತ್ ಪಾರ್ವತ್ಯಾಖ್ಯಾನಮೇವ ಚ ।
ಜಾಲಂಧರಂ ತಥಾಖ್ಯಾನಂ ಶ್ರೀಶೈಲಾಖ್ಯಂ ತತಃ ಪರಂ || ೯ ||

ಹರಿದ್ವಾರಸ್ಯ ಚಾಖ್ಯಾನಂ ವಿಷ್ಣುಪಾದೋದ್ಭವಾಂ ತಥಾ ।
ಪ್ರಯಾಗತೀರ್ಥಂ ತೇ ವಕ್ಷ್ಯೇ ದಶಾಶ್ವಮೇಧಿಕಂ ಚ ತತ್ || ೧೦ ||

ತುಳಸೀಮಹಿಮಾ ಚೈವ ಶಂಖಚಕ್ರಗದಾದಿಕಂ ।
ದ್ವಾರಕಾಯಾಸ್ತಥಾಖ್ಯಾನಂ ಮಹೋತ್ಸವವಿಧಿಸ್ತತಃ || ೧೧ ||

ತಡಾಕಜಂ ತಥಾ ಪುಣ್ಯಂ ವಾಪೀಕೂಪಪ್ರಪಾದಿಜಂ ।
ಗಾಣಪತ್ಯಂ ತತೋ ವಕ್ಷ್ಯೇ ವೈಷ್ಣವಾಗಮಮೇವ ಚ || ೧೨ ||

---

೮. ಪಾರ್ವತೀಶನಾದ ಶಂಭುವು ಹೇಳಿದನು– ಎಲೈ ನಾರದನೆ ! ಕೇಳು. ವೇದಕ್ಕೆ ಸಮಾನವಾದ ಪುರಾಣವನ್ನು ಹೇಳುತ್ತೇನೆ. ಅದನ್ನು ಕೇಳುವುದರಿಂದಲೇ ಎಲ್ಲಾ ಪಾಪಗಳೂ ಹೋಗುತ್ತವೆ. ಸಂಶಯವಿಲ್ಲ.

೯–೧೦. ಮೊದಲು ಉತ್ತರಖಂಡದ ವಿಷಯವನ್ನು ಹೇಳುತ್ತೇನೆ. ಅನಂತರ ಪಾರ್ವತೀಯ ಕಥೆ, ಜಲಂಧರನ ಕಥೆ, ಶ್ರೀ ಶೈಲದ ವಿಷಯ. ಹರಿದ್ವಾರದ ಮಹಿಮೆ. ಗಂಗೆಯ ಪಾವನತೆ, ಪ್ರಯಾಗತೀರ್ಥ, ದಶಾಶ್ವಮೇಧಿಕಗಳ ಕಥೆ ಇವುಗಳನ್ನು ಹೇಳುತ್ತೇನೆ.

೧೧–೧೨. ತುಲಸಿ ಮಹಿಮೆ, ಶಂಖ, ಚಕ್ರ, ಗದೆಗಳ ವಿಷಯ. ದ್ವಾರಕೆಯ ಮಹಿಮೆ. ಮಹೋತ್ಸವವನ್ನು ಮಾಡುವ ಬಗೆ, ಕೆರೆ, ಕೊಳ, ಭಾವಿಗಳನ್ನು ಕಟ್ಟಿಸುವುದರ ಫಲ. ಅರವಟ್ಟಿಗೆಯನ್ನಿಡುವುದರ ಫಲ. ಗಣಪತಿಯ ವಿಚಾರ. ವೈಷ್ಣವಧರ್ಮ ಇವನ್ನು ಹೇಳುತ್ತೇನೆ.

ಜೀರ್ಣೋದ್ಧಾರಸ್ಯ ಮಾಹಾತ್ಮ್ಯಂ ಮಂದಾಕಿನೀಸಮಾಗಮಂ ।
ಸಾಭ್ರಮತ್ಯಾಸ್ತು ಮಾಹಾತ್ಮ್ಯಂ ಮಾಹಾತ್ಮ್ಯಂ ತೀರಜಂ ತಥಾ ॥ ೧೩ ॥

ಸ್ತ್ರೀಶೂದ್ರಾಣಾಂ ತಥಾ ಧರ್ಮಂ ಯಥೋತ್ತರಶ್ಚ ಧಾರಣಂ ।
ಉಮಾಮಹೇಶಸಂವಾದೇ ಪ್ರೋಕ್ತಂ ನಾಮಸಹಸ್ರಕಂ ॥ ೧೪ ॥

ಕೈಲಾಸತಸ್ಸಮಾನೀತಂ ನಾರದೇನಾಗ್ರಜನ್ಮನಾ ।
ಲೋಕಾನಾಂ ಬ್ರಾಹ್ಮಣಾನಾಂ ಚ ಕ್ಷತ್ರಿಯಾಣಾಂ ವಿಶೇಷತಃ ॥ ೧೫ ॥

ಸ್ತ್ರೀಶೂದ್ರಾಣಾಂ ವಿಶೇಷೇಣ ಪಠಿತವ್ಯಂ ಸಮಾಹಿತೈಃ ।
ಇದಂ ಪವಿತ್ರಂ ಪರಮಂ ಪುಣ್ಯಮಾಯುಷ್ಯವರ್ಧನಂ ॥ ೧೬ ॥

ಪಠಿತವ್ಯಂ ವಿಶೇಷೇಣ ವಿಷ್ಣೋಸ್ಸಾಯುಜ್ಯಮಾಪ್ನುಯಾತ್ ।
ವಿಷ್ಣೋರ್ನಾಮಸಹಸ್ರಂ ತತ್ ಪಾವನಂ ಭುವಿ ವಿಶ್ರುತಂ ॥ ೧೭ ॥

---

೧೩–೧೪. ಕೆಟ್ಟುಹೋಗಿರುವ, ಬಿದ್ದುಹೋಗಿರುವ ದೇವಾಲಯಾದಿಗಳನ್ನು ಸರಿಮಾಡಿದರೆ ಬರುವ ಪುಣ್ಯದ ಮಹಿಮೆ. ಗಂಗಾನದಿಯು ಬಂದ ವಿಚಾರ. ಸಾಭ್ರಮತಿಯ ಮಹಿಮೆ. ಗಂಗಾ ತೀರದ ಮಹಿಮೆ. ಹೆಂಗಸರು ಶೂದ್ರರ ಧರ್ಮ, ಮುಂದೆ ಅವರು ಮಾಡಬೇಕಾದ ಕೆಲಸ. ಸಹಸ್ರನಾಮಗಳು ಮತ್ತು ಅದರ ಫಲಗಳನ್ನು ಹೇಳುತ್ತೇನೆ.

೧೫–೧೬. ಈ ಪದ್ಮಪುರಾಣದ ವಿಷಯವನ್ನು ನಾರದನು ಕೈಲಾಸದಿಂದ ತಂದಿರುವನು. ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರು ಒಟ್ಟಿನಲ್ಲಿ ಎಲ್ಲಾ ಜಾತಿಯವರೂ ನಿಯಮದಿಂದ ಓದಬೇಕು. ಇದು ಪವಿತ್ರವಾದುದು. ಪುಣ್ಯಪ್ರದವಾದುದು. ಆಯುಸ್ಸನ್ನು ಹೆಚ್ಚಿಸುತ್ತದೆ.

೧೭. ಇದನ್ನು ನಿಯಮದಿಂದ ಓದಿದವನು ವಿಷ್ಣುವಿನ ಸಮೀಪಕ್ಕೆ ಹೋಗುತ್ತಾನೆ. ವಿಷ್ಣುವಿನ ಸಹಸ್ರನಾಮವು ಬಹು ಪವಿತ್ರವಾದುದೆಂಬುದಾಗಿ ಲೋಕದಲ್ಲಿ ಹೇಳಲ್ಪಟ್ಟಿದೆ.

**ಚತುರ್ವಿಂಶತಿಮೂರ್ತೀನಾಂ ಸ್ಥಾನಕಾನೀಹ ಸಂವದೇ ।**
**ತೇಷಾಂ ಚ ಮಾತಾಪಿತರಾವಂತರಂ ಚ ಬ್ರವೀಮ್ಯಹಂ ॥ ೧೮ ॥**

**ಗೋತ್ರಂ ವೇದಾಂಶ್ಚ ತೇಷಾಂ ವೈ ಕರ್ಮಾಣೀಹ ತಥೈವ ಚ ।**
**ಸ್ತ್ರಿಯಸ್ತೇಷಾಂ ಪ್ರವಕ್ಷ್ಯಾಮಿ ಯಥಾ ವಿಜ್ಞಾನದರ್ಶನಾತ್ ॥ ೧೯ ॥**

**ಚತುರ್ವಿಂಶತ್ಯೇಕಾದಶಿ ದ್ವಾದಶೀನಾಂ ಪ್ರಭಾವತಾಂ ।**
**ಗೋದಾವರ್ಯಾಶ್ಚ ಮಾಹಾತ್ಮ್ಯಂ ಶಂಖಚಕ್ರಾದಿಧಾರಣಂ ॥ ೨೦ ॥**

**ಬ್ರಾಹ್ಮಣಾನಾಂ ವಿಶೇಷೇಣ ಧಾರಣಂ ವಿಧಿಪೂರ್ವಕಂ ।**
**ಯಮುನಾಯಾಶ್ಚ ಮಾಹಾತ್ಮ್ಯಂ ಗಿಲ್ಲಿಕಾಯಾಸ್ತಥೈವ ಚ ॥ ೨೧ ॥**

**ವೇತ್ರವತ್ಯಾಶ್ಚ ಮಾಹಾತ್ಮ್ಯಂ ವಕ್ಷ್ಯೇಹಂ ನಾತ್ರ ಸಂಶಯಃ ।**
**ಗಿಲ್ಲಿತೀರ್ಥೋದ್ಭವಂ ಪುಣ್ಯಂ ಶಿಲಾಕ್ಷೇತ್ರಂ ಮಹಚ್ಚ ಯತ್ ॥ ೨೨ ॥**

---

೧೮. ಇಪ್ಪತ್ತನಾಲ್ಕು ವಿಷ್ಣುವಿನ ಮೂರ್ತಿಗಳ ಸ್ಥಾನಗಳನ್ನು ಹೇಳುತ್ತೇನೆ ಅವುಗಳ ತಾಯಿತಂದೆಗಳನ್ನೂ ಅವುಗಳ ತಾರತಮ್ಯವನ್ನೂ ಕೂಡ ಕ್ರಮವಾಗಿ ಹೇಳುತ್ತೇನೆ.

೧೯. ಆ ಮೂರ್ತಿಗಳ ಗೋತ್ರ, ವೇದ, ಕೆಲಸಗಳನ್ನೂ ಹೇಳುತ್ತೇನೆ. ಅವರ ಹೆಂಡತಿಯರ ವಿಷಯವನ್ನೂ ತಿಳಿದಮಟ್ಟಿಗೆ ಹೇಳುತ್ತೇನೆ.

೨೦. ವಿಷ್ಣುವಿನ ಇಪ್ಪತ್ತುನಾಲ್ಕು ಏಕಾದಶಿಗಳು, ಇಪ್ಪತ್ತನಾಲ್ಕು ದ್ವಾದಶಿಗಳು. ಇವುಗಳ ಪ್ರಭಾವವನ್ನೂ, ಗೋದಾವರಿಯ ಮಹಿಮೆಯನ್ನೂ ಶಂಖಚಕ್ರಾದಿಗಳ ಧಾರಣದ ರೀತಿಯನ್ನು ಹೇಳುತ್ತೇನೆ.

೨೧–೨೫. ಆ ಶಂಖಚಕ್ರಗಳನ್ನು ಬ್ರಾಹ್ಮಣರು ಹೇಗೆ ಧಾರಣೆ ಮಾಡಬೇಕು? ಎಂಬ ವಿಷಯವನ್ನು ಹೇಳುತ್ತೇನೆ. ಯಮುನೆಯ ಮಹಿಮೆ. ಗಿಲ್ಲಿಕಾ ತೀರ್ಥದ ಮಹಿಮೆ. ವೇತ್ರವತಿಯ ಮಹಿಮೆ. ಇವನ್ನು ನಿಮಗೆ ಹೇಳುತ್ತೇನೆ. ಗಿಲ್ಲಿತೀರ್ಥದಲ್ಲಿ ಹುಟ್ಟಿದ ಪುಣ್ಯ ಶಿಲಾಕ್ಷೇತ್ರದ ಮಹಿಮೆ. ಇವೆಲ್ಲವನ್ನೂ

ಏತತ್ಸರ್ವಂ ಪ್ರವಕ್ಷ್ಯಾಮಿ ಖಂಡೇಹ್ಯುತ್ತರಸಂಜ್ಞಿಕೇ ।
ಅರ್ಬುದೇಶ್ವರಮಾಹಾತ್ಮ್ಯಂ ತತ್ರ ತೀರ್ಥಾದಿಕಂ ಚ ಯತ್ ॥ ೨೩ ॥

ಸರಸ್ವತ್ಯಾಶ್ಚ ಮಾಹಾತ್ಮ್ಯಂ ಸಿದ್ಧಕ್ಷೇತ್ರಾದಿಕಂ ಚ ಯತ್ ।
ಪದ್ಮನಾಭಸಮುತ್ಪತ್ತಿಸ್ತುಲಸ್ಯಾಶ್ಚೈವ ಧಾರಣಂ ॥ ೨೪ ॥

ಗೋಪೀಚಂದನಮಾಹಾತ್ಮ್ಯಂ ಪಟ್ಟಪೂಜಾ ತಥೈವ ಕಂ ।
ನಿರಂಜನಸ್ಯಮಾಹಾತ್ಮ್ಯಂ ತಥಾ ವಿಜ್ಞಾನದರ್ಶನಂ ॥ ೨೫ ॥

ತತ್ರ ದೀಪಪ್ರದಾನಂ ಚ ಧೂಪದಾನಂ ವಿಶೇಷತಃ ।
ಕಾರ್ತೀಕಸ್ಯಾಥ ಮಾಹಾತ್ಮ್ಯಂ ಮಾಹಾತ್ಮ್ಯಂ ಮಾಘಜಂ ತಥಾ॥ ೨೬ ॥

ಸರ್ವೇಷಾಂ ಚ ವ್ರತಾನಾಂ ಚ ಮಾಹಾತ್ಮ್ಯಂ ವಿಧಿಪೂರ್ವಕಂ ।
ಶೃಣು ನಾರದ ವಕ್ಷ್ಯಾಮಿ ಜಗನ್ನಾಥಾಖ್ಯಮುತ್ತಮಂ ॥ ೨೭ ॥

ಯದ್ದೃಷ್ಟ್ವಾ ಮುಚ್ಯತೇ ಲೋಕೇ ಬ್ರಹ್ಮಹತ್ಯಾದಿ ಪಾತಕಾತ್ ।
ಯತ್ರ ನಕ್ತಂ ತಥಾ ಭುಕ್ತಂ ಪಾರಲೌಕಿಕದಾಯಕಂ ॥ ೨೮ ॥

---

ಈ ಉತ್ತರಖಂಡದಲ್ಲಿ ಹೇಳುತ್ತೇನೆ. ಅರ್ಬುದೇಶ್ವರ ಮಹಿಮೆ. ಅಲ್ಲಿರುವ ತೀರ್ಥಗಳ ಮಹಿಮೆ. ಸಿದ್ಧಕ್ಷೇತ್ರಗಳ ಮಹಿಮೆ, ಪದ್ಮನಾಭನ ಜನನ, ತುಲಸಿ ಧಾರಣೆಯ ವಿಧಾನ. ಗೋಪಿಚಂದನದ ಮಹಿಮೆ. ಪಟ್ಟಪೂಜೆ, ನಿರಂಜನ (ದೀಪ) ದ ಮಹಿಮೆ, ಜ್ಞಾನಗಳು, ದರ್ಶನಗಳ ವಿಷಯ ಇವೆಲ್ಲವನ್ನೂ ಹೇಳುತ್ತೇನೆ.

೨೬–೨೭. ದೀಪದಾನ, ಧೂಪದಾನ, ಕಾರ್ತಿಕದ ಮಹಿಮೆ, ಮಾಘ ಮಾಸದ ಮಹಿಮೆ, ಎಲ್ಲಾ ವ್ರತಗಳ ಮಹಿಮೆಗಳು, ಜಗನ್ನಾಥದ ಮಹಿಮೆ. ಇವೆಲ್ಲವನ್ನೂ ಹೇಳುತ್ತೇನೆ.

೨೮–೨೯. ಜಗನ್ನಾಥವನ್ನು ನೋಡಿದುದರಿಂದಲೇ ಜನರ ಬ್ರಹ್ಮಹತ್ಯಾದಿ ಪಾಪಗಳು ಹೋಗುತ್ತವೆ. ವೇದಶಾಸ್ತ್ರವನ್ನು ಓದಿದರೂ ಬ್ರಾಹ್ಮಣರೂ ಕೂಡ

ಬ್ರಾಹ್ಮಣಾ ಯತ್ರ ಭುಂಜಂತಿ ವೇದಶಾಸ್ತ್ರವಿಶಾರದಾಃ ।
ಅನ್ಯೇಷಾಂ ಚೈವ ಲೋಕಾನಾಂ ಕಾ ಕಥಾ ಚೈವ ಸುವ್ರತ ॥ ೨೯ ॥

ಪಂಚವಿಂಶತ್ಯತ್ರ ನಾಗಾ ನರ್ತಕ್ಯೋ ವಿವಿಧಾಸ್ತಥಾ ।
ಬ್ರಹ್ಮಹತ್ಯಾ ಬಾಲಹತ್ಯಾ ಗೋಹತ್ಯಾಪಿ ತಥೈವ ಚ ॥ ೩೦ ॥

ತಾಸ್ಸರ್ವಾ ವಿಲಯಂ ಯಾಂತಿ ಜಗನ್ನಾಥಸ್ಯ ದರ್ಶನಾತ್ ।
ಜಗನ್ನಾಥೇತ್ಯುಚ್ಚರನ್ ಜಂತುಃ ಮಹಾಪಾಪೈಃ ಪ್ರಮುಚ್ಯತೇ ॥ ೩೧ ॥

ವಿಷ್ಣೋಃ ಪೂಜನಕಂ ಪುಷ್ಪೈಃ ತಸ್ಯ ಮಾಹಾತ್ಮ್ಯಮುತ್ತಮಂ ।
ಪರ್ವತಾನಾಂ ವರ್ಣನಂ ಚ ದೇಶಾನಾಂ ವರ್ಣನಂ ತಥಾ ॥ ೩೨ ॥

ಗೋಪೂಜನಾದಿಮಾಹಾತ್ಮ್ಯಂ ಸಿದ್ಧಾನಾಂ ಚೈವ ಪೂಜನಂ ।
ಸಿಕ್ಥೇ ದತ್ತೇ ತು ಯತ್ಪುಣ್ಯಂ ತತ್ಸರ್ವಂ ಪ್ರವದಾಮ್ಯಹಂ ॥ ೩೩ ॥

---

ಅಲ್ಲಿರುವ ಸಿದ್ಧವೆಂಬ ಪ್ರಸಾದವನ್ನು ತಿಂದರೆ ಮುಕ್ತಿಯು ಬರುತ್ತದೆಂದು ತಿನ್ನುತ್ತಾರೆ. ಮಿಕ್ಕವರ ವಿಷಯವನ್ನು ಹೇಳತಕ್ಕದ್ದೇನಿರುತ್ತದೆ.

೩೦–೩೧. ಇಪ್ಪತ್ತೈದು ಬಗೆಯ ಹಾವುಗಳ ದೋಷಗಳೂ ನಾನಾಬಗೆಯ ನರ್ತಕಿಯರ ದೋಷಗಳೂ, ಬ್ರಹ್ಮಹತ್ಯೆ, ಬಾಲಹತ್ಯೆ, ಗೋಹತ್ಯೆ, ಇವೆಲ್ಲವೂ ಕೂಡ ಈ ಜಗನ್ನಾಥನ ದರ್ಶನದಿಂದ ನಾಶವಾಗುತ್ತವೆ. ಜಗನ್ನಾಥವೆಂದು ಉಚ್ಚರಿಸಿದುದರಿಂದಲೇ ಎಲ್ಲಾ ಪಾಪಗಳೂ ಹೋಗುತ್ತವೆ.

೩೨–೩೩. ಹೂವಿನಿಂದ ಆ ಜಗನ್ನಾಥನಲ್ಲಿ ವಿಷ್ಣುವನ್ನು ಪೂಜಿಸಿದರೆ ಬರುವ ಪುಣ್ಯದ ಮಹಿಮೆಯನ್ನು ತಿಳಿಸುತ್ತೇನೆ. ಪರ್ವತಗಳು, ದೇಶಗಳ ವರ್ಣನೆಗಳು, ಗಣಪೂಜೆಯ ಮಹಿಮೆ. ಸಿದ್ಧರ ಪೂಜೆ, ಅನ್ನದಾನದ ಪುಣ್ಯ ಇವನ್ನೂ ವಿಸ್ತಾರವಾಗಿ ಹೇಳುತ್ತೇನೆ. ಸಿಕ್ಥವೆಂದರೆ ಬಾಳೆಯ ಹಣ್ಣು ಮುಂತಾದು ವನ್ನು ಸೇರಿಸಿ ಮಾಡಿರುವ ಪ್ರಸಾದ. ದಾನಮಾಡಿದರೆ ಬರುವ ಪುಣ್ಯವನ್ನು ಹೇಳುತ್ತೇನೆ.

ಕದಳೀಗರ್ಭದಾನಂ ಚ ವೃಕ್ಷದಾನಂ ತತಃ ಪರಂ ।
ಅಶ್ವದಾನಂ ಹಸ್ತಿದಾನಂ ಜಪಮಾಹಾತ್ಮ್ಯಮುತ್ತಮಂ ॥ ೩೪ ॥

ಮಂತ್ರದೀಕ್ಷಾಗಮಶ್ಚೈವ ಗುರೋರ್ಲಕ್ಷಣಮೇವ ಚ ।
ಶಿಷ್ಯಸ್ಯ ಲಕ್ಷಣಂ ಪ್ರೋಕ್ತಂ ಯಥಾ ಪೌರಾಣಿಕಾ ವಿದುಃ ॥ ೩೫ ॥

ಚರಣೋದಕಮಾತ್ಮ್ಯಂ ಪಿತೃಶ್ರಾದ್ಧಾದಿಕಂ ಚ ಯತ್ ।
ಪಿತೃಕ್ಷಯಾಹೇ ದಾನಂ ಚ ನೀಲೋತ್ಸರ್ಗವಿಧಿಸ್ತತಃ ॥ ೩೬ ॥

ಗ್ರಹಣಂ ಚಂದ್ರಸೂರ್ಯಸ್ಯ ತತ್ರ ದಾನಂ ಚ ಯದ್ಭವೇತ್ ।
ಸಾಲಗ್ರಾಮಸ್ಯ ಮಾಹಾತ್ಮ್ಯಂ ಮಾಹಾತ್ಮ್ಯಂ ಮಾಲ್ಯಗಂಧಯೋಃ ॥೩೭॥

ದಶಮ್ಯೈಕಾದಶೀವೇಧಂ ದ್ವಾದಶೀಹರಿವಾಸರಂ ।
ತೇಷಾಂ ಚೈವ ತು ಮಾಹಾತ್ಮ್ಯಂ ರುದ್ರನಾಮಾದಿಕಂ ಚ ಯತ್ ॥೩೮॥

---

೩೪-೩೫. ಕದಳೀ ಗರ್ಭವೆಂಬ ದಾನ, ವೃಕ್ಷದಾನ, ಕುದುರೆದಾನ, ಆನೆದಾನ, ಜಪದ ಮಹಿಮೆ, ಮಂತ್ರದೀಕ್ಷೆ, ಆಗಮದೀಕ್ಷೆ, ಗುರುವಿನ ಲಕ್ಷಣ, ಶಿಷ್ಯನ ಲಕ್ಷಣ ಇವನ್ನು ಪೂರ್ವಿಕರು ತಿಳಿದಿರುವಂತೆ ಹೇಳುತ್ತೇನೆ.

೩೬. ಗುರುಪಾದೋದಕದ ಮಹಿಮೆ. ಪಿತೃಶ್ರಾದ್ಧದ ವಿಷಯ. ಪಿತೃಗಳು ಸತ್ತದಿನದಲ್ಲಿ ದಾನಮಾಡಿದರೆ ಅದರ ಫಲ, ನೀಲವೆಂಬ ಬಸವನನ್ನು ಬಿಡುವುದು. ಇವೆಲ್ಲವನ್ನೂ ವಿಸ್ತರಿಸುತ್ತೇನೆ.

೩೭. ಚಂದ್ರ ಸೂರ್ಯರ ಗ್ರಹಣದ ವಿಷಯ. ಆಗ ಮಾಡಬೇಕಾದ ದಾನಗಳು. ಸಾಲಗ್ರಾಮದ ಮಹಿಮೆ. ಹೂ ಗಂಧಗಳ ಮಹಿಮೆಯನ್ನು ವಿವರಿಸುತ್ತೇನೆ.

೩೮. ಏಕಾದಶಿಗೆ ದಶಮಿಯ ವೇಧೆ, ದ್ವಾದಶಿಯ ದಿವಸ ಹರಿವಾಸರ ಬರುವುದು. ಆ ದಿನಗಳ ಮಹಿಮೆ. ಅವಕ್ಕೆ ರುದ್ರವೆಂಬ ಹೆಸರು ಮುಂತಾದುವನ್ನು ಹೇಳುತ್ತೇನೆ.

ಮಧುರಾಯಾಶ್ಚ ಮಾಹಾತ್ಮ್ಯಂ ಕುರುಕ್ಷೇತ್ರಾದಿಕಂ ತಥಾ ।
ಸೇತುಬಂಧಸ್ಯ ಚಾಖ್ಯಾನಂ ಶ್ರೀರಾಮೇಶ್ವರಜಂ ತಥಾ ॥ ೩೯ ॥

ತ್ರ್ಯಂಬಕಸ್ಯ ಚ ಮಾಹಾತ್ಮ್ಯಂ ಪಂಚವಟ್ಯಾಶ್ಚ ಯತ್ಫಲಂ ।
ದಂಡಕಾರಣ್ಯಮಾಹಾತ್ಮ್ಯಂ ಶೃಣು ಚಾಡವಸತ್ತಮ ॥ ೪೦ ॥

ದಂಡಕಾರಣ್ಯಮಾಹಾತ್ಮ್ಯಂ ನೃಸಿಂಹೋತ್ಪತ್ತಿಕಾರಣಂ ।
ಗೀತಾಯಾಶ್ಚೈವ ಮಾಹಾತ್ಮ್ಯಂ ತಥಾ ಭಾಗವತಸ್ಯ ಚ ॥ ೪೧ ॥

ಕಾಳಿಂದ್ಯಾಶ್ಚೈವ ಮಾಹಾತ್ಮ್ಯಮಿಂದ್ರಪ್ರಸ್ಥಸ್ಯ ವರ್ಣನಂ ।
ರುಕ್ಮಾಂಗದಚರಿತ್ರಂ ತು ಮಹಿಮಾ ವೈಷ್ಣವಸ್ಯ ಚ ॥ ೪೨ ॥

ವೈಷ್ಣವೇ ಹ್ಯೇಕಭುಕ್ತೇ ತು ಶೃಣುಚಾಡವಸತ್ತಮ ।
ಸಸಾಗರಾಂ ಚ ಪೃಥಿವೀಂ ದತ್ವಾ ಚೈವ ಚ ಯತ್ಫಲಂ ॥ ೪೩ ॥

ತತ್ಫಲಂ ಸಮವಾಪ್ನೋತಿ ಭುಂಕ್ತೇ ಹ್ಯೇಕೇ ತು ವೈಷ್ಣವೇ ।
ಸಾತ್ತ್ವಿಕಾಸ್ಸತ್ತ್ವಸಂಪನ್ನಾ ರಾಕ್ಷಸಾಃ ಕಾಮುಕಾ ಸ್ಮೃತಾಃ ॥ ೪೪ ॥

---

೩೯–೪೦. ಮಥುರೆಯ ಮಹಿಮೆ, ಕುರುಕ್ಷೇತ್ರದ ಮಹಿಮೆ. ಸೇತು ಬಂಧದ ಕಥೆ. ರಾಮೇಶ್ವರದ ಕಥೆ. ತ್ರ್ಯಂಬಕೇಶ್ವರದ ಕಥೆ. ಪಂಚವಟಿಯ ಫಲ. ದಂಡಕಾರಣ್ಯದ ಮಹಿಮೆ. ಇವೆಲ್ಲವನ್ನೂ ಹೇಳುತ್ತೇನೆ.

೪೧–೪೨. ದಂಡಕಾರಣ್ಯದ ಮಹಿಮೆ. ನರಸಿಂಹನ ಉತ್ಪತ್ತಿ. ಗೀತೆಯ ಮಹಿಮೆ. ಭಾಗವತದ ಮಹಿಮೆ. ಯಮುನೆಯ ಮಹಿಮೆ. ಇಂದ್ರ ಪ್ರಸ್ಥದ ವರ್ಣನೆ. ರುಕ್ಮಾಂಗದನ ಚರಿತ್ರೆ. ವೈಷ್ಣವನ ಮಹಿಮೆ. ಇವೆಲ್ಲವನ್ನೂ ಹೇಳುತ್ತೇನೆ.

೪೩–೪೭. ಎಲೈ ಬ್ರಾಹ್ಮಣನೆ! ಒಬ್ಬ ವೈಷ್ಣವನು ಊಟಮಾಡಿದರೆ ಬರುವ ಫಲವನ್ನು ಕೇಳು. ಸಮುದ್ರ ಸಹಿತವಾದ ಭೂಮಿಯನ್ನು ದಾನಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಆ ಒಬ್ಬ ವೈಷ್ಣವನಿಗೆ ಭೋಜನ ಮಾಡಿಸಿದರೆ ಬರುತ್ತದೆ. ಸತ್ತ್ವ ಗುಣದಿಂದ ಕೂಡಿದವರು ಸಾತ್ತ್ವಿಕರೆಂದೂ

ತಾಮಸಾ ಅಧಮಾ ಪ್ರೋಕ್ತಾ ವೈಷ್ಣವಾನಾಂ ತು ಲಕ್ಷಣಂ ।
ಬ್ರಾಹ್ಮಣಾ ವೈಷ್ಣವಾ ಯೇ ತು ವೇದಧರ್ಮಪರಾಯಣಾಃ ॥ ೪೫ ॥

ತನ್ಮಾಹಾತ್ಮ್ಯಂ ಪ್ರವಕ್ಷ್ಯಾಮಿ ಯಥೋಕ್ತಂ ಚೈವ ನಾರದ ।
ವಿಷ್ಣುನಿಂದಾರತಾ ಯೇ ಚ ವಸುಲೋಭೇನ ಸತ್ತಮ ॥ ೪೬ ॥

ತೇಷಾಂ ಪಾಪಂ ತು ವಕ್ಷ್ಯಾಮಿ ಸಾಂಪ್ರತಂ ಋಷಿಸತ್ತಮ ।
ಜ್ವಾಲಾಮುಖ್ಯಾಸ್ತಥಾಖ್ಯಾನಂ ಹಿಮಶೈಲೇಕ್ಷಣಂ ತಥಾ ॥ ೪೭ ॥

ಬ್ರಹ್ಮೋತ್ಪತ್ತಿಸ್ತು ವೈ ಯತ್ರ ತತ್ ಪ್ರದೇಶಂ ವದಾಮ್ಯಹಂ ।
ಕಾಯಸ್ಥಾನಾಂ ಸಮುತ್ಪತ್ತಿಂ ಗಯಾವ್ಯಾಖ್ಯಾನಮೇವ ಚ ॥ ೪೮ ॥

ಗದಾಧರಸ್ವರೂಪಂ ಚ ಫಲ್ಗುವರ್ಣನಮೇವ ಚ ।
ಏತೇಷಾಂ ಚೈವ ಮಾಹಾತ್ಮ್ಯಂ ಪಾದ್ಮೇ ದೃಷ್ಟಂ ತಥಾ ಶ್ರುತಂ ॥ ೪೯ ॥

ಮಹಾಬೋಧಸ್ವರೂಪಂ ಚ ಸಕಲ್ಕೇರ್ಶ್ಯಶ ಏವ ಚ ।
ರಾಮಗಯಾಯಾ ಮಾಹಾತ್ಮ್ಯಂ ತಥಾ ಪ್ರೇತಶಿಲಾಭವಂ ॥ ೫೦ ॥

---

ಕಾಮುಕರು ರಾಕ್ಷಸರೆಂದೂ, ತಮೋಗುಣದವರು ಅಧಮರೆಂದೂ ವೈಷ್ಣವರ ಲಕ್ಷಣವು. ವೇದ ಧರ್ಮದಲ್ಲಿ ಆಸಕ್ತರಾಗಿ ಬ್ರಾಹ್ಮಣರಾಗಿ ವಿಷ್ಣುಭಕ್ತರೂ ಆಗಿದ್ದರೆ ಅವರ ಮಹಿಮೆಯನ್ನು ಹೇಳುತ್ತೇನೆ. ಕೇಳು. ಹಣದ ಆಸೆಯಿಂದ ವಿಷ್ಣುವಿನ ನಿಂದೆಯನ್ನು ಮಾಡಿದರೆ ಅವರಿಗೆ ಬರುವ ಪಾಪವನ್ನೂ ಹೇಳುತ್ತೇನೆ. ಜ್ವಾಲಾಮುಖಿಯ ವರ್ಣನೆಯನ್ನೂ ಹಿಮವತ್ಪರ್ವತದ ದರ್ಶನದ ಫಲವನ್ನೂ ಹೇಳುತ್ತೇನೆ.

೪೮. ಬ್ರಹ್ಮನು ಹುಟ್ಟಿದ ಜಾಗವನ್ನೂ ಅವನ ದೇಹದಲ್ಲಿ ಹುಟ್ಟಿದವರನ್ನೂ ಹುಟ್ಟಿದ ಬಗೆಯನ್ನೂ ಹೇಳುತ್ತೇನೆ.

೪೯. ಗದಾಧರಸ್ವಾಮಿಯ ಸ್ವರೂಪ, ಫಲ್ಗುವಿನ ವರ್ಣನೆ. ಇವುಗಳ ಮಹಿಮೆಗಳನ್ನು ಕಂಡಿರುವಂತೆಯೂ, ಕೇಳಿರುವಂತೆಯೂ ಈ ಪದ್ಮಪುರಾಣದಲ್ಲಿ ಹೇಳಿದೆ.

೫೦–೫೩. ಬುದ್ಧನ ಸ್ವರೂಪ, ಕಲ್ಕ್ಯವತಾರದ ಮಹಿಮೆ. ರಾಮಗಯೆಯ ಮಹಿಮೆ. ಪ್ರೇತಶಿಲೆಯ ಉತ್ಪತ್ತಿ, ಬ್ರಹ್ಮನ ಕಥೆ, ಬ್ರಹ್ಮಶಿಲೆಯ ಕಥೆ.

ಬ್ರಹ್ಮಣಶ್ಚ ತಥಾಖ್ಯಾನಂ ಶಿಲಾಖ್ಯಾನಂ ವದಾಮ್ಯಹಂ ।
ಬ್ರಹ್ಮಯೋನೇಸ್ತಥಾಖ್ಯಾನಮಕ್ಷಯಾಖ್ಯವಟಸ್ಯ ಚ　　　　॥ ೫೧ ॥

ಶ್ರಾದ್ಧಂ ತತ್ರ ಮಹತ್ಪುಣ್ಯಂ ತತ್ಸರ್ವಂ ತು ವದಾಮ್ಯಹಂ ।
ಮಹೇಶ್ವರೇ ಕೃತಾಂ ಭಕ್ತಿಂ ವಿಷ್ಣುನಾ ಚ ಮಹಾತ್ಮನಾ　　　　॥ ೫೨ ॥

ಅದ್ಯಾಪಿ ಕಾಶ್ಯಾಂ ಜಯತಿ ಮಹಾರುದ್ರೋ ಹ್ಯನಾಮಯಃ ।
ಮಾಹಾತ್ಮ್ಯಂ ಚ ತತೋ ವಕ್ಷ್ಯೇಸಾಗರಸ್ಯ ಹಿ ನಾರದ　　　　॥ ೫೩ ॥

ತಿಲತರ್ಪಣಜಂ ಪುಣ್ಯಂ ಯವಜಂ ಪುಣ್ಯಮೇವ ಚ ।
ತುಳಸೀದಳಸಂಯುಕ್ತಂ ತರ್ಪಣಂ ದೇವಜಂ ತಥಾ　　　　॥ ೫೪ ॥

ತನ್ಮಾಹಾತ್ಮ್ಯಂ ಪ್ರವಕ್ಷ್ಯಾಮಿ ಯಥೋಕ್ತಂ ಬ್ರಹ್ಮಣಾ ಮಮ ।
ಶಂಖನಾದಸ್ಯ ಮಾಹಾತ್ಮ್ಯಂ ಪುಣ್ಯಂ ಚಾಸಂಖ್ಯಸಂಜ್ಞಕಂ　　　　॥ ೫೫ ॥

ರವೇರ್ವಾರಸ್ಯ ಮಾಹಾತ್ಮ್ಯಂ ಯೋಗಸ್ಯ ವಿಷ್ಣುಸಂಜ್ಞಕಃ ।
ವೈಧೃತೇರ್ಮಹಿಮಾಚೈವ ವ್ಯತೀಪಾತಸ್ಯ ವೈ ತಥಾ　　　　॥ ೫೬ ॥

ಏತತ್ಸರ್ವಂ ಪ್ರವಕ್ಷ್ಯಾಮಿ ಯಥೋಕ್ತಂ ಚೈವ ನಾರದ ।
ಅನ್ನದಾನಂ ವಸ್ತ್ರದಾನಂ ಭೂಮಿದಾನಂ ತಥೈವ ಚ　　　　॥ ೫೭ ॥

---

ಬ್ರಹ್ಮಯೋನಿಯ ಕಥೆ. ಅಕ್ಷಯ ವಟದ ಮಹಿಮೆ. ಅಲ್ಲಿ ಶ್ರಾದ್ಧಮಾಡಿದರೆ ಬರುವ ಪುಣ್ಯ ಇವೆಲ್ಲವನ್ನೂ ಹೇಳುತ್ತೇನೆ. ವಿಷ್ಣುವು ಮಹೇಶ್ವರನಲ್ಲಿ ಮಾಡಿದ ಭಕ್ತಿಯನ್ನು ವಿವರಿಸುತ್ತೇನೆ. ಈಗಲೂ ಕೂಡ ಆ ಮಹಾರುದ್ರನು ಕಾಶಿಯಲ್ಲಿರುವನು. ಕಾಶಿಯ ಮಹಿಮೆ. ಸಮುದ್ರದ ಮಹಿಮೆಗಳನ್ನು ವಿವರಿಸುತ್ತೇನೆ.

೫೪–೫೮. ಎಳ್ಳಿನ ತರ್ಪಣದ ಪುಣ್ಯ, ಯವ (ಅಕ್ಕಿ) ದ ತರ್ಪಣದ ಪುಣ್ಯ. ಅದರಲ್ಲಿ ತುಳಸೀದಳ ಸೇರಿದ್ದರೆ ಬರುವ ಪುಣ್ಯ. ದೇವತೆಗಳಿಗೆ ಕೊಡುವ ತರ್ಪಣದ ಪುಣ್ಯ. ಅದರ ಮಹಿಮೆಗಳನ್ನು ಬ್ರಹ್ಮನು ನನಗೆ ಹೇಳಿರುವಂತೆ ನಿಮಗೆ ಹೇಳುತ್ತೇನೆ. ಶಂಖನಾದದ ಮಹಿಮೆ. ಅಸಂಖ್ಯ ಹೆಸರಿನ ಪುಣ್ಯ. ರವಿವಾರದ ಮಹಿಮೆ. ವಿಷ್ಣುಯೋಗದ ಮಹಿಮೆ. ವೈಧೃತಿ, ವ್ಯತೀ ಪಾತಗಳ ಮಹಿಮೆ, ಇವೆಲ್ಲವನ್ನೂ ಕೂಡ ಹೇಳುತ್ತೇನೆ. ಅನ್ನದಾನ, ವಸ್ತ್ರದಾನ, ಭೂಮಿದಾನ,

ಶಯ್ಯಾದಾನಂ ಚ ಗೋದಾನಂ ತಥಾ ವೃಷಭಮೇವ ಚ ।
ಜನ್ಮಾಷ್ಟಮ್ಯಾಶ್ಚ ಮಾಹಾತ್ಮ್ಯಂ ಮತ್ಸ್ಯಮಾಹಾತ್ಮ್ಯಮೇವ ಚ ॥ ೫೮ ॥

ಕೂರ್ಮಮಾಹಾತ್ಮ್ಯಮುತ್ಪ್ರೋಕ್ತಂ ವಾರಾಹಸ್ಯ ತಥೈವ ಚ ।
ಮಾಹಾತ್ಮ್ಯಂ ಚ ಗವಾದೀನಾಂ ದಾನಾನಾಂ ಪ್ರವದಾಮ್ಯಹಂ ॥ ೫೯ ॥

ಮಹದಾಖ್ಯಾನೇ ಚ ಮಾದೀನಿ ದಾನಾನಿ ಪ್ರವದಾಮ್ಯಹಂ ।
ಪ್ರಹ್ಲಾದಮುಖ್ಯಾ ಭಕ್ತಾ ಯೇ ಯೇ ಕೇಚಿದ್ಭುವಿ ವಿಶ್ರುತಾಃ ॥ ೬೦ ॥

ತನ್ಮಾಹಾತ್ಮ್ಯಂ ತತೋ ವಕ್ಷ್ಯೇ ಶೃಣು ದೇವರ್ಷಿಸತ್ತಮ ।
ಜಾಗರೇಣೈವ ಯತ್ಪುಣ್ಯಂ ದೀಪದಾನಕೃತೇ ಚ ಯತ್ ॥ ೬೧ ॥

ಪ್ರಹರೇಷು ಪೃಥಕ್ಪೂಜಾಫಲಂ ದೇವರ್ಷಿಸತ್ತಮ ।
ಪರಶುರಾಮಸ್ಯಾಖ್ಯಾನಂ ರೇಣುಕಾಯಾ ವಧಸ್ತಥಾ ॥ ೬೨ ॥

ಬ್ರಾಹ್ಮಣಾನಾಂ ಭೂಮಿದಾನಂ ರಾಮೇಣೈವ ಚ ಯತ್ಕೃತಂ ।
ರಾಮಸ್ಯಾಶ್ರಮಜಂ ಪುಣ್ಯಂ ವದಾಮ್ಯಹಮಶೇಷತಃ ॥ ೬೩ ॥

---

ಶಯ್ಯಾದಾನ, ಗೋದಾನ, ವೃಷಭದಾನಗಳ ಮಹಿಮೆ. ಜನ್ಮಾಷ್ಟಮಿಯ ಮಹಿಮೆ. ಮತ್ಸ್ಯ ಮಹಿಮೆ ಇವನ್ನು ಹೇಳುತ್ತೇನೆ.

೫೯. ಕೂರ್ಮಪುರಾಣದ ಮಹಿಮೆ. ವರಾಹ ಪುರಾಣದ ಮಹಿಮೆ. ಗೋದಾನದ ಮಹಿಮೆ, ದಾನಗಳ ಮಹಿಮೆ, ಇವುಗಳನ್ನು ಹೇಳುತ್ತೇನೆ.

೬೦–೬೩. ಮಹಾದಾನಗಳ ಮಹಿಮೆಯನ್ನೂ ಅಮಾವಾಸ್ಯೆಯ ದಾನಗಳನ್ನೂಹೇಳುತ್ತೇನೆ. ಪ್ರಹ್ಲಾದನೇ ಮುಂತಾದ ಪ್ರಸಿದ್ಧರಾದ ಭಕ್ತರುಗಳ ಮಹಿಮೆಯನ್ನು ಹೇಳುತ್ತೇನೆ. ಕೇಳು. ಜಾಗರಣೆ ಮಾಡಿದರೆ ಬರುವ ಪುಣ್ಯ, ದೀಪ ದಾನದ ಪುಣ್ಯ, ಜಾವ ಜಾವಕ್ಕೂ ಮಾಡುವ ಪೂಜೆಗಳ ಫಲವನ್ನೂ ಹೇಳುತ್ತೇನೆ. ಪರಶುರಾಮನ ಚರಿತ್ರೆ, ರೇಣುಕೆಯ ವಧೆ, ಪರಶುರಾಮನು ಬ್ರಾಹ್ಮಣರಿಗೆ ಭೂಮಿಯನ್ನು ದಾನಮಾಡಿದುದು. ರಾಮಾಶ್ರಮದ ಪುಣ್ಯ, ಇವೆಲ್ಲವನ್ನೂ ಹೇಳುತ್ತೇನೆ.

ನರ್ಮದಾಯಾಸ್ತಥಾಖ್ಯಾನಂ ಪುಣ್ಯಂ ಪೂಜಾನಯೋಃಸ್ತಥಾ ।
ದಾನಂ ವೇದಪುರಾಣಾನಾಮಾಶ್ರಮಾಣಾಂ ನಿರೂಪಣಂ ॥ ೬೪ ॥

ಹಿರಣ್ಯದಾನಂ ಪುಣ್ಯಂ ಚ ಬ್ರಹ್ಮಾಂಡಾದಾನಮೇವ ಚ ।
ಪದ್ಮಪುರಾಣದಾನಂ ಚ ಖಂಡಾನಾಂ ವ್ಯಕ್ತಯಸ್ತಥಾ ॥ ೬೫ ॥

ಪ್ರಥಮಂ ಸೃಷ್ಟಿಖಂಡಂ ಚ ದ್ವಿತೀಯಂ ಭೂಮಿಖಂಡಕಂ ।
ಪಾತಾಳಂ ಚ ತೃತೀಯಂ ಸ್ಯಾತ್ ಚತುರ್ಥಂ ಪುಷ್ಕರಂ ತಥಾ ॥ ೬೬ ॥

ಉತ್ತರಂ ಪಂಚಮಂ ಪ್ರೋಕ್ತಂ ಖಂಡಾನ್ಯಸ್ಯ ಕ್ರಮೇಣ ವೈ ।
ಏತತ್ಪದ್ಮಪುರಾಣಂ ತು ವ್ಯಾಸೇನ ಚ ಮಹಾತ್ಮನಾ ॥ ೬೭ ॥

ಕೃತಂ ಲೋಕಹಿತಾರ್ಥಾಯ ಬ್ರಾಹ್ಮಣಶ್ರೇಯಸೇ ತಥಾ ।
ಶೂದ್ರಾಣಾಂ ಪುಣ್ಯಜನನಂ ತೀವ್ರದಾರಿದ್ರ್ಯನಾಶನಂ ॥ ೬೮ ॥

---

೬೪–೬೫. ನರ್ಮದೆಯ ಕಥೆ. ಇದರ ಪೂಜೆ. ವೇದ ಪುರಾಣಗಳ ಪುಸ್ತಕಗಳ ದಾನ. ಆಶ್ರಮಗಳ ವರ್ಣನೆ. ಹಿರಣ್ಯದಾನ, ಬ್ರಹ್ಮಾಂಡ ದಾನದ ಪುಣ್ಯ. ಪದ್ಮಪುರಾಣದ ದಾನಗಳ ಪುಣ್ಯಗಳನ್ನು ಹೇಳುತ್ತೇನೆ. ಪದ್ಮಪುರಾಣದ ಭಾಗಗಳನ್ನೂ ಹೇಳುತ್ತೇನೆ.

೬೬–೬೮. ಮೊದಲನೆಯದು ಸೃಷ್ಟಿಖಂಡ ಬ್ರಹ್ಮ ಖಂಡಗಳು, ಎರಡನೆಯದು ಭೂಮಿಖಂಡ, ಮೂರನೆಯದು ಪಾತಾಳಖಂಡ, ನಾಲ್ಕನೆಯದು ಪುಷ್ಕರಖಂಡ, ಐದನೆಯದು ಉತ್ತರ ಖಂಡ, ಎಂಬದಾಗಿ ಇದರ ಭಾಗಗಳ ಕ್ರಮವಾದ ವಿವರಣೆ. ಈ ಪದ್ಮಪುರಾಣವನ್ನು ವ್ಯಾಸನು ರಚಿಸಿದನು. ಇದು ಲೋಕಹಿತವನ್ನುಂಟುಮಾಡುತ್ತದೆ. ಬ್ರಾಹ್ಮಣರಿಗೆ ಶ್ರೇಯಸ್ಸನ್ನುಂಟುಮಾಡುತ್ತದೆ. ಶೂದ್ರರಿಗೆ ಪುಣ್ಯವನ್ನುಂಟುಮಾಡುವುದಲ್ಲದೆ ಎಲ್ಲರಿಗೂ ದಾರಿದ್ರ್ಯವನ್ನು ನಾಶ ಮಾಡುತ್ತದೆ.

ಮೋಕ್ಷದಂ ಸುಹೃದಾಂ ಚಾರು ಕಲ್ಯಾಣಪ್ರದಮವ್ಯಯಂ ।
ಶ್ರುತ್ವಾ ದಾನಂ ತಥಾ ಕುರ್ಯಾತ್ ವಿಧಿನಾ ತತ್ರ ನಾರದ ॥ ೬೯ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಮಹೇಶ್ವರ ನಾರದ
ಸಂವಾದೇ ಬೀಜಸಮುಚ್ಚಯೋ ನಾಮ
ಪ್ರಥಮೋಽಧ್ಯಾಯಃ

---

೬೯. ಸತ್ಪುರುಷರಿಗೆ ಮೋಕ್ಷವನ್ನು ಕೊಡುತ್ತದೆ. ಮಂಗಳವನ್ನುಂಟು ಮಾಡುತ್ತದೆ. ಶಾಶ್ವತವಾದುದು. ಇದನ್ನು ಕೇಳಿ ಶಾಸ್ತ್ರದ ರೀತಿಯಂತೆ ದಾನಗಳನ್ನು ಮಾಡಬೇಕು.

ಇಂತು ಪದ್ಮಮಹಾಪುರಾಣದ ಉತ್ತರ ಖಂಡದ ಮಹೇಶ್ವರ ನಾರದರ
ಸಂವಾದದಲ್ಲಿ ಬೀಜಸಮುಚ್ಚಯ (ವಿಷಯ ಸಂಗ್ರಹನಿರೂಪಣ)
ಎಂಬ ಮೊದಲನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿತೀಯೋಽಧ್ಯಾಯಃ ॥



॥ ಮಹೇಶ್ವರ ಉವಾಚ ॥

ಏಕಲಕ್ಷಂ ಪಂಚವಿಂಶತ್ಸಹಸ್ರಾಃ ಪರ್ವತಾಸ್ತಥಾ ।
ತೇಷಾಂ ಮಧ್ಯೇ ಮಹತ್ಪುಣ್ಯಂ ಬದರಿಕಾಶ್ರಮಮುತ್ತಮಂ ॥ ೧ ॥

ನರನಾರಾಯಣೋ ದೇವೋ ಯತ್ರ ತಿಷ್ಠತಿ ನಾರದ ।
ತಸ್ಯ ಸ್ವರೂಪಂ ತೇಜಶ್ಚ ವಕ್ಷ್ಯಾಮೀಹ ಚ ಸಾಂಪ್ರತಂ ॥ ೨ ॥

ಹಿಮಪರ್ವತಶೃಂಗೇ ಚ ಕೃಷ್ಣಾ ಕಾರತಯಾ ದ್ವಿಜ ।
ಪುರುಷೌ ತತ್ರ ವರ್ತೇತೇ ನರನಾರಾಯಣಾವುಭೌ ॥ ೩ ॥

---

## ಎರಡನೆಯ ಅಧ್ಯಾಯವು

೧. ಮಹೇಶ್ವರನು ಹೇಳಿದನು– ಒಂದು ಲಕ್ಷದ ಇಪ್ಪತ್ತೈದು ಸಾವಿರ ಪರ್ವತಗಳಿವೆ. ಇವುಗಳ ಮಧ್ಯದಲ್ಲಿ ಪುಣ್ಯಪ್ರದವಾದ ಬದರಿಕಾಶ್ರಮವು ಇರುವುದು.

೨. ನರನೂ ನಾರಾಯಣನೂ ಅಲ್ಲಿದ್ದಾರೆ. ಅವರ ಸ್ವರೂಪವನ್ನೂ ತೇಜಸ್ಸನ್ನೂ ಈಗ ಹೇಳುತ್ತೇನೆ.

೩. ಹಿಮವತ್ಪರ್ವತದ ಶಿಖರದಲ್ಲಿ ಕಪ್ಪಗಿರುವ ಇಬ್ಬರು ಗಂಡಸರಿದ್ದಾರೆ. ಅವರೇ ನರನಾರಾಯಣರು.

ಶ್ವೇತ ಏಕಸ್ತು ಪುರುಷಃ ಕೃಷ್ಣೋ ಹ್ಯೇಕಸ್ತತಃ ಪುನಃ ।
ತೇನ ಮಾರ್ಗೇಣ ಯೇ ಯಾಂತಿ ಹಿಮಾಚಲಕೃತೋದ್ಯಮಾಃ ॥ ೪ ॥

ಪಿಂಗಳಶ್ಶ್ವೇತವರ್ಣಶ್ಚ ಜಟಾಧಾರೀ ಮಹಾನ್ಪ್ರಭುಃ ।
ಕೃಷ್ಣೋ ನಾರಾಯಣೋ ಹ್ಯೇಷಃ ಜಗದಾದಿಮಹಾಪ್ರಭುಃ ॥ ೫ ॥

ಚತುರ್ಬಾಹುರ್ಮಹಾಶ್ರೀರ್ಮಾ ವ್ಯಕ್ತೋಽವ್ಯಕ್ತಸ್ಸನಾತನಃ ।
ಉತ್ತರಾಯಣೇ ಮಹಾಪೂಜಾ ಜಾಯತೇ ತತ್ರ ಸುವ್ರತ ॥ ೬ ॥

ಷಾಣ್ಮಾಸಾದಿಕಪರ್ಯಂತಂ ಪೂಜಾ ನೈವ ಚ ಜಾಯತೇ ।
ಹಿಮವ್ಯಾಪ್ತಂ ತದಾ ಜಾತಂ ಯಾವದ್ವೈ ದಕ್ಷಿಣಂ ಭವೇತ್ ॥ ೭ ॥

ಅತ ಏತಾದೃಶೋ ದೇವೋ ನ ಭೂತೋ ನ ಭವಿಷ್ಯತಿ ।
ತತ್ರ ದೇವಾ ವಸಂತೀಹ ಋಷೀಣಾಂ ಚಾಶ್ರಮಾಸ್ತಥಾ ॥ ೮ ॥

---

೪. ಹಿಮವತ್ಪರ್ವತವನ್ನು ಹತ್ತಿ ಆ ದಾರಿಯಲ್ಲಿ ಹೋಗುತ್ತ ಹತ್ತಿರಕ್ಕೆ ಹೋದರೆ ಒಬ್ಬನು ಬೆಳ್ಳಗೂ, ಮತ್ತೊಬ್ಬನು ಕಪ್ಪಗೂ ಕಾಣುತ್ತಾರೆ.

೫. ಬೆಳ್ಳಗಿರುವ ಒಬ್ಬನು ಹೊಂಬಣ್ಣದ ಜಟೆಗಳನ್ನು ಧರಿಸಿರುವನು. ಕಪ್ಪಗಿರುವವನೇ ಜಗತ್ತಿಗೆ ಆದಿಭೂತನಾದ ನಾರಾಯಣ ಸ್ವಾಮಿಯು.

೬. ಎಲ್ಲರಿಗೂ ಕಾಣಿಸುವವನೂ ಸೂಕ್ಷ್ಮರೂಪನೂ ಸನಾತನನೂ ಆದ ಆ ಸ್ವಾಮಿಯು ನಾಲ್ಕು ತೋಳುಗಳಿಂದ ಪ್ರಕಾಶಿಸುತ್ತಿರುವನು. ಅಲ್ಲಿ ಉತ್ತರಾಯಣದಲ್ಲಿ ಅವನಿಗೆ ಮಹಾಪೂಜೆಯು ನಡೆಯುವುದು.

೭. ದಕ್ಷಿಣಾಯಣದಲ್ಲಿ ಹಿಮವು ಹೆಚ್ಚಾಗಿರುವುದರಿಂದ ಆರುತಿಂಗಳ ವರೆಗೂ ಅಲ್ಲಿ ಪೂಜೆಯು ನಡೆಯುವುದಿಲ್ಲ.

೮. ಇಲ್ಲಿರುವಂತಹ ದೇವರು ಮತ್ತೆಲ್ಲಿಯೂ ಇಲ್ಲ. ಹಿಂದೆ ಇರಲೂ ಇಲ್ಲ. ಮುಂದೆ ಇರುವಂತೆಯೂ ಇಲ್ಲ. ಇದರಲ್ಲಿ ಸಂದೇಹವಿಲ್ಲ. ಅಲ್ಲಿ ದೇವತೆಗಳು ವಾಸಮಾಡುತ್ತಾರೆ. ಅನೇಕವಾದ ಋಷಿಗಳ ಆಶ್ರಮಗಳೂ ಇವೆ.

ಅಗ್ನಿಹೋತ್ರಾಣಿ ವೇದಾಶ್ಚ ಧ್ವನಿಃ ಪ್ರಶ್ರೂಯತೇ ಸದಾ ।
ತಸ್ಯ ವೈ ದರ್ಶನಂ ಕಾರ್ಯಂ ಕೋಟಿಹತ್ಯಾ ವಿನಾಶನಂ ॥ ೯ ॥

ಅಲಕನಂದಾ ಯತ್ರ ಗಂಗಾ ತತ್ರ ಸ್ನಾನಂ ಸಮಾಚರೇತ್ ।
ಕೃತ್ವಾ ಸ್ನಾನಂ ತು ವೈ ತತ್ರ ಮಹಾಪಾಪಾತ್ಪ್ರಮುಚ್ಯತೇ ॥ ೧೦ ॥

ಯತ್ರ ವಿಶ್ವೇಶ್ವರೋ ದೇವಸ್ತಿಷ್ಠತ್ಯೇವ ನ ಸಂಶಯಃ ।
ಏಕಸ್ಮಿನ್ವತ್ಸರೇ ತತ್ರ ಸುತಪಸ್ತಪ್ತವಾನಹಂ ॥ ೧೧ ॥

ತದಾ ನಾರಾಯಣೋ ದೇವೋ ಭಕ್ತಾನಾಂ ಹಿ ಕೃಪಾಕರಃ ।
ಅವ್ಯಯಃ ಪುರುಷಸ್ಸಾಕ್ಷಾತ್ ಈಶ್ವರೋ ಗರುಡಧ್ವಜಃ ॥ ೧೨ ॥

ಸುಪ್ರಸನ್ನೋಽಬ್ರವೀನ್ಮಾಂ ವೈ ವರಂ ವರಯ ಸುವ್ರತ ।
ಯಂ ಯಮಿಚ್ಛಸಿ ದೇವ ತ್ವಂ ತಂ ತಂ ಕಾಮಂ ದದಾಮ್ಯಹಂ ॥
ತ್ವಂ ಕೈಲಾಸಾಧಿಗಸ್ಸಾಕ್ಷಾದ್ರುದ್ರೋ ವೈ ವಿಶ್ವಪಾಲಕಃ ॥ ೧೩ ॥

---

೯. ಅಲ್ಲಿರುವ ಋಷಿಗಳು ಅಗ್ನಿಹೋತ್ರಗಳನ್ನು ಮಾಡುತ್ತಿರುವರು. ವೇದಗಳ ಧ್ವನಿಯು ಯಾವಾಗಲೂ ಕೇಳುತ್ತಲೇ ಇರುವುದು. ಆ ಸ್ವಾಮಿಯ ದರ್ಶನವನ್ನು ಮಾಡಿದರೆ ಬ್ರಹ್ಮಹತ್ಯಾದಿ ಪಾಪಗಳು ಕೋಟಿಯಾದರೂ ಹೋಗುವುದು.

೧೦. ಅಲ್ಲಿ ಗಂಗಾನದಿಯು ಹರಿಯುವುದು. ಅದಕ್ಕೆ ಅಲಕನಂದೆ ಎಂದು ಹೆಸರು. ಅಲ್ಲಿ ಸ್ನಾನಮಾಡಿದರೆ ಮಹಾಪಾಪಗಳೆಲ್ಲವೂ ಹೋಗುತ್ತವೆ.

೧೧. ವಿಶ್ವೇಶ್ವರ ಸ್ವಾಮಿಯೂ ಕೂಡ ಅಲ್ಲಿರುವನು. ಸಂದೇಹವಿಲ್ಲ. ಅಲ್ಲಿ ಒಂದು ವರ್ಷದಕಾಲ ನಾನು ತಪಸ್ಸುಮಾಡಿದೆನು.

೧೨. ಆಗ ಭಕ್ತರಲ್ಲಿ ಕೃಪೆಯುಳ್ಳ ದೇವದೇವನೂ ಗರುಡಧ್ವಜನೂ ನಾಶರಹಿತನೂ ಆದ ಸಾಕ್ಷಾನ್ನಾರಾಯಣನು ಪ್ರಸನ್ನನಾದನು.

೧೩. ಆಗ ಆ ನಾರಾಯಣನು ಪ್ರಸನ್ನನಾಗಿ ಎಲೈ ವ್ರತವನ್ನೇ ಮಾಡಿದ ಮಹಾದೇವನೇ ! ನಿನಗೇನೇನು ಬೇಕೋ ಅವೆಲ್ಲವನ್ನೂ ಕೇಳಿಕೋ. ಅವೆಲ್ಲವನ್ನೂ ಕೊಡುತ್ತೇನೆ. ನೀನು ಕೈಲಾಸಕ್ಕೆ ಒಡೆಯನು. ಪ್ರಪಂಚವನ್ನೇ ಕಾಪಾಡುವ ಪ್ರತ್ಯಕ್ಷನಾದ ರುದ್ರನು. ನಿನಗೆ ಕೊಡದಿರುವುದು ಯಾವುದಿದೆ ?

|| ರುದ್ರ ಉವಾಚ ||

ಅಲಂ ಗೃಹ್ಣಾಮಿ ಭೋ ದೇವ ಸುಪ್ರಸನ್ನೋ ಜನಾರ್ದನ ।
ದ್ವೌ ವರೌ ಮಮ ದೀಯೇತಾಂ ಯದಿ ದಾತುಂ ತ್ವಮಿಚ್ಛಸಿ || ೧೪ ||

ತವ ಭಕ್ತಿಸ್ಸದೈವಾಸ್ತು ಭಕ್ತರಾಜೋ ಭವಾಮ್ಯಹಂ ।
ಸರ್ವೇ ಲೋಕಾ ಬ್ರುವಂತ್ವೇವಮಯಂ ಭಕ್ತಸ್ಸದೈವ ಹಿ || ೧೫ ||

ತವ ಪ್ರಸಾದಾದ್ದೇವೇಶ ಮುಕ್ತಿದಾತಾ ಭವಾಮ್ಯಹಂ ।
ಯೇ ಲೋಕಾ ಮಾಂ ಭಜಿಷ್ಯಂತಿ ತೇಷಾಂ ದಾತಾ ನ ಸಂಶಯಃ|| ೧೬ ||

ವಿಷ್ಣುಭಕ್ತ ಇತಿ ಖ್ಯಾತೋ ಲೋಕೇ ಚೈವ ಭವಾಮ್ಯಹಂ ।
ಯಸ್ಯಾಹಂ ವರದಾತಾ ತು ತಸ್ಯ ಮುಕ್ತಿರ್ಭಗವಿಷ್ಯತಿ || ೧೭ ||

---

೧೪. ರುದ್ರನು ಹೇಳಿದನು– ಸ್ವಾಮಿ ಜನಾರ್ದನನೇ ! ನೀನು ಪ್ರಸನ್ನನಾಗಿ ವರಕೊಡುವುದಾದರೆ ನನಗೆ ಎರಡು ವರಗಳನ್ನು ಕೊಡು.

೧೫. ಎಲೈ ನಾರಾಯಣನೇ ! ನಿನ್ನಲ್ಲಿ ನನಗೆ ಯಾವಾಗಲೂ ಭಕ್ತಿಯಿರಲಿ. ನಾನು ಭಕ್ತರಾಜನಾಗಬೇಕು. ಲೋಕದಲ್ಲಿ ಎಲ್ಲರೂ ಯಾವಾಗಲೂ ನನ್ನನ್ನು ವಿಷ್ಣುಭಕ್ತನೆಂದು ಹೇಳಲಿ.

೧೬. ಯಾರು ನನ್ನನ್ನು ಭಜಿಸುತ್ತಾರೆಯೋ ಅವರಿಗೆಲ್ಲಾ ನಿನ್ನ ಅನುಗ್ರಹದಿಂದ ನಾನು ಮುಕ್ತಿಯನ್ನು ಕೊಡತಕ್ಕವನಾಗಬೇಕು. ಸಂಶಯಕೂಡದು.

೧೭. ಲೋಕದಲ್ಲಿ ನಾನು ವಿಷ್ಣುಭಕ್ತನೆಂದು ಪ್ರಸಿದ್ಧನಾಗಬೇಕು. ನಾನು ವರಕೊಟ್ಟವನಿಗೆಲ್ಲಾ ಮುಕ್ತಿಯು ಬರಬೇಕು.

**ಜಟಿಲೋ ಭಸ್ಮಲಿಪ್ತಾಂಗೋ ಹ್ಯಹಂ ಚ ತವ ಸನ್ನಿಧೌ ।**
**ತವ ದೇವ ಪ್ರಸಾದೇನ ಲೋಕೇ ಖ್ಯಾತೋ ಭವಾಮ್ಯಹಂ ॥ ೧೮ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಬದರೀನಾರಾಯಣ ಮಾಹಾತ್ಮ್ಯೇ ರುದ್ರಪ್ರಸಾದೋ ನಾಮ ದ್ವಿತೀಯೋಽಧ್ಯಾಯಃ**

---

೧೮. ಜಟಾಧಾರಿಯಾಗಿಯೂ ಬೂದಿಯನ್ನು ಬಳಿದು ಕೊಂಡವನಾಗಿಯೂ ನಾನು ನಿನ್ನ ಸಮೀಪದಲ್ಲಿರಬೇಕು. ಇದೇ ರೀತಿಯಾಗಿ ನಿನ್ನ ಅನುಗ್ರಹದಿಂದ ಲೋಕದಲ್ಲಿ ಪ್ರಸಿದ್ಧನಾಗಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಮಹೇಶ್ವರ ನಾರದರ ಸಂವಾದದಲ್ಲಿ ಬದರಿನಾರಾಯಣರ ಮಹಿಮೆಯಲ್ಲಿ ರುದ್ರನಿಗೆ ಅನುಗ್ರಹ ಮಾಡಿದನೆಂಬ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತೃತೀಯೋಽಧ್ಯಾಯಃ ॥



**॥ ಸೂತ ಉವಾಚ ॥**

**ಏಕದಾ ನಾರದೋ ದ್ರಷ್ಟುಂ ಪಾಂಡವಾನ್ದುಃಖಕರ್ಶಿತಾನ್ ।**
**ಯಯೌ ಕಾಮ್ಯವನಂ ವಿಪ್ರಾಃ ಸತ್ಕೃತಸ್ತೈರ್ಯಥಾ ವಿಧಿ ॥**
**ಅಥ ನತ್ವಾ ಮುನಿಶ್ರೇಷ್ಠಂ ಯುಧಿಷ್ಠಿರ ಉವಾಚ ಹ ॥ ೧ ॥**

**॥ ಯುಧಿಷ್ಠಿರ ಉವಾಚ ॥**

**ಭಗವನ್ಕರ್ಮಣಾ ಕೇನ ದುಃಖಾಬ್ಧೌ ಪತಿತಾ ವಯಂ ॥ ೨ ॥**

**॥ ಸೂತ ಉವಾಚ ॥**

**ತಮುವಾಚ ಋಷಿರ್ದುಃಖಂ ತ್ಯಜ ತ್ವಂ ಪಾಂಡುನಂದನ ।**
**ಸುಖದುಃಖಸಮಾಹಾರೇ ಸಂಸಾರೇ ಕಸ್ಸುಖೀ ನರಃ ॥ ೩ ॥**

---

### ಮೂರನೆಯ ಅಧ್ಯಾಯವು

೧. ಸೂತನು ಹೇಳಿದನು–ಒಂದುಸಾರಿ ಲೋಕಸಂಚಾರಿಯಾದ ನಾರದನು ದುಃಖಗೊಂಡ ಪಾಂಡವರನ್ನು ನೋಡಲು ಕಾಮ್ಯಕವನಕ್ಕೆ ಹೋದನು. ಅಲ್ಲಿ ಪಾಂಡವರಿಂದ ಸತ್ಕಾರವನ್ನು ಹೊಂದಿದನು. ಆಗ ಯುಧಿಷ್ಠಿರನು ಆ ನಾರದನನ್ನು ನಮಸ್ಕರಿಸಿ ಇಂತೆಂದನು.

೨. ಯುಧಿಷ್ಠಿರನು ಹೇಳಿದನು–ಎಲೈ ನಾರದ ಋಷಿಯೆ! ನಾವು ಯಾವ ಪಾಪದ ಮಹಿಮೆಯಿಂದ ಈ ದುಃಖಸಾಗರದಲ್ಲಿ ಮುಳುಗಿರುವೆವು?

೩. ಸೂತನು ಹೇಳಿದನು–ಆಗ ಆ ನಾರದನು ಎಲೈ ಯುಧಿಷ್ಠಿರನೇ! ಈ ದುಃಖವನ್ನು ಬಿಟ್ಟುಬಿಡು. ಸುಖ ದುಃಖಗಳಿಂದ ಬೆರೆತಿರುವುದೇ ಈ ಸಂಸಾರವು. ಇದರಲ್ಲಿ ಸುಖಿಯಾಗಿರುವವನೇ ಇಲ್ಲ.

**ಈಶ್ವರೋಽಪಿ ಹಿ ನ ಸ್ಥಾಯೀ ಪೀಡ್ಯತೇ ದೇಹಸಂಚಯೈಃ ।**
**ನ ದುಃಖರಹಿತಃ ಕಶ್ಚಿತ್ ದೇಹೀ ದುಃಖಸಹೋ ಯತಃ　　॥ ೪ ॥**

**ಶರೀರಂ ಸವಿತುರ್ಯಸ್ಮಾದ್ರಾಹುಸದ್ಗ್ರಸತೇ ಬಲೀ ।**
**ರಾಹೋರಪಿ ಶಿರಶ್ಛಿನ್ನಂ ಶೌರಿಣಾಮೃತಭೋಜನೇ　　॥ ೫ ॥**

**ಸೋಽಪಿ ಶಾರ್ಙ್ಗಧರೋ ದೇವಃ ಕ್ಷಿಪ್ತಸ್ಸಾಗರಗಹ್ವರೇ ।**
**ಜಾಲಂಧರೇಣ ವೀರೇಣ ನಿಹತಸ್ಸೋಽಪಿ ಶಂಭುನಾ　　॥ ೬ ॥**

**॥ ಯುಧಿಷ್ಠಿರ ಉವಾಚ ॥**

**ಕೋಽಸೌ ಜಾಲಂಧರೋ ವೀರಃ ಕಸ್ಯ ಪುತ್ರಃ ತೋ ಬಲೀ ।**
**ಕಥಂ ಜಾಲಂಧರಂ ಸಂಖ್ಯೇ ಹತವಾನ್ವೃಷಭಧ್ವಜಃ ॥**
**ಏತತ್ಸರ್ವಂ ಸಮಾಚಕ್ಷ್ವ ವಿಸ್ತರೇಣ ತಪೋಧನ　　॥ ೭ ॥**

---

೪. ಈಶ್ವರನೂ ಕೂಡ ಸ್ಥಿರವಾಗಿಲ್ಲ. ಅನೇಕ ದೇಹಗಳನ್ನು ಹೊಂದುತ್ತ ತೊಂದರೆಪಡುತ್ತಲಿರುವನು. ದುಃಖವಿಲ್ಲದವನು ಒಬ್ಬನೂ ಇಲ್ಲವೇ ಇಲ್ಲ. ಆದರೆ ದೇಹಹೊಂದಿದವನು ದುಃಖವನ್ನು ಸಹಿಸುವನು. ಆದ್ದರಿಂದ ಹೊರಗಿನವರಿಗೆ ಸುಖಿಯಂತೆ ಕಾಣುವನು.

೫-೬. ಪ್ರಪಂಚದಲ್ಲಿ ಸೂರ್ಯನು ಬಲಿಷ್ಠನು. ಅಂತಹ ಸೂರ್ಯನ ಶರೀರ ವನ್ನು ರಾಹುವು ತಿಂದು ಅವನಿಗಿಂತಲೂ ಗಟ್ಟಿಗನೆನಿಸಿಕೊಂಡನು. ಅಮೃತಪಾನದ ಸಮಯದಲ್ಲಿ ವಿಷ್ಣುವು ಅಂತಹ ರಾಹುವಿನ ತಲೆಯನ್ನು ಕಡಿದನು. ಹಾಗೆ ಕಡಿದು ವಿಷ್ಣುವು ಗಟ್ಟಿಗನೆನಿಸಿಕೊಂಡನು. ಆ ಗಟ್ಟಿಗನಾದ ವಿಷ್ಣುವನ್ನು ಜಲಂಧರನು ಸಮುದ್ರದ ಮಧ್ಯದಲ್ಲಿರುವಂತೆ ಓಡಿಸಿಬಿಟ್ಟನು. ಅಂತಹ ಬಲಿಷ್ಠ ನಾದ ಜಲಂಧರನನ್ನು ಶಂಭುವು ಕೊಂದನು. ಹೀಗೆ ಒಬ್ಬನು ಬಲಿಷ್ಠನಿಂದರ ಅವನಿಗಿಂತಲೂ ಬಲಿಷ್ಠನು ಇದ್ದೇ ಇರುವನು.

೭. ಯುಧಿಷ್ಠಿರನು ಹೇಳಿದನು— ಎಲೈ ತಪಸ್ವಿಯಾದ ನಾರದನೇ ! ಆ ವೀರನಾದ ಜಲಂಧರನು ಯಾರು ? ಅವನಾರ ಮಗ? ಅಂತಹ ಜಲಂಧರನನ್ನು ಶಂಭುವು ಯುದ್ಧದಲ್ಲಿ ಹೇಗೆ ಕೊಂದನು ? ಇದೆಲ್ಲವನ್ನೂ ವಿಸ್ತಾರವಾಗಿ ಹೇಳು ?

॥ ಸೂತ ಉವಾಚ ॥

ಸ ರಾಜ್ಞಾ ಏವಮುಕ್ತಸ್ತು ಕಥಯಾಮಾಸ ನಾರದಃ ॥ ೮ ॥

॥ ನಾರದ ಉವಾಚ ॥

ಶೃಣು ಭೂಪ ಕಥಾಂ ದಿವ್ಯಾಮಶೇಷಾತ್ಯಾಘನಾಶಿನೀಂ ।
ಈಶಾನಸಿಂಧುಸೂನೋಶ್ಚ ಸಂಗ್ರಾಮಂ ಪರಮಾದ್ಭುತಂ ॥ ೯ ॥

ಏಕದಾ ಗಿರಿಶಂ ಸ್ತೋತುಂ ಪ್ರಯಯೌ ಪಾಕಶಾಸನಃ ।
ಅಪ್ಸರೋಗಣಸಂಕೀರ್ಣೋ ದೇವೈರ್ಬಹುಭಿರಾವೃತಃ ॥ ೧೦ ॥

ಗಂಧರ್ವೈರಾವೃತೋ ದೇವಸ್ತಂತ್ರೀಶಿಕ್ಷಾಸು ಕೋವಿದೈಃ ।
ರಂಭಾ ತಿಲೋತ್ತಮಾ ದಾಮಾ ಕರ್ಪೂರಾ ಕದಳೀ ತಥಾ ॥ ೧೧ ॥

ಮದನಾ ಭಾರತೀ ಕಾಮಾ ಸರ್ವಾಭರಣಭೂಷಿತಾಃ ।
ನರ್ತಕ್ಯಶ್ಚ ತಥಾ ಚಾನ್ಯಾಃ ಸಮಾಜಗ್ಮುಃ ಸುರಾನ್ತಿಕಂ ॥ ೧೨ ॥

---

೮. ಸೂತನು ಹೇಳಿದನು– ಆ ಧರ್ಮರಾಜನು ಹೀಗೆಂದು ಕೇಳುತ್ತಲೂ ನಾರದನು ಅದೆಲ್ಲವನ್ನೂ ಹೇಳಿದನು.

೯. ನಾರದನು ಹೇಳಿದನು – ಎಲೈ ದೊರೆಯೇ ! ಈಶ್ವರ, ಸಿಂಧು ಪುತ್ರನಾದ ಜಾಲಂಧರ, ಇವರ ಅದ್ಭುತವಾದ ಯುದ್ಧವನ್ನು ಕೇಳು. ಎಲ್ಲಾ ಪಾಪವನ್ನು ನಾಶಮಾಡುತ್ತದೆ. ಉತ್ತಮವಾದ ಕಥೆಯು.

೧೦. ಒಂದು ಸಾರಿ ಪಾಕಶಾಸನನಾದ ಇಂದ್ರನು ಈಶ್ವರನನ್ನು ಸ್ತುತಿಸಲು ಬಹಳ ಜನ ದೇವತೆಗಳೊಡನೆಯೂ ಅಪ್ಸರಸ್ತ್ರೀಯರೊಡನೆಯೂ ಅವನಲ್ಲಿಗೆ ಹೋದನು.

೧೧.೧೨. ತಂತಿಯಿಂದ ಬಾಜಿಸುವ ವಾದ್ಯದಲ್ಲಿ ಪ್ರವೀಣರಾದ ಗಂಧರ್ವರಿಂದ ಕೂಡಿಕೊಂಡು ಆ ಇಂದ್ರನು ಹೊರಟನು. ಮತ್ತು ರಂಭೆ, ತಿಲೋತ್ತಮೆ, ರಾಮೆ, ಕರ್ಪೂರಿ, ಕದಳಿ, ಮದನೆ, ಭಾರತಿ, ಕಾಮೆ ಈ ಅಪ್ಸರಸ್ತ್ರೀಯರು ಎಲ್ಲಾ ಆಭರಣಗಳನ್ನು ತೊಟ್ಟು ಆ ಇಂದ್ರನನ್ನು ಹಿಂಬಾಲಿಸಿದರು.

ಗಂಧರ್ವ ಯಕ್ಷಸಿದ್ಧಾಸ್ತು ನಾರದಸ್ತುಂಬುರುಸ್ತಥಾ ।
ಕಿನ್ನರಾ ಮುಖರಾ ಜಗ್ಮುಃ ತಥಾ ಕಿನ್ನರಯೋಷಿತಃ ॥ ೧೩ ॥

ವಾಯುಶ್ಚ ವರುಣಶ್ಚೈವ ಕುಬೇರೋ ಧನದಸ್ತಥಾ ।
ಯಮಶ್ಚಾಗ್ನಿರ್ನಿರ್ಋತಿಶ್ಚ ಯೇ ಚಾನ್ಯೇ ದೇವತಾಗಣಾಃ ॥ ೧೪ ॥

ವಿಮಾನಸಂಸ್ಥೋ ಮಘವಾನ್ ವಿಮಾನಸ್ಥಾಸ್ಸುರಾಂಗನಾಃ ।
ಸ್ವವಾಹನಗತಾ ದೇವಾಃ ಕೈಲಾಸಂ ಪ್ರಯಯುರ್ಜವಾತ್ ॥ ೧೫ ॥

ದದೃಶುಸ್ತೇ ತತೋ ದೇವಾಃ ಕೈಲಾಸಂ ಪರ್ವತೋತ್ತಮಂ ।
ಮಹೀಧರಣಾಂ ಸರ್ವೇಷಾಂ ಪೃಥಿವ್ಯಾ ಇವ ಮಂಡನಂ ॥ ೧೬ ॥

ಸರ್ವತಸ್ಸುಖದಂ ಶುದ್ಧಂ ಸಿದ್ಧಿರಾಶಿಮಿವಸ್ಥಿತಂ ।
ತತ್ರ ವೃಕ್ಷಾಃ ಕಲ್ಪವೃಕ್ಷಾಃ ಪಾಷಾಣಾಶ್ಚಿಂತಿತಪ್ರದಾಃ ॥ ೧೭ ॥

---

೧೩. ಗಂಧರ್ವರು, ಸಿದ್ಧರು, ನಾರದ, ತುಂಬುರು ಇವರೂ, ಬಾಯಲ್ಲಿ ಹಾಡುವ ಕಿನ್ನರರೂ, ಕಿನ್ನರ ಸ್ತ್ರೀಯರೂ ಆ ಇಂದ್ರನ ಜತೆಯಲ್ಲಿ ಹೊರಟರು.

೧೪. ವಾಯು, ವರುಣ, ಕುಬೇರ, ಯಮ, ಅಗ್ನಿ, ನಿರ್‌ಋತಿ, ಇನ್ನೂ ಉಳಿದ ದೇವತೆಗಳ ಗುಂಪೂ ಹೊರಟಿತು.

೧೫. ಇಂದ್ರನೂ, ದೇವತಾಸ್ತ್ರೀಯರೂ ವಿಮಾನದಲ್ಲಿ ಹೊರಟರು. ಮಿಕ್ಕ ದೇವತೆಗಳು ಅವರವರ ವಾಹನಗಳನ್ನು ಹತ್ತಿ ಕೈಲಾಸಕ್ಕೆ ಹೊರಟರು.

೧೬. ಆಗ ದೇವತೆಗಳು ಹೋಗಿ ಪರ್ವತಗಳಲ್ಲಿ ಶ್ರೇಷ್ಠವಾದ, ಎಲ್ಲಾ ಪರ್ವತಗಳಿಗಿಂತಲೂ ಭೂಮಿಗೆ ಹೆಚ್ಚು ಅಲಂಕಾರವಾಗಿರುವ, ಆ ಕೈಲಾಸ ಪರ್ವತವನ್ನು ನೋಡಿದರು.

೧೭. ಎಲ್ಲಾ ಕಡೆಯಲ್ಲಿಯೂ, ಸುಖಪ್ರದವಾಗಿಯೂ, ಶುದ್ಧವಾಗಿಯೂ. ಇದ್ದಿತು. ಅದನ್ನು ನೋಡಿದರೆ ಸಿದ್ಧಿಯ ರಾಶಿಯಂತಿದ್ದಿತು. ಅಲ್ಲಿರತಕ್ಕ ಮರಗಳೆಲ್ಲವೂ ಕಲ್ಪವೃಕ್ಷಗಳೇ ಆಗಿದ್ದುವು. ಅಲ್ಲಿರುವ ಕಲ್ಲುಗಳೆಲ್ಲವೂ ಕೇಳಿದುದನ್ನು ಕೊಡುವ ಚಿಂತಾಮಣಿಗಳಾಗಿದ್ದುವು.

ಪುನ್ನಾಗೈರ್ನಾಗಚಂಗೈಶ್ಚ ತಿಲಕೈರ್ದೇವದಾರುಭಿಃ ।
ಅಶೋಕೈಃ ಪಾಟಲೈಶ್ಚೂತೈಃ ಮಂದಾರೈಶ್ಶೋಭಿತೋ ಗಿರಿಃ ॥ ೧೮ ॥

ಪರ್ಯಂತಕವ ನಾಮೋದವಾಸಕಾ ಯತ್ರ ವಾಯವಃ ।
ಸಂಗುತ್ವಂ ಬಹುಚಾರೇಣ ಯಾನ್ತಿ ತೇ ಮಲಯಾನಿಲಾಃ ॥ ೧೯ ॥

ವಾಪ್ಯಸ್ಸ್ಫಟಿಕಸೋಪಾನಾ ಹ್ಯಗಾಧವಿಮಲೋದಕಾಃ ।
ವೈಡೂರ್ಯನಾಳ ಸಂಯುಕ್ತ ಸೌವರ್ಣನಿಭಪಂಕಜಾಃ ॥ ೨೦ ॥

ಕುಮುದಾನಾಂ ದ್ಯುತಿರ್ಯತ್ರ ರಾಜತೇ ಸರ್ವತೋ ದಿಶಂ ।
ಕಹ್ಲಾರೈಶ್ಶೋಭಿತಾ ವಾಪ್ಯಃ ಪಿಸದ್ಧಾಃ ಪದ್ಮರಾಗವತ್ ॥ ೨೧ ॥

ಹರಿನ್ಮಣಿನಿಬದ್ಧಾಶ್ಚ ಗೋಮೇದೈಸ್ಸರ್ವಶೋ ವೃತಾಃ ।
ಪದ್ಮರಾಗಶಿಲಾಬದ್ಧಾ ನಾನಾಧಾತುವಿಚಿತ್ರಿತಾಃ ॥ ೨೨ ॥

---

೧೮. ಪುನ್ನಾಗ, ನಾಗಕೇಸರಿ, ಸಂಪಿಗೆ, ತಿಲಕ, ದೇವದಾರು, ಅಶೋಕ ಪಾದರಿ, ಮಾವು, ಮಂದಾರ, ಮರಗಳಿಂದ ಆ ಬೆಟ್ಟವು ಶೋಭಿಸುತ್ತಿದ್ದಿತು.

೧೯. ಅಲ್ಲಿರತಕ್ಕ ವಾಯುಗಳು ಸಮೀಪದಲ್ಲಿರುವ ವನದಸುವಾಸನೆಯನ್ನು ತರುತ್ತಿದ್ದುವು. ಮಲಯ ಪರ್ವತದ ಗಾಳಿಯು ಬಹು ದೂರದಿಂದ ಬಂದುದರಿಂದ ಮೆಲ್ಲಗೆ ಸಂಚರಿಸುತ್ತಿದ್ದಿತು. (ಗಾಳಿಯು ಮೆತ್ತಗೆ ಬೀಸುತ್ತಿದ್ದಿತು.

೨೦. ಅಲ್ಲಿರುವ ಬಾವಿಗಳಗೆ ಸ್ಫಟಿಕದ ಸೋಪಾನಗಳನ್ನು ಕಲ್ಲಿನ ಸೋಪಾನಗಳಂತೆ ಕಟ್ಟಿದ್ದರು. ಅವುಗಳಲ್ಲಿ ಆಳವಾಗಿ ನೀರಿದ್ದಿತು. ಅವುಗಳಲ್ಲಿ ಚಿನ್ನದ ಕಮಲವೂ ಅದಕ್ಕೆ ವೈಡೂರ್ಯದ ದಂಟೂ ಇದ್ದುವು.

೨೧–೨೨. ಆ ಕೊಳಗಳಲ್ಲಿರುವ ನೈದಿಲೆಗಳು ಎಲ್ಲಾ ದಿಕ್ಕನ್ನು ಬೆಳಗುವ ಕಾಂತಿಯಿಂದ ಕೂಡಿದ್ದುವು. ಮತ್ತು ಕಹ್ಲಾರ ಪುಷ್ಪಗಳು ಅನೇಕವಾಗಿದ್ದುವು. ಆ ಕೊಳಕ್ಕೆ ಅವು ಪದ್ಮರಾಗವನ್ನು ಸೇರಿಸಿದಂತೆ ಇದ್ದುವು. ಅಲ್ಲದೆ ಆ ಕೊಳವು ಪಚ್ಚೆ ಮಣಿಯಿಂದಲೂ, ಗೋಮೇದದಿಂದಲೂ, ಎಲ್ಲಾ ಕಡೆಯಲ್ಲಿಯೂ ಕೂಡಿ ಪ್ರಕಾಶಿಸುತ್ತಿದ್ದಿತು. ಪದ್ಮರಾಗಮಣಿಯ ಕಲ್ಲುಗಳನ್ನು ಹಾಕಿದ್ದರು. ಬಗೆಬಗೆಯ ಧಾತುಗಳಿಂದ ಕೂಡಿದ್ದಿತು.

ದದೃಶುಃ ಸುಂದರತರಂ ನಾಕಾಧಿಕವಿನಿರ್ಮಿತಂ ।
ಕೈಲಾಸಂ ಪರ್ವತಶ್ರೇಷ್ಠಂ ದೃಷ್ಟ್ವಾ ತೇ ವಿಸ್ಮಯಂ ಗತಾಃ ॥ ೨೩ ॥

ವಿಮಾನಾದವತೀರ್ಣಾಶ್ಚ ಮಘವಾ ದೇವತಾಶ್ಚ ತಾಃ ।
ದ್ವಾರಪಾಲಮಥಾಗಮ್ಯ ನಂದಿನಂ ವಾಕ್ಯಮಬ್ರವೀತ್ ॥ ೨೪ ॥

॥ ಇಂದ್ರ ಉವಾಚ ॥

ಭೋ ಭೋ ಗಣವರಶ್ರೇಷ್ಠ ಶೃಣು ಮೇ ವಾಕ್ಯಮುತ್ತಮಂ ।
ಸಮಾಜ್ಞಾಪಯ ಶೀಘ್ರಂ ತ್ವಂ ನೃತ್ಯಾರ್ಥಂ ಇಂದ್ರಮಾಗತಂ ॥
ಈಶ್ವರಂ ಪ್ರತಿ ದೇವೇಶಂ ಸರ್ವದೇವೈಸ್ಸಮಾವೃತಂ ॥ ೨೫ ॥

॥ ನಾರದ ಉವಾಚ ॥

ಇಂದ್ರಸ್ಯ ವಚನಂ ಶ್ರುತ್ವಾ ಗಿರಿಶಂ ನಂದಿರಬ್ರವೀತ್ ।
ಪ್ರಭೋಽಯಮಾಗತೋ ಹ್ಯತ್ರ ದೇವರಾಜಃ ಪುರಂದರಃ ॥ ೨೬ ॥

---

೨೩. ಸ್ವರ್ಗಕ್ಕಿಂತಲೂ ಮಿಗಿಲಾಗಿ ನಿರ್ಮಿಸಲ್ಪಟ್ಟಿದ್ದ ಸುಂದರವಾದ ಶ್ರೇಷ್ಠವಾದ ಆ ಕೈಲಾಸವನ್ನು ನೋಡಿದರು. ನೋಡಿ ಅವರು ಆಶ್ಚರ್ಯದಿಂದ ಕೂಡಿದರು.

೨೪. ಆಗ ಇಂದ್ರನೂ, ಆ ದೇವತೆಗಳೂ ವಿಮಾನದಿಂದ ಇಳಿದರು. ಇಂದ್ರನು ಇಳಿದು ದ್ವಾರಪಾಲಕನಾದ ನಂದಿಯ ಬಳಿಗೆ ಬಂದು ಇಂತೆಂದನು.

೨೫. ಇಂದ್ರನು ಇಂತೆಂದನು– ಅಯ್ಯಾ ಗಣಗಳಲ್ಲಿ ಉತ್ತಮನಾದ ನಂದಿಯೇ ! ನನ್ನ ಮಾತನ್ನು ಕೇಳು. ನೀನು ಈಶ್ವರನ ಬಳಿಗೆ ಹೋಗಿ ಇಂದ್ರನು ದೇವತೆಗಳೊಡನೆ ಕೂಡಿಕೊಂಡು ನಿನ್ನ ಬಳಿಗೆ ನರ್ತನಮಾಡಬೇಕೆಂದು ಬಂದಿರುವನೆಂದು ತಿಳಿಸು.

೨೬-೨೭. ನಾರದನು ಹೇಳಿದನು– ಇಂದ್ರನ ಮಾತನ್ನು ಕೇಳಿ ನಂದಿಯು ಗಿರೀಶನ ಬಳಿಗೆ ಹೋಗಿ ಎಲೈ ಪ್ರಭುವೆ ! ದೇವರಾಜನಾದ ಇಂದ್ರನು

ನೃತ್ಯಾರ್ಥಮಥ ತಂ ಪ್ರಾಹಾನಯ ಶೀಘ್ರಂ ಶಚೀಪತಿಂ ।
ಪ್ರವೇಶಯಾಮಾಸ ತದಾ ನಂದೀ ತೈಸ್ಸಹ ವಾಸವಂ ॥ ೨೭ ॥

ಸ ದೃಷ್ಟ್ವಾ ಗಿರಿಶಂ ದೇವಂ ತುಷ್ಟಾವ ವೃಷಭಧ್ವಜಂ ।
ರಂಭಾದ್ಯಾಸ್ತಾಸ್ತದಾ ಸರ್ವಾ ನರ್ತಕ್ಯೋ ಹರಸನ್ನಿಧೌ ॥
ಮೃದಂಗವೀಣಾವಾದಿತ್ರೈರ್ಮುದಾ ನಾಟ್ಯಂ ಪ್ರಚಕ್ರಿರೇ ॥ ೨೮ ॥

ಕಾಂಸ್ಯವಾದ್ಯಾನ್ಪ್ರಹ್ಯಾನ್ಯಾನ್ ವಂಶತಾಳಾ಼ ಸಕಾಹಳಾನ್ ।
ಚಕ್ರುಸ್ತಾ ನೃತ್ಯಸಂರಂಭಂ ಸ್ವಯಂ ದೇವಃ ಪುರಂದರಃ ॥ ೨೯ ॥

ಅತೀವ ನರ್ತನಂ ಚಕ್ರೇ ಸುಂದರಂ ದೇವದುರ್ಲಭಂ ।
ಈಶ್ವರಸ್ತೋಷಮಾಪನ್ನೋ ವಾಸವಂ ವಾಕ್ಯಮಬ್ರವೀತ್ ॥ ೩೦ ॥

---

ಬಂದಿರುವನು. ಅವನು ನಿನ್ನ ಮುಂದೆ ಕುಣಿಯಬೇಕೆಂದು ಬಂದಿರುವನು, ಎನ್ನಲು ಹಾಗಾದರೆ ಆ ಇಂದ್ರನನ್ನು ಬೇಗ ಕರೆದುಕೊಂಡು ಬಾ. ಎಂದು ಈಶ್ವರನು ಹೇಳಿದನು. ಆಗ ನಂದಿಯು ಇಂದ್ರನನ್ನೂ ದೇವತೆಗಳನ್ನೂ ಒಳಕ್ಕೆ ಕರೆದುಕೊಂಡು ಹೋದನು.

೨೮. ಆಗ ಇಂದ್ರನು ವೃಷಭ ಧ್ವಜನಾದ ಶಿವನನ್ನು ನೋಡಿ ಸ್ತುತಿಸಿದನು. ರಂಭೆಯೇ ಮುಂತಾದ ಅಪ್ಸರ ಸ್ತ್ರೀಯರು ಅಲ್ಲಿ ಮೃದಂಗ, ವೀಣೆ, ಮುಂತಾದುವನ್ನು ಬಾಜಿಸುತ್ತ ಕುಣಿದರು.

೨೯. ಕಂಚಿನ ತಾಳಗಳನ್ನೂ, ಬಿದಿರಿನ ತಾಳಗಳನ್ನೂ, ಕೊಂಬುಗಳನ್ನೂ ಕೆಲಕೆಲವರು ಹಿಡಿದುಕೊಂಡು ಬಾರಿಸುತ್ತಿರಲು ಅಪ್ಸರಸ್ತ್ರೀಯರು ಕುಣಿದರು. ಈ ರೀತಿಯಾಗಿ ನರ್ತನದ ರೀತಿಯನ್ನು ಇಂದ್ರನು ತಾನೇ ಕಲ್ಪಿಸಿದ್ದನು.

೩೦. ದೇವತೆಗಳಿಗೆ ನೋಡಲು ಕೂಡ ದುರ್ಲಭವಾದ, ಬಹು ರಮ್ಯವಾದ ನರ್ತನವನ್ನು ಅವರು ಮಾಡಿದರು. ಆಗ ಈಶ್ವರನು ಸಂತೋಷಗೊಂಡು ಇಂದ್ರನಿಗಿಂತೆಂದನು.

|| ಶಂಕರ ಉವಾಚ ||

ಪ್ರಸನ್ನೋऽಹಂ ಸುರಶ್ರೇಷ್ಠ ಜಾತಸ್ತೇ ವ್ರಿಯತಾಂ ವರಃ || ೩೧ ||

|| ನಾರದ ಉವಾಚ ||

ಇತ್ಯುಕ್ತವತಿ ದೇವೇಶೇ ಸ್ವಬಾಹುಬಲಗರ್ವಿತಃ ।
ಪ್ರತ್ಯುವಾಚ ಹರಂ ವಾಕ್ಯಂ ಸಂಗ್ರಾಮಸ್ಸಂವೃತೋ ಮಯಾ || ೩೨ ||

ಯತ್ರ ತ್ವತ್ಸದೃಶೋ ಯೋದ್ಧಾ ತದ್ಯುದ್ಧಂ ದೇಹಿ ಮೇ ಪ್ರಭೋ ।
ಇತ್ಯುಕ್ತ್ವಾ ನಿರ್ಗತೋ ಜಿಷ್ಣುಃ ಲಬ್ಧ್ವಾ ಶಂಭೋರ್ವರಂ ಪ್ರಭೋ ||
ತಸ್ಮಿನ್ಗತೇ ತದಾ ಶಕ್ರೇ ಗಿರೀಶೋ ವಾಕ್ಯಮಬ್ರವೀತ್ || ೩೩ ||

|| ಶಂಕರ ಉವಾಚ ||

ಗಣಾ ಮೇ ಶ್ರೂಯತಾಂ ವಾಕ್ಯಂ ದೇವರಾಜೋऽತಿಗರ್ವಿತಃ || ೩೪ ||

---

೩೧. ಶಂಕರನು ಹೇಳಿದನು– ಎಲೈ ಸುರಶ್ರೇಷ್ಠನಾದ ಇಂದ್ರನೇ ! ನಾನು ನಿನಗೆ ಪ್ರಸನ್ನನಾಗಿದ್ದೇನೆ. ಬೇಕಾದ ವರವನ್ನು ಕೇಳಿಕೋ.

೩೨. ನಾರದನು ಹೇಳಿದನು– ಈಶ್ವರನು ಹೀಗೆನ್ನಲು ಬಾಹುಬಲಗರ್ವಿತನಾದ ಇಂದ್ರನು ಹರನನ್ನು ಕುರಿತು ನಾನು ಯುದ್ಧವನ್ನು ಅಪೇಕ್ಷಿಸುತ್ತೇನೆ. ಎಂದನು.

೩೩. ಎಲ್ಲಿ ನಿನ್ನಂತಹ ವೀರನು ಯುದ್ಧ ಕೊಡುವನೋ ಅಂತಹ ಯುದ್ಧವನ್ನು ನನಗೆ ಕೊಡು, ಎನ್ನಲು ಶಂಭುವು ಹಾಗೆಯೇ ಆಗಲೆಂದು ಹೇಳಿದನು. ಈರೀತಿ ಹೇಳಿ ಇಂದ್ರನು ಶಂಭುವಿನಿಂದ ವರವನ್ನು ಪಡೆದು ಹೊರಟು ಹೋದನು. ಆತನು ಹೋದ ಮೇಲೆ ಶಂಭುವು ಇಂತೆಂದನು.

೩೪. ಶಂಕರನು ಹೇಳಿದನು- ಎಲೈ ಗಣಗಳಿರಾ ! ನನ್ನ ಮಾತನು ಕೇಳಿರಿ. ದೇವರಾಜನಾದ ಇಂದ್ರನು ಬಹು ಗರ್ವಿತನಾಗಿದ್ದಾನೆ.

॥ ನಾರದ ಉವಾಚ ॥

ಇತ್ಯುಕ್ತ್ವಾ ಕ್ರೋಧಸಂಯುಕ್ತೋ ಬಭೂವ ಚ ತತೋ ಹರಃ ।
ಆವಿರಾಸೀತ್ತತಃ ಕ್ರೋಧೋ ಮೂರ್ತಿಮಾನ್ಪುರತಸ್ಥಿತಃ ।
ಘನಾಂಧಕಾರಸದೃಶೋ ಮೃಡಂ ಕ್ರೋಧಸ್ತತೋಽಬ್ರವೀತ್ ॥ ೩೫ ॥

॥ ಕ್ರೋಧ ಉವಾಧ ॥

ದೇಹಿ ಮೇ ತ್ವಂ ಹಿ ಸದೃಶಂ ಕಿಂ ಕರೋಮಿ ತವ ಪ್ರಭೋ ॥ ೩೬ ॥

॥ ನಾರದ ಉವಾಚ ॥

ಉಮಾಪತಿಸ್ತದೋವಾಚ ಗಚ್ಛ ತ್ವಂ ವಾಸವಂ ಜಯ ।
ಸ್ವರ್ಗಸಿಂಧುಂ ಸಮಾಸಾದ್ಯ ಸಾಗರಸ್ಯ ಚ ವೀರ್ಯವಾನ್ ॥ ೩೭ ॥

ಇತ್ಯುಕ್ತೋಂತರ್ದಧೇ ಕ್ರೋಧೋ ಗಣಾಸ್ತೇ ವಿಸ್ಮಯಂ ಯಯುಃ ।
ಈಶಾನಕಲ್ಪೇ ಜಾತೇ ತು ಕಾಮೇನಾರ್ಣವಸಂಗಮೇ ॥ ೩೮ ॥

---

೩೫. ನಾರದನು ಹೇಳಿದನು- ಹೀಗೆಂದು ಹೇಳಿ ಹರನು ಬಹುವಾಗಿ ಕೋಪವನ್ನು ಹೊಂದಿದನು. ಆಗ ಆ ಕೋಪವು ಆಕಾರವನ್ನು ಹೊಂದಿ ಆ ಹರನ ಮುಂದೆ ಮಳೆಗಾಲದ ಮೋಡದಂತೆ ಕಪ್ಪಗೆ ನಿಂತುಕೊಂಡು ಹರನನ್ನು ಕುರಿತು ಇಂತೆಂದಿತು.

೩೬. ಕ್ರೋಧವು ಹೇಳಿತು– ಎಲೈ ಸ್ವಾಮಿಯೇ ! ನನಗೆ ಸರಿಯಾದ ಕೆಲಸವನ್ನು ಕೊಡು. ನಾನೇನು ಮಾಡಬೇಕೆಂಬುದನ್ನು ಅಪ್ಪಣೆಮಾಡು.

೩೭. ನಾರದನು ಹೇಳಿದನು- ಎಲೈ ಕೋಪವೇ ! ನೀನು ಗಂಗಾನದಿ ಸಾಗರಗಳನ್ನು ಹೊಂದಿ ಅವರ ಹೊಟ್ಟೆಯಲ್ಲಿ ವೃದ್ಧಿಯನ್ನು ಹೊಂದಿ ಇಂದ್ರನನ್ನು ಜಯಿಸು. ಎಂದನು.

೩೮-೩೯. ಹೀಗೆ ಶಿವನು ಹೇಳಲು ಕ್ರೋಧನು ಹೊರಟುಹೋದನು. ಇದನ್ನು ನೋಡಿ ಗಣಗಳೆಲ್ಲವೂ ಆಶ್ಚರ್ಯಗೊಂಡುವು. ಅನಂತರ ಈಶಾನ ಕಲ್ಪವಾದ ಮೇಲೆ ಗಂಗಾನದಿ ಸಾಗರಗಳ ಸಂಗಮವು ಉಂಟಾಯಿತು. ಆಗ

**ನದೀ ಸಿಂಧುಸ್ತದಾ ಮತ್ತಾ ಸ್ವಯೌವನಭರೋಷ್ಮಣಾ ।**
**ತಾಂ ದೃಷ್ಟ್ವಾ ಸಿಂಧುರಾಜಶ್ಚ ಜಲಕಲ್ಲೋಲವಾನಭೂತ್ ॥ ೩೯ ॥**

**ತದಾ ಬಭೂವ ರಾಜೇಂದ್ರ ಗಂಗಾಸಾಗರಸಂಗಮಃ ।**
**ಮಹಾನದೀ ತದಾ ಪ್ರಾಪ್ಯ ರೇಮೇ ಚಾತ್ಮಬಲೇನ ಚ ॥ ೪೦ ॥**

**ಅತ್ರಾಂತರೇ ಸಮುದ್ರಸ್ತು ಬಭೂವ ಸಮುದಸ್ತತಃ ।**
**ಸೂನುಸ್ತಸ್ಯಾಂ ಮಹಾನದ್ಯಾಂ ಸಮುದ್ರಾದಭವದ್ಬಲೀ ॥ ೪೧ ॥**

**ಮಹಾರ್ಣವತನೂಜೇನ ಜಾತಮಾತ್ರೇಣ ಪಾರ್ಥಿವ ।**
**ರುದತೋತ್ಕಂಪಿತಾ ಪೃಥ್ವೀ ತ್ರಿಲೋಕೀ ನಾದಿತಾಭವತ್ ॥ ೪೨ ॥**

**ಸಮಾಧಿಬುದ್ಧಿಮುದ್ರಾಂ ಚ ಸಂತತ್ಯಾಜ ಚತುರ್ಮುಖಃ ।**
**ಅತ್ರಾಂತರೇತು ಸಂತ್ರಸ್ತಾಂ ತಾಂ ಸಂವೀಕ್ಷ್ಯ ಜಗತ್ತ್ರಯೀಂ ॥ ೪೩ ॥**

---

ಗಂಗಾನದಿಯು ಯೌವನದಿಂದ ಮತ್ತಳಾಗಿ ಕೊಬ್ಬಿದಳು. ಈಕೆಯನ್ನು ನೋಡಿ ಸಮುದ್ರರಾಜನೂ ಮದಿಸಿ ನೀರಿನ ಅಲೆಗಳನ್ನು ಬೀರಿದನು.

೪೦. ಆಗ ಗಂಗೆಯು ಸಾಗರವನ್ನೇ ಹೊಂದಿ ತನ್ನ ಯೌವನದಿಂದ ಅಲ್ಲೆಲ್ಲಾ ಸಂತೋಷವಾಗಿಯೂ ಸ್ವೇಚ್ಛೆಯಾಗಿಯೂ ಸಂಚರಿಸುತ್ತ ಆಡುತ್ತಿದ್ದಳು.

೪೧. ಈ ಮಧ್ಯದಲ್ಲಿ ಸಮುದ್ರರಾಜನಿಗೂ ಮದವುಂಟಾಗಿ ಆ ಗಂಗೆಯನ್ನು ಹೊಂದಿ ರಮಿಸಲು ಆ ಮಹಾನದಿಯಲ್ಲಿ ಸಮುದ್ರನಿಂದ ಒಂದು ಮಗುವು ಹುಟ್ಟಿತು. ಅದು ಬಹುಬಲವಾಗಿದ್ದಿತು.

೪೨. ಆ ಸಮುದ್ರದಿಂದ ಮಗುವು ಹುಟ್ಟಿದೊಡನೆಯೇ ಅಳುತ್ತಿರಲು ಆ ಶಬ್ದದಿಂದ ಭೂಮಿಯೂ ಮೂರುಲೋಕಗಳೂ ಭಯದಿಂದ ಅಲುಗಿದುವು.

೪೩-೪೪. ಆಗ ಚತುರ್ಮುಖ ಬ್ರಹ್ಮನು ಈ ಶಬ್ದದಿಂದ ಸಮಾಧಿಯ ಭಂಗವನ್ನು ಹೊಂದಿದನು. ಅಷ್ಟರೊಳಗೆ ಮೂರುಲೋಕವೂ ಹೆದರಿರುವುದನ್ನು

ಧಾತಾ ಸುರೇಂದ್ರವಾಕ್ಯೇನ ಪ್ರಜಗಾಮ ಮಹಾರ್ಣವಂ ।
ಆಶ್ಚರ್ಯಮಿತಿ ಸಂಚಿಂತ್ಯ ಹಂಸಾರೂಢೋ ಜವಾದ್ಯಯೌ ॥ ೪೪ ॥

ಬ್ರಹ್ಮಾಣಮಾಗತಂ ವೀಕ್ಷ್ಯ ಸಪರ್ಯಾಂ ವಿದಧೇರ್ಣವಃ ।
ತಮುವಾಚ ತತೋ ಬ್ರಹ್ಮಾ ಕಿಂ ಗರ್ಜಸಿ ವೃಥಾಂಬುಧೇ ॥ ೪೫ ॥

॥ ಸಮುದ್ರ ಉವಾಚ ॥

ನಾಹಂ ಗರ್ಜಾಮಿ ದೇವೇಶ ಮತ್ಸುತೋ ಬಲವಾನ್ಪ್ರಭೋ ।
ಶಿಶೋರಸ್ಯ ಕುರು ರಕ್ಷಾಂ ಚ ದುರ್ಲಭಂ ತವ ದರ್ಶನಂ ॥ ೪೬ ॥

ತಂ ದೃಶ್ಯತಾಂ ಚ ತನಯೋ ಭಾರ್ಯಾಂ ಪ್ರಾಹಾತಿಶೋಭನಾಂ ।
ಯಯೌ ಸಾ ಭರ್ತುರಾದೇಶಾತ್ ಸಪುತ್ರಾ ಬ್ರಹ್ಮಣೋಂತಿಕೇ ॥ ೪೭ ॥

---

ಇಂದ್ರನು ನೋಡಿ ಬ್ರಹ್ಮನಿಗೆ ಹೇಳಲು ಅದರಂತೆ ಆ ಬ್ರಹ್ಮನು ಇದು ಆಶ್ಚರ್ಯವೆಂದು ತಿಳಿದುಕೊಂಡು ಅದನ್ನು ನೋಡಲು ಹಂಸದ ಮೇಲೆ ಕುಳಿತು ಬೇಗನೆ ಸಮುದ್ರದ ಬಳಿಗೆ ಬಂದನು-

೪೫. ಬ್ರಹ್ಮನು ಬಂದುದನ್ನು ಸಮುದ್ರರಾಜನು ನೋಡಿ ಶಾಸ್ತ್ರರೀತಿಯಾಗಿ ಪೂಜಿಸಿದನು. ಆಗ ಬ್ರಹ್ಮನು ಎಲೈ ಸಮುದ್ರರಾಜನೆ! ಈಗ ವ್ಯರ್ಥವಾಗಿ ಏಕೆ ಗರ್ಜಿಸುತ್ತೀಯೆ ? ಎಂದನು.

೪೬. ಸಮುದ್ರವು ಹೇಳಿತು- ಎಲೈ ದೇವದೇವನೇ! ನಾನು ಗರ್ಜಿಸುತ್ತಿಲ್ಲ. ನನ್ನ ಮಗುವು ಬಲಿಷ್ಠವಾದುದು. ಅದು ಅಳುತ್ತಿರುವುದು. ಅದಕ್ಕೆ ರಕ್ಷೆಯನ್ನು ಮಾಡು. ನಿನ್ನ ದರ್ಶನವೇ ಅಪರೂಪವಾದುದು. ಎಂದನು.

೪೭. ಆಗ ಸಮುದ್ರರಾಜನು ಮಗುವನ್ನು ತೋರಿಸೆಂದು ಹೆಂಡತಿಗೆ ಹೇಳಲು ಆಕೆಯು ಗಂಡನ ಅಪ್ಪಣೆಯಂತೆ ಮಗುವನ್ನು ತೆಗೆದುಕೊಂಡು ಬ್ರಹ್ಮನ ಬಳಿಗೆ ಬಂದಳು.

ಉತ್ಸಂಗದೇಶೇ ಚತುರಾನನಸ್ಯ
ನಿಧಾಯ ಪುತ್ರಂ ಚರಣೌ ನನಾಯ ।
ತದಾ ಸಮುದ್ರಾತ್ಮಜಮದ್ಭುತಂ ತಂ
ದೃಷ್ಟ್ವಾ ವಿಧಾತುಃ ಕಿಲ ವಿಸ್ಮಯೋಽಭೂತ್ ॥ ೪೮ ॥

ಗೃಹೀತಕೂರ್ಚಸ್ಯ ಶಿಶೋಃ ಕರಂ ಚ
ಯದಾ ವಿರಿಂಚಿರ್ನ ಶಶಾಕ ಮೋಚಿತುಂ ।
ತದಾ ಸಮುದ್ರಃ ಪ್ರಹಸನ್ಪ್ರಯಾತಃ
ಕೂರ್ಚಂ ಪ್ರಗೃಹ್ಯಾರ್ಭಕರಂ ವ್ಯಮೋಚಯತ್ ॥ ೪೯ ॥

ತಾದೃಶಂ ತಸ್ಯ ಬಾಲಸ್ಯ ದೃಷ್ಟ್ವಾ ವಿಕ್ರಮಮಾತ್ಮಭೂಃ ।
ಪ್ರೀತ್ಯಾ ಜಾಲಂಧರೇತ್ಯಾಹ ನಾಮ್ನಾ ಜಾಲಂಧರೋಽಭವತ್ ॥ ೫೦ ॥

ವರಂ ದದಾವಥೋ ತಸ್ಯ ಪ್ರಣಯೇನ ಪ್ರಜಾಪತಿಃ ।
ಅಯಂ ಜಾಲಂಧರೋ ದೇವೈರಜೇಯಶ್ಚ ಭವಿಷ್ಯತಿ ॥ ೫೧ ॥

---

೪೮. ಆಗ ಬಂದ ಆ ಗಂಗೆಯು ಆ ಮಗುವನ್ನು ಬ್ರಹ್ಮನ ತೊಡೆಯ ಮೇಲಿಟ್ಟು ಆ ಬ್ರಹ್ಮನ ಪಾದಗಳನ್ನು ನಮಸ್ಕರಿಸಿದಳು. ಬ್ರಹ್ಮನು ಸಮುದ್ರನ ಮಗನ ಆ ಅದ್ಭುತವಾದ ಆಕಾರವನ್ನು ನೋಡಿ ಆಶ್ಚರ್ಯಗೊಂಡನು.

೪೯. ಆಗ ಆ ಮಗುವು ಬ್ರಹ್ಮನ ಗಡ್ಡವನ್ನು ಹಿಡಿದುಕೊಳ್ಳಲು ಬ್ರಹ್ಮನು ಅದರ ಕೈಯಿಂದ ಗಡ್ಡವನ್ನು ಬಿಡಿಸಿಕೊಳ್ಳಲಾರದೇ ಹೋದನು. ಆಗ ಸಮುದ್ರನು ನಗುತ್ತ ಬಂದು ಮಗುವಿನ ಕೈಯಿಂದ ಅ ಬ್ರಹ್ಮನ ಗಡ್ಡವನ್ನು ಬಿಡಿಸಿದನು.

೫೦. ಆಗ ಬ್ರಹ್ಮನು ಆ ಮಗುವಿನ ಪರಾಕ್ರಮವನ್ನು ನೋಡಿ ಪ್ರೀತಿಯಿಂದ ಜಲಂಧರ (ಗಡ್ಡವನ್ನು ಹಿಡಿದವನು) ಎಂದು ಕೂಗಿದನು. ಅವರಿಂದ ಆ ಜಲಂಧರನೆಂದೇ ಅವನಿಗೆ ಹೆಸರಾಯಿತು.

೫೧. ಅನಂತರ ಬ್ರಹ್ಮನು ಸಂತೋಷದಿಂದ ಆ ಮಗುವಿಗೆ ಈ ಜಲಂಧರನು ದೇವತೆಗಳಿಗೂ ಜಯಿಸಲಸಾಧ್ಯವಾಗುವನೆಂದು ವರವನ್ನು ಕೊಟ್ಟನು.

ಪಾತಾಳಸಹಿತಂ ನಾಕಂ ಮತ್ಪ್ರಸಾದೇನ ಭೋಕ್ಷ್ಯತೇ ।
ಇತ್ಯುಕ್ತ್ವಾಂತರ್ದಧೇ ಬ್ರಹ್ಮಾ ಹಂಸಮಾರುಹ್ಯ ಸತ್ವರಃ ॥ ೫೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಜಾಲಂಧರೋತ್ಪತ್ತಿ,
ಬ್ರಹ್ಮಗಮನ, ವರದಾನ ನಿರೂಪಣಂ ನಾಮ
ತೃತೀಯೋಽಧ್ಯಾಯಃ

---

೫೨. ಮತ್ತು ಈ ಭೂಲೋಕ, ಪಾತಾಳಲೋಕ, ಸ್ವರ್ಗಲೋಕಗಳನ್ನೂ ನನ್ನ ಅನುಗ್ರಹದಿಂದ ಅನುಭವಿಸುವನು. ಎಂದು ಹೇಳಿ ಹಂಸವನ್ನೇರಿ ಹೊರಟು ಹೋದನು.

ಇಂತು ಪದ್ಮಮಹಾಪುರಾಣದ ಉತ್ತರ ಖಂಡದಲ್ಲಿ ಜಲಂಧರನ ಉತ್ಪತ್ತಿ,
ಬ್ರಹ್ಮನು ಬಂದು ವರವನ್ನು ಕೊಟ್ಟುದು ಇವುಗಳ ನಿರೂಪಣ
ಎಂಬ ಮೂರನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ಥೋಽಧ್ಯಾಯಃ ॥



॥ ನಾರದ ಉವಾಚ ॥

ಕ್ರಮೇಣ ವರ್ಧಮಾನೋಽಸೌ ಬಾಲ್ಯಭಾವೇ ಸ ಬಾಲಕಃ ।
ನಿಪತ್ಯ ಮಾತುರುತ್ಸಂಗೇ ಸಾಗರಂ ಪ್ರತಿಧಾವತಿ ॥ ೧ ॥

ಆನೀಯ ಚಕ್ರೇಽಥ ಸ ಪಂಜರಸ್ಥಾನ್
ಕ್ರೀಡಾಪರಃ ಕೇಸರಿಣಾಂ ಕಿಶೋರಾನ್ ।
ಸಿಂಹಾದಿನೇ ಭಾದಿಕಯುದ್ಧಮೇವ
ಯುದ್ಧೋಪಯೋಗೀವ ತದೀಯವೀರ್ಯಂ ॥ ೨ ॥

---

### ನಾಲ್ಕನೆಯ ಅಧ್ಯಾಯವು

೧. ನಾರದನು ಹೇಳಿದನು- ಕಾಲಕ್ರಮದಿಂದ ಈ ಮಗುವು ಬೆಳೆಯುತ್ತ ಬಾಲ್ಯದಲ್ಲಿಯೇ ತಾಯಿಯ ತೊಡೆಯ ಮೇಲಿಂದ ಕೆಳಕ್ಕೆ ಬೀಳುತ್ತ ಸಮುದ್ರದ ಬಳಿಗೆ ಓಡುತ್ತಿದ್ದಿತು.

೨. ಆ ಮಗುವು ಬೋನಿನಲ್ಲಿರುವ ಸಿಂಹದ ಮರಿಗಳನ್ನು ಹಿಡಿದು ಆಟಕ್ಕೆ ಇಟ್ಟುಕೊಂಡಿತು. ಸಿಂಹಗಳೊಡನೆಯೂ ಆನೆಗಳೊಡನೆಯೂ ಯುದ್ಧವನ್ನೇ ಮಾಡಲು ಅಪೇಕ್ಷಿಸುತ್ತಿದ್ದಿತು.

ತಸ್ಮಾದಾಕಾಶಮುತ್ಪತ್ಯ ಖೇಚರಾನ್ಪಾತಯೇದ್ಭುವಿ ।
ಗರ್ಜಿತೈರ್ಭೀಷಯಾಮಾಸ ಸರಿದ್ಭಿಃ ಸಹ ಸಾಗರಂ ॥ ೩ ॥

ಸಮುದ್ರಾಂತರ್ಗತಂ ಸರ್ವಂ ಸತ್ವಜಾತಂ ತು ಪಾರ್ಥಿವ ।
ಗ್ರಸ್ತಂ ಸಿಂಧುಸುತೇನೇತಿ ತದ್ಭಯಾಚ್ಛನ್ನತಾಂ ಗತಂ ॥ ೪ ॥

ದೃಷ್ಟ್ವಾ ನಿಸ್ಸತ್ವಕಂ ತೋಯಂ ತದ್ಭಯಾದ್ಬಡಬಾನಲಃ ।
ನಿಜದೇಶಂ ಪರಿತ್ಯಜ್ಯ ಪ್ರವಿವೇಶ ಹಿಮಾಲಯಂ ॥ ೫ ॥

ಸ ಬಾಲತ್ವಂ ಪರಿತ್ಯಜ್ಯ ಕ್ರಮೇಣಾರ್ಣವನಂದನಃ ।
ತತೋ ನವಂ ವಯಃ ಪ್ರಾಪ್ಯ ವಿಕ್ರಮೇಣಾಕ್ರಮದ್ದಿವಂ ॥
ಏಕದಾ ಪಿತರಂ ಪ್ರಾಹ ಸಮುದ್ರಂ ಸಿಂಧುನಂದನಃ ॥ ೬ ॥

॥ ಜಾಲಂಧರ ಉವಾಚ ॥

ಮನ್ನಿವಾಸೋಚಿತಂ ಸ್ಥಾನಂ ದೇಹಿ ತಾತಾತಿವಿಸ್ತೃತಂ ॥ ೭ ॥

---

೩. ಆಕಾಶಕ್ಕೆ ನೆಗೆದು ಆಕಾಶದಲ್ಲಿ ಸಂಚರಿಸುವ ಪಕ್ಷಿ ಮುಂತಾದುವನ್ನು ಹಿಡಿದು ಭೂಮಿಗೆ ಕೆಡುವುತ್ತಿದ್ದನು. ತನ್ನ ಗರ್ಜನೆಯಿಂದ ಸಮುದ್ರವನ್ನೂ ನದಿಗಳನ್ನೂ ಹೆದರಿಸುತ್ತಿದ್ದನು.

೪. ಸಮುದ್ರದಲ್ಲಿರುವ ಪ್ರಾಣಿಗಳೆಲ್ಲವನ್ನೂ ಇವನು ತಿನ್ನುತ್ತ ಬಂದುದರಿಂದ ಕಳೆದುಳಿದ ಪ್ರಾಣಿಗಳು ಅವನ ಭಯದಿಂದ ಮರೆಯಾಗುತ್ತಿದ್ದುವು.

೫. ಈ ರೀತಿ ಸಮುದ್ರದಲ್ಲಿ ಪ್ರಾಣಿಗಳೊಂದೂ ಇಲ್ಲದೆ ನೀರುಮಾತ್ರ ಇರುವುದನ್ನು ನೋಡಿ ಬಡಬಾಗ್ನಿಯು ಹೆದರಿ ತನ್ನ ಜಾಗವನ್ನು ಬಿಟ್ಟು ಹಿಮವತ್ಪರ್ವತಕ್ಕೆ ಹೊರಟುಹೋದನು.

೬. ಈ ಹುಡುಗನಿಗೆ ಬಾಲ್ಯವು ಕಳೆದು ಯೌವನವು ಬರಲು ತನ್ನ ಪರಾಕ್ರಮದಿಂದ ಸ್ವರ್ಗವನ್ನು ಆಕ್ರಮಿಸಿದನು. ಅನಂತರ ಒಂದು ಸಾರಿ ಬಂದು ತಂದೆಯಾದ ಸಮುದ್ರರಾಜನನ್ನು ಕುರಿತು ಇಂತೆಂದನು.

೭. ಜಲಂಧರನು ಹೇಳಿದನು- ಎಲೈ ತಂದೆಯೇ ! ನನಗೆ ವಾಸಮಾಡುವುದಕ್ಕೆ ಯೋಗ್ಯವಾದ ದೊಡ್ಡದಾಗಿರುವ ಒಂದು ಜಾಗವನ್ನು ಕೊಡು.

|| ನಾರದ ಉವಾಚ ||

ಸಂಬುಧ್ಯ ವಚನಂ ಸೂನೋಃ ಸ ಜಗಾದ ಮಹಾರ್ಣವಃ || ೮ ||

|| ಸಮುದ್ರ ಉವಾಚ ||

ಪುತ್ರ ದ್ಯಾಸ್ಯಾಮ್ಯಹಂ ರಾಜ್ಯಂ ತವ ನಾ ಭುವಿ ದುರ್ಲಭಂ || ೯ ||

|| ನಾರದ ಉವಾಚ ||

ಅತ್ರಾಂತರೇ ದೈತ್ಯಗುರುಃ ಸಮುದ್ರಂ ಭಾರ್ಗವೋ ಗತಃ ।
ತಮಾಗತಂ ವಿಲೋಕ್ಯಾಬ್ಧಿಃ ವಿಧಿನಾ ಸಮಪೂಜಯತ್ || ೧೦ ||

ಅಥ ನದಪತಿದತ್ತೇ ಪ್ರಾಪ್ತಸೌಂದರ್ಯನಿರ್ಯ
ನ್ಮಣಿಮಹಸಿ ಸ ತಸ್ಮಿನ್ನಾಸನೇ ಸನ್ನಿವಿಷ್ಟಃ ।
ರುಚಿರರುಚಿಸುಮೇರೋಃ ಸುಂದರೇ ಶೃಂಗಭಾಗೇ
ಕಮಲಜ ಇವ ಕಾಂತಿಂ ಕಿಂಚಿದುಚ್ಚೈರ್ಜಹಾರ || ೧೧ ||

---

೮. ನಾರದನು ಹೇಳಿದನು– ಸಮುದ್ರರಾಜನು ಮಗನ ಮಾತನ್ನು ತಿಳಿದು ಕೊಂಡು ಇಂತೆಂದನು.

೯. ಸಮುದ್ರನು ಹೇಳಿದನು- ಎಲೈ ಮಗನೇ ! ಭೂಲೋಕದಲ್ಲಿ ಹೊಂದ ಲಸಾಧ್ಯವಾದ ಉತ್ತಮವಾದ ರಾಜ್ಯವನ್ನು ನಿನಗೆ ಕೊಡುತ್ತೇನೆ.

೧೦. ನಾರದನು ಹೇಳಿದನು– ಇಷ್ಟರಲ್ಲಿಯೇ ದೈತ್ಯರ ಗುರುವಾದ ಶುಕ್ರನು ಅಲ್ಲಿಗೆ ಬರಲು ಸಮುದ್ರನು ಅವನು ಬಂದುದನ್ನು ನೋಡಿ ಕ್ರಮವಾಗಿ ಪೂಜಿಸಿದನು.

೧೧. ಅನಂತರ ಸಮುದ್ರರಾಜನು ಒಂದು ಆಸನವನ್ನು ಕೊಟ್ಟನು. ಆ ಆಸನವು ಅನೇಕಮಣಿಗಳಿಂದ ಕೂಡಿದ್ದು ಅದರಿಂದ ಕಾಂತಿಯು ಹೊರ ಹೊಮ್ಮುತ್ತಿದ್ದಿತು. ಅದರಲ್ಲಿ ಇವನು ಕುಳಿತುಕೊಂಡನು. ಇದನ್ನು ನೋಡಿದರೆ ಮನೋಹರವಾದ ರತ್ನಗಳಿಂದ ಕೂಡಿರುವ ಸುಮೇರು ಪರ್ವತದ ಮೇಲೆ ಕುಳಿತಿರುವ ಬ್ರಹ್ಮನಂತೆ ಪ್ರಕಾಶಿಸುತ್ತಿದ್ದನು.

ಕೃತಾಂಜಲಿಪುಟೋ ಭೂತ್ವಾ ವ್ಯಾಜಹಾರಾರ್ಣವಃ ಕವಿಂ || ೧೨ ||

|| ಸಮುದ್ರ ಉವಾಚ ||

ದಿಷ್ಟ್ಯಾ ತವಾತ್ರಾಗಮನಂ ವದ ಕಿಂ ಕರವಾಣ್ಯಹಂ || ೧೩ ||

|| ನಾರದ ಉವಾಚ ||

ತದಾ ದೈತ್ಯಕುಲಾಚಾರ್ಯಃ ಪ್ರಾಹ ತಂ ಸಾಗರಂ ಕವಿಃ || ೧೪ ||

|| ಭಾರ್ಗವ ಉವಾಚ ||

ಕಿಂ ತೇನ ಜಾತು ಜಾತೇನ ಮಾತುರ್ಯೌವನಹಾರಿಣಾ ।
ಪ್ರರೋಹತಿ ನ ಯಃ ಸ್ವಸ್ಯ ವಂಶಸ್ಯಾಗ್ರೇ ಧ್ವಜೋ ಯಥಾ || ೧೫ ||

ತವಾತ್ಮಜೋ ವಿಕ್ರಮೇಣ ತ್ರೈಲೋಕ್ಯಂ ಭೋಕ್ಷ್ಯತೇ ಧ್ರುವಂ ।
ಜಂಬೂದ್ವೀಪೇ ಮಹಾಪೀಠಂ ಯೋಗಿನೀಗಣಸೇವಿತಂ || ೧೬ ||

---

೧೨. ಆಗ ಕೈಮುಗಿದುಕೊಂಡು ಸಮುದ್ರರಾಜನು ಆ ಶುಕ್ರನನ್ನು ಕುರಿತು ಇಂತೆಂದನು.

೧೩. ಸಮುದ್ರನು ಹೇಳಿದನು- ಎಲೈ ಶುಕ್ರಾಚಾರ್ಯನೇ ! ನೀನು ಇಲ್ಲಿಗೆ ಬಂದಿರುವುದು ಬಹು ಸಂತೋಷವು. ನಾನು ಏನು ಮಾಡಬೇಕೆಂಬುವನ್ನು ದಯವಿಟ್ಟು ತಿಳಿಸು.

೧೪. ನಾರದನು ಹೇಳಿದನು- ಆಗ ದೈತ್ಯರ ಗುಂಪಿಗೆ ಗುರುವಾದ ಶುಕ್ರನು ಸಮುದ್ರವನ್ನು ಕುರಿತು ಇಂತೆಂದನು.

೫೧. ಶುಕ್ರನು ಹೇಳಿದನು- ಹುಟ್ಟಿದ ಮಕ್ಕಳು ಅವರೆಷ್ಟು ಶೂರರಾಗಿದ್ದರೂ ಉಪಯೋಗವೇನು ? ತಾಯಿಯ ಯೌವನವನ್ನು ಹಾಳುಮಾಡಿದವರಷ್ಟೆ ? ಆ ಶೂರನ ಹುಟ್ಟುವಿಕೆಯು ಬಿದಿರಿನ ತುದಿಯನ್ನು ಧ್ವಜವು ಹತ್ತಿ ಪ್ರಕಾಶಿಸು ವಂತೆ ಮುಂದಾಗಿ ಹೋಗಿ ಪ್ರಕಾಶಿಸುತ್ತಿದ್ದರೆ ಆಗ ಸಾರ್ಥಕವು ಎಂದನು.

೧೬-೧೭. ಈ ನಿನ್ನ ಮಗನು ಪರಾಕ್ರಮದಿಂದ ಮೂರು ಲೋಕವನ್ನೂ ಆಳುತ್ತಾನೆ. ಜಂಬೂದ್ವೀಪದಲ್ಲಿ ಯೋಗಿನಿಯರು ಸೇವಿಸುತ್ತಿರುವ ಒಂದು

ಆಪ್ಲಾವಿತಂ ತ್ವಯೇದಾನೀಂ ಮುಂಚ ಜಾಲಂಧರಾಲಯಂ ।
ತತ್ರ ರಾಜ್ಯಂ ಪ್ರಯಚ್ಛಾಸ್ಮೈ ತನಯಾಯ ಮಹಾರ್ಣವ
ಅಜೇಯಶ್ಚಾಪ್ಯಬಧ್ಯಶ್ಚ ತತ್ರಸ್ಥೋಽಯಂ ಭವಿಷ್ಯತಿ　　|| ೧೭ ||

|| ನಾರದ ಉವಾಚ ||

ಏವಮುಕ್ತೋಽರ್ಣವಃ ಪ್ರೀತ್ಯಾ ಭಾರ್ಗವೇಣಾಥ ಲೀಲಯಾ ।
ಅಪಸೃತ್ಯ ಸುತಪ್ರೀತ್ಯೈ ಜಲೇ ಸ್ಥಲಮದರ್ಶಯತ್　　|| ೧೮ ||

ಶತಯೋಜನವಿಸ್ತೀರ್ಣಮಾಯತಂ ಚ ಶತತ್ರಯಂ ।
ದೇಶಂ ಜಾಲಂಧರಂ ಪುಣ್ಯಂ ತಸ್ಯ ನಾಮ್ನೈವ ವಿಶ್ರುತಂ ||
ದೈತ್ಯವರ್ಯಂ ಸಮಾಹೂಯ ಮಯಂ ಪ್ರೋವಾಚ ಸಾಗರಃ　　|| ೧೯ ||

|| ಸಮುದ್ರ ಉವಾಚ ||

ಪುರಂ ಜಾಲಂಧರೇ ಪೀಠೇ ಕುರು ಜಾಲಂಧರಾಯ ವೈ　　|| ೨೦ ||

---

ಪೀಠವಿರುವುದು. ಅದನ್ನು ನೀನು ತೊಳೆಯುತ್ತ ಮುಚ್ಚುತ್ತಿರುವಿ. ಅದನ್ನು ಬಿಡು. ಅದೇ ಈ ಜಲಂಧರನ ವಾಸಸ್ಥಳವಾಗಲಿ. ಅಲ್ಲೇ ಈ ಮಗನಿಗೆ ರಾಜ್ಯವನ್ನು ಕೊಡು. ಅಲ್ಲಿ ಇವನು ಇದ್ದರೆ ಯಾರಿಂದಲೂ ಜಯಿಸಲು ಅಸಾಧ್ಯನೂ ಕಟ್ಟುವುದಕ್ಕೂ ಆಗದವನೂ ಆಗುತ್ತಾನೆ.

೧೮. ನಾರದನು ಹೇಳಿದನು- ಹೀಗೆ ಶುಕ್ರನು ಹೇಳಲು ಸಮುದ್ರನು ಮಗನ ಮೇಲಿನ ಪ್ರೀತಿಯಿಂದ ಆಗ ಆ ಜಾಗವನ್ನು ಬಿಟ್ಟು ಹಿಂದಕ್ಕೆ ಹೋಗಿ ಸ್ಥಳವನ್ನು ಬಿಟ್ಟುಕೊಟ್ಟನು.

೧೯. ಆ ಸ್ಥಳವು ನೂರು ಯೋಜನ ಅಗಲವಾಗಿಯೂ ಮುನ್ನೂರು ಯೋಜನ ಉದ್ದವಾಗಿಯೂ ಇರುವುದು. ಅದೇ ಜಲಂಧರ ದೇಶವಾಯಿತು. ಅವನ ಹೆಸರಿನಿಂದಲೇ ಅದು ಪ್ರಸಿದ್ಧವಾಯಿತು. ಆಗ ಸಮುದ್ರನು ದೈತ್ಯ ಶ್ರೇಷ್ಠನಾದ ಮಯನನ್ನು ಕರೆದು ಇಂತೆಂದನು.

೨೦. ಸಮುದ್ರನು ಹೇಳಿದನು- ಎಲೈ ಮಯನೇ ! ಈ ಜಾಲಂಧರ ಪೀಠದಲ್ಲಿ ಜಲಂಧರನಿಗೋಸ್ಕರ ಒಂದೂರನ್ನು ಕಟ್ಟು.

|| ನಾರದ ಉವಾಚ ||

ಅಂಭೋಧಿನೈವಮುಕ್ತಸ್ತು ಚಕ್ರೇ ರತ್ನಮಯಂ ಪುರಂ |
ಪ್ರಾಕಾರಗೋಪುರದ್ವಾರಂ ಸೋಪಾನಗೃಹಭೂಮಿಕಂ || ೨೧ ||

ಯತ್ರೇಂದ್ರನೀಲಸಂಬದ್ಧಪ್ರಾಸಾದತಲಸಂಸ್ಥಿತಾಃ |
ಮೇನಿರೇ ಜಲದೋದ್ಯೋಗಂ ತಾಂಡವಸ್ಥಾಃ ಶಿಖಂಡಿನಃ || ೨೨ ||

ಯತ್ರ ಪ್ರವಾಳಮಾಣಿಕ್ಯಭವನೋತ್ಥಾ ಮರೀಚಯಃ |
ಸೇವ್ಯಂತೇ ಶಕುನೈರ್ಚೂತರುಚಿರಾಂಕುರಶಂಕಯಾ || ೨೩ ||

ಯತ್ರ ಕಾಂಚನಹರ್ಮ್ಯೇಷು ತ್ವಿಷೋ ವಹ್ನಿಷು ಕಾತರಾಃ |
ವಿಲೋಕ್ಯ ಪ್ರಪಲಾಯಂತೇ ದಾವಶಂಕಾಶ್ಶಿಖಂಡಿನಃ || ೨೪ ||

---

೨೧. ನಾರದನು ಹೇಳಿದನು– ಸಮುದ್ರರಾಜನು ಇಂತು ಹೇಳಲು ಆ ಮಯನು ಕೋಟೆಯೂ, ಹೆಬ್ಬಾಗಿಲೂ ಉಳ್ಳ, ಸೋಪಾನಗಳಿಂದ ಕೂಡಿದ ಮನೆಗಳುಳ್ಳ ರತ್ನಮಯವಾದ ಒಂದೂರನ್ನು ಅಲ್ಲಿ ನಿರ್ಮಿಸಿದನು.

೨೨. ಆ ಪಟ್ಟಣದಲ್ಲಿ ಇಂದ್ರನೀಲಮಣಿಯ ಉಪ್ಪರಿಗೆಯನ್ನು ಹಾಕಿ ಮನೆಗಳನ್ನು ಕಟ್ಟಿರಲು ಅದರ ಕೆಳಗೆ ಇರುವ ನವಿಲುಗಳು ಆ ಮೇಲಿರುವ ನೀಲ ಪದಾರ್ಥಗಳನ್ನು ನೋಡಿ ಆ ಉಪ್ಪರಿಗೆಯು ಮೇಘವೆಂದು ತಿಳಿದು ಕುಣಿಯಲು ಮೊದಲಿಟ್ಟುವು.

೨೩. ಆ ಮನೆಗಳಿಗೆ ಹವಳ, ಮಾಣಿಕ್ಯಗಳನ್ನು ಸೇರಿಸಿ ಕಟ್ಟಿರಲು ಆ ಮನೆಯಿಂದ ಹೊರಡುತ್ತಿರುವ ಕಿರಣಗಳನ್ನು ನೋಡಿ ಹಕ್ಕಿಗಳು ಅವು ಮನೋಹರವಾದ ಮಾವಿನ ಚಿಗುರುಗಳೆಂದು ಆ ಮನೆಯಲ್ಲಿರುತ್ತಿದ್ದುವು.

೨೪. ಅಲ್ಲಿರುವ ಮನೆಗಳಲ್ಲಿ ಸೇರಿಸಿರುವ ಚಿನ್ನದ ಕಾಂತಿಯನ್ನು ನೋಡಿ ಅದು ಕಾಳ್ಗಿಚ್ಚೆಂದು ತಿಳಿದು ನವಿಲುಗಳು ಓಡುತ್ತಿದ್ದುವು.

ಯತ್ರ ಸ್ಫಟಿಕಶಾಲೋತ್ಥ ಪ್ರಭಾಸಮ್ಮಿಶ್ರಿತಾ ದಿಶಃ ।
ವಿಭಾಂತಿ ಮಂದರೋದ್ಭ್ರಾಂತ ಸಫೇನಾರ್ಣವಸನ್ನಿಭಾಃ ॥ ೨೫ ॥

ಯತ್ರ ಮೋಹಂ ಸುಹರ್ಮ್ಯೇಷು ವಿಧಾತಾಲೋಕಸಂಸ್ಥಿತಃ ।
ಚಕ್ರಿರೇ ಲಲನಾಃ ಪೂರ್ಣಸಾಂಧ್ಯಚಂದ್ರೋಪಮಾನನಾಃ ॥ ೨೬ ॥

ಯತ್ರೇಂದ್ರನೀಪಕಾದಂಬಾಃ ಪವನೋದ್ಯಾನಮೋದಿತಾಃ ।
ಚಿತ್ತಂ ವಿಶಂತೋ ನಾರೀಣಾಂ ಚಕ್ರಿರೇ ಮೋಹನಜ್ವರಂ ॥ ೨೭ ॥

ಯತ್ರ ಲೇಖ್ಯಾಗತಂ ನೃಣಾಂ ವಿಲೋಕ್ಯ ಸುರತಂ ಜನಃ ।
ಸಂಯಾತಿ ದ್ವಿಗುಣಂ ಯೇನ ನಿಜಕಾಂತಾರತೋದ್ಯಮಂ ॥ ೨೮ ॥

ಯತ್ರ ವಾತಾಯನೋದ್ಭೂತ ಧೂಪಧೂಮಸ್ಯ ಲೇಖಯಾ ।
ನಭೋ ಬಭೂವ ತದ್ಗಂಗಾ ಕಾಳಿಂದೀ ಸಂಗಮೋಪಮಂ ॥ ೨೯ ॥

---

೨೫. ಆ ಮನೆಗೆ ಹಾಕಿ ಕಟ್ಟಿರುವ ಸ್ಫಟಿಕ ಶಿಲೆಗಳ ಕಾಂತಿಗಳು ದಿಕ್ಕುಗಳನ್ನು ಆವರಿಸಿರಲು ಅದನ್ನು ನೋಡಿದವರಿಗೆ ಮಂದರಪರ್ವತದಿಂದ ಸಮುದ್ರವನ್ನು ಕಡೆದುದರಿಂದ ಬಂದ ಸಮುದ್ರದ ನೊರೆಯು ಎಂಬ ಸಂದೇಹವನ್ನುಂಟು ಮಾಡುತ್ತಿದ್ದಿತು.

೨೬. ಪೂರ್ಣಚಂದ್ರನಂತೆ ಮುಖವುಳ್ಳ ಹೆಂಗಸರು ಬ್ರಹ್ಮಲೋಕದಲ್ಲಿ ಇದ್ದರೂ ಕೂಡ ಅವರು ಈ ಮಹಡಿಯ ಮನೆಗಳಲ್ಲಿ ಆಸೆಪಡುತ್ತಿದ್ದರು.

೨೭. ವಾಯುವಿನಿಂದ ಉದ್ಯಾನವಲ್ಲಿ ಅಲ್ಲಾಡಿಸಲ್ಪಡುತ್ತಿದ್ದ ಕರಿಯ ಹೊಂಗೆ, ಕದಂಬದ ಮರಗಳನ್ನು ಹೆಂಗಸರು ನೋಡಿದ ಕೂಡಲೇ ಅವರಿಗೆ ಅವು ಮದನಜ್ವರವನ್ನು ಉಂಟುಮಾಡುತ್ತಿದ್ದುವು.

೨೮. ಆ ಪಟ್ಟಣದ ಮನೆಗಳಲ್ಲಿ ಬರೆದಿರುವ ಸುರತದ ಚಿತ್ರಗಳನ್ನು ನೋಡಿ ಜನರು ತಮ್ಮ ತಮ್ಮ ಹೆಂಡಿರಲ್ಲಿ ಅದಕ್ಕೆ ಇಮ್ಮಡಿಯಾದ ಆಸೆಯಿಂದ ರಮಿಸಿದರು.

೨೯. ಆ ಪಟ್ಟಣದ ಮನೆಯ ಗವಾಕ್ಷಗಳಲ್ಲಿ ಹೊರಡುತ್ತಿದ್ದ ದೀಪದ ಹೊಗೆಯು ಅಂತರಿಕ್ಷವನ್ನು ಮುಟ್ಟುತ್ತಿದ್ದಿತು. ಅದನ್ನು ನೋಡಿದರೆ ಆಕಾಶದಲ್ಲಿ ಗಂಗೆಯಮುನೆಯರ ಸಂಗಮವಾಗುವಂತೆ ಕಾಣುತ್ತಿದ್ದಿತು.

ಯತ್ರಾನೇಕಗೃಹೋದೂ ತಪ್ರಭಯಾ ಸಕಲಂ ನಭಃ ।
ವಿಭಾತೀಂದ್ರಾಯುಧಾಕೀರ್ಣಂ ಶರನ್ಮೇಘ ಇವೋನ್ನತಃ ॥ ೩೦ ॥

ಯತ್ರಾತಿಸಂಭ್ರಮಶ್ರಾಂತಾ ಸೂರ್ಯವಾಹಾಃ ಪ್ರಪೀಡಿತಾಃ ।
ವಿಶ್ರಾಮಂ ಯಾಂತಿ ಮಧ್ಯಾಹ್ನೇ ಪ್ರಾಸಾದಶಿರಸಿ ಸ್ಥಿತಾಃ ॥ ೩೧ ॥

ಯತ್ರ ಕುತ್ರ ಚ ಹರ್ಮ್ಯೇಷು ಬಿಭ್ರತ್ಯೋ ಮಾಲತೀಸ್ರಜಃ ।
ರಾತ್ರೌ ಸಂಭೂತನಕ್ಷತ್ರಾ ಇವ ರೇಜುರ್ವರಾಂಗನಾಃ ॥ ೩೨ ॥

ಯತ್ರ ಹಾಟಕಹಿಂದೋಲಶೃಂಖಲಾಕರ್ಷಣೋದ್ಭವಂ ।
ಬಿಕಾರ ಸುಂದರೀವರ್ಗಃ ಸ್ಫುಟಂ ಮೇರುಭುವೋ ಭುವಃ ॥ ೩೩ ॥

ಸಾಕಂ ಸರಿದ್ಭಿಃ ಪುತ್ರಸ್ಯೋ ಶನಸಾಸಹ ಸಾಗರಃ ।
ತತ್ರಾಭಿಷೇಕಮಕರೋತ್ ವಾದಿತ್ರೈರ್ನಿಜಗರ್ಜಿತೈಃ ॥ ೩೪ ॥

---

೩೦. ಅಲ್ಲಿರುವ ಅನೇಕವಾದ ಮನೆಗಳ ಕಾಂತಿಗಳು ಆಕಾಶದಲ್ಲಿ ಶರತ್ ಕಾಲದ ಮೇಘವು ಕಾಮನ ಬಿಲ್ಲನ್ನು ಪ್ರಸರಿಸಿರುವಂತೆ ಕಾಣುತ್ತಿದ್ದಿತು.

೩೧. ಬಹು ಸಡಗರದಿಂದ ಓಡುತ್ತಿರುವ ಸೂರ್ಯದ ಕುದುರೆಗಳು ಆಯಾಸ ಪಟ್ಟು ಮಧ್ಯಾಹ್ನ ಕಾಲದಲ್ಲಿ ಆ ಊರಿನ ಮನೆಗಳ ತಲೆಯಮೇಲೆ ವಿಶ್ರಾಂತಿ ಯನ್ನು ಹೊಂದುತ್ತಿದ್ದುವು.

೩೨. ಅಲ್ಲಿಯೇ ಮನೆಗಳ ಮಹಡಿಗಳಲ್ಲಿ ಜಾಜಿಯ ಹೂವನ್ನು ಮುಡಿದು ಕೊಂಡಿದ್ದ ಹೆಂಗಸರು ರಾತ್ರಿಯಲ್ಲಿ ನಕ್ಷತ್ರಗಳು ಹುಟ್ಟುವಂತೆ ಕಾಣುತ್ತಿದ್ದರು.

೩೩. ಅಲ್ಲಿ ಹೆಂಗಸರು ಚಿನ್ನದ ಸರಪಣಿಯನ್ನು ಹಾಕಿ ಉಯ್ಯಾಲೆಗಳನ್ನು ಕಟ್ಟಿ ಆಡುತ್ತಿದ್ದರೆ ಅದು ಮೇರುಪರ್ವತದ ತಪ್ಪಲಿನ ಪ್ರದೇಶವೋ ಎಂಬಂತೆ ಕಾಣಿಸುವಹಾಗೆ ಮಾಡುತ್ತಿದ್ದರು.

೩೪. ಆ ಪಟ್ಟಣದಲ್ಲಿ ಸಮುದ್ರರಾಜನು ಈ ಶುಕ್ರನೊಡನೆಯೂ ನದಿ ಗಳೊಡನೆಯೂ ವಾದ್ಯಗಳು ತಾವಾಗಿಯೇ ಮೊಳಗುತ್ತಿರಲು ಆ ಜಾಲಂಧರನಿಗೆ ಪಟ್ಟಾಭಿಷೇಕಮಾಡಿದನು.

ಯಾಸ್ಕಂದಸ್ಯ ಜಗಾದ ತಾರಕಜಯೇ ದೇವಸ್ಸ್ವಯಂಭೂಸ್ಸ್ವಯಂ
ಸ್ವಃ ಸಾಮ್ರಾಜ್ಯಮಹೋತ್ಸವೇಪಿ ಚ ಶಚೀಕಾಂತಸ್ಯ ವಾಚಸ್ಪತಿಃ ।
ತಾಭಿಶ್ಚಿತ್ರವಿರಿಂಚಿವಕ್ತ್ರಸರಸೀ ಹಂಸೀಭಿರಾಶಾಸ್ಮಹೇ
ವಾಣೀಭಿರ್ವಸುಧಾ ವಿವಾಹಸಮಯೇ ಮಂತ್ರೋತ್ಸವೈರ್ಮಂಗಳಂ ॥೩೫॥

ಮಹಾಪದ್ಮಸಹಸ್ರಂ ತು ಸೈನ್ಯಮಾತ್ಮೋದರೋದ್ಭವಂ ।
ಜಾಲಂಧರಾಯ ಪುತ್ರಾಯ ದದೌ ಭೀಮಂ ಮಹೋದಧಿಃ ॥ ೩೬ ॥

ಜಾಲಂಧರಾಯ ಶುಕ್ರೋಪಿ ಪ್ರೀತ್ಯಾ ವಿದ್ಯಾಂ ನಿಜಾಂ ದದೌ ।
ಮೃತಸಂಜೀವನೀಂ ನಾಮ್ನಾ ಮಾಯಾಂ ರುದ್ರವಿಮೋಹಿನೀಂ ॥ ೩೭ ॥

ಶಸ್ತ್ರಾಸ್ತ್ರವಿದ್ಯಾ ಅನ್ಯಾಶ್ಚ ವಿಧಿನಾ ಹ್ಯಬ್ಧಿಸೂನವೇ ।
ಯದನ್ಯತ್ಸಕಲಂ ತಸ್ಮೈ ವ್ಯಾಖ್ಯಾತಂ ಕವಿನಾ ತದಾ ॥ ೩೮ ॥

---

೩೫. ಬ್ರಹ್ಮನು ತಾನಾಗಿಯೇ ತಾರಕಾಸುರನ ಜಯದ ಸಮಯದಲ್ಲಿ ಕುಮಾರಸ್ವಾಮಿಗೆ ಹೇಳಿದ, ಅದೇ ಬ್ರಹ್ಮನು ಸ್ವರ್ಗದ ಅಭಿಷೇಕದ ಸಮಯದಲ್ಲಿ ಇಂದ್ರನಿಗೆ ಹೇಳಿದ, ಆ ಬ್ರಹ್ಮನ ಮುಖವೆಂಬ ಕಮಲದಲ್ಲಿರುವ ಹಂಸಿಗಳಿಂದ ಹೊರಟ ಆ ವಾಣಿಯಿಂದಲೇ ಪಟ್ಟಾಭಿಷೇಕ ಮಹೋತ್ಸವವನ್ನು ಅವರು ಮಾಡಿದರು.

೩೬. ಆಗ ಸಮುದ್ರರಾಜನು ಮಗನಿಗೆ ತನ್ನಲ್ಲಿ ಹುಟ್ಟಿದ ಸಾವಿರ ಮಹಾ ಪದ್ಮಗಳಷ್ಟು ಸೈನ್ಯವನ್ನು ಕೊಟ್ಟನು. [ ಮಹಾಪದ್ಮವೆಂದರೆ ಕೋಟಿ, ಮಹಾ ಕೋಟಿ, ಅರ್ಬುದ, ನ್ಯರ್ಬುದ, ಶಂಖ, ಮಹಾಶಂಖ, ಪದ್ಮ, ಮಹಾಪದ್ಮ ಎಂಬ ಕ್ರಮದ ಸಂಖ್ಯೆ.]

೩೭. ಶುಕ್ರನೂ ಕೂಡ ಜಲಂಧರನಿಗೆ ತನ್ನ ವಿದ್ಯೆಗಳೆಲ್ಲವನ್ನೂ ಕೊಟ್ಟು ದಲ್ಲದೆ ಮೃತಸಂಜೀವಿನಿಯೆಂಬ ವಿದ್ಯೆಯನ್ನೂ ರುದ್ರಮೋಹಿನೀ ಎಂಬ ಮಾಯೆ ಯನ್ನೂ ಕೊಟ್ಟನು.

೩೮. ಶಸ್ತ್ರ ವಿದ್ಯೆ, ಅಸ್ತ್ರ ವಿದ್ಯೆ, ಇನ್ನೂ ಬೇರೆ ಬೇರೆಯಾದ ವಿದ್ಯೆಗಳು ಇವೆಲ್ಲವನ್ನೂ ಆ ಜಲಂಧರನಿಗೆ ಶಾಸ್ತ್ರೋಕ್ತವಾಗಿ ಶುಕ್ರನು ಹೇಳಿದನು. ಅಲ್ಲದೆ ಉಳಿದ ಶಾಸ್ತ್ರಗಳನ್ನೂ ಆ ಶುಕ್ರನೇ ಹೇಳಿಕೊಟ್ಟನು.

ತತೋ ಜಾಲಂಧರಂ ಪುತ್ರಮಭಿಷಿಚ್ಯಾರ್ಣವೋ ಯಯೌ ।
ಸ್ವಸ್ಥಾನಂ ದಿವ್ಯದೇಹೇನ ನದೀಭಿಃ ಪರಿವಾರಿತಃ ॥ ೩೯ ॥

ದೃಷ್ಟ್ವಾ ಜಾಲಂಧರೋ ದಿವ್ಯಪುರಂ ಗೋಪುರಮಂಡಿತಂ ।
ವ್ಯಚರತ್ಸಹ ಶುಕ್ರೇಣ ದ್ವಿಜಸಂಘೈಸ್ಸಮರ್ಚಿತಃ ॥ ೪೦ ॥

ಏತಸ್ಮಿನ್ನಂತರೇ ದೈತ್ಯಾಃ ಪಾತಾಳಸ್ಥಾ ಮಹಾಬಲಾಃ ।
ಪ್ರಾಪ್ತಾ ಜಾಲಂಧರಂ ಸರ್ವೇ ಕಾಲನೇಮಿಪುರೋಗಮಾಃ ॥ ೪೧ ॥

ತತೋ ಮಹಾಬಲಾ ವೀರಾ ಬಲಂ ಕ್ಷೀರೋದಸನ್ನಿಭಂ ।
ತಸ್ಯ ಶುಂಭಾಸುರಂ ದೈತ್ಯಂ ಸೇನಾಪತಿಮಕಲ್ಪಯನ್ ॥ ೪೨ ॥

ಬಲಂ ಸ್ವವಶಗಂ ಕೃತ್ವಾ ಕೃತ್ವಾ ಭುವಿ ಸ್ಥಿರಂ ಜಲಂ ।
ಜಾಲಂಧರಸ್ತದಾರಾಜ್ಯಂ ಪಿತೃದತ್ತಂ ಚಕಾರ ಸಃ ॥ ೪೩ ॥

---

೩೯. ಈ ರೀತಿಯಾಗಿ ಸಮುದ್ರನು ಮಗನಾದ ಜಲಂಧರನಿಗೆ ಅಭಿಷೇಕ ಮಾಡಿ ನದಿಗಳಿಂದ ಕೂಡಿಕೊಂಡು ತನ್ನ ದಿವ್ಯ ದೇಹವನ್ನು ಧರಿಸಿಕೊಂಡು ತನ್ನ ಜಾಗಕ್ಕೆ ಹೋದನು.

೪೦. ಜಲಂಧರನು ಆ ಉತ್ತಮವಾದ ಪಟ್ಟಣವನ್ನು ನೋಡಿ ಶುಕ್ರ ನಿಂದಲೂ ಬ್ರಾಹ್ಮಣರಿಂದಲೂ ಗೌರವಿಸಲ್ಪಡುತ್ತಾ ಸುಖದಿಂದ ಇದ್ದನು.

೪೧. ಈ ಸಮಯದಲ್ಲಿ ಪಾತಾಳದಲ್ಲಿ ವಾಸಿಸುತ್ತಿದ್ದ ಬಲಿಷ್ಠರಾದ ಕಾಲ ನೇಮಿಯೇ ಮುಂತಾದ ದೈತ್ಯರು ಜಲಂಧರನನ್ನು ಆಶ್ರಯಿಸಲು ಬಂದರು.

೪೨. ಆಗ ಮಹಾಬಲಶಾಲಿಗಳಾದ ದೈತ್ಯರು ತಾವು ಸೇರಿಕೊಂಡ ಆ ಸಾಗರದಲ್ಲಿ ಹುಟ್ಟಿದ ಸೈನ್ಯಗಳಿಗೆ ಶುಂಭಾಸುರನೆಂಬುವನನ್ನು ಸೇನಾಪತಿಯನ್ನಾಗಿ ಮಾಡಿದರು.

೪೩. ಆ ಸೈನ್ಯವನ್ನೆಲ್ಲಾ ತನ್ನ ಅಧೀನದಲ್ಲಿಟ್ಟುಕೊಂಡು ನೀರನ್ನೂ ಭೂಮಿಯಲ್ಲಿ ಅಲ್ಲಾಡದ ರೀತಿಯಲ್ಲಿಟ್ಟು ಜಲಂಧರನು ತಂದೆಯು ಕೊಟ್ಟ ರಾಜ್ಯ ವನ್ನು ಆಳುತ್ತಿದ್ದನು.

ಅತ್ರಾಂತರೇಪ್ಸರಾಃ ಕಾಚಿತ್ ಸ್ವರ್ಣಾಖ್ಯಾಸೀತ್ಪುರಾ ದಿವಿ ।
ತಸ್ಯಾಃ ಕ್ರೌಂಚಪ್ರಸಾದೇನ ವೃಂದಾ ನಾಮ ಸುತಾಭವತ್ || ೪೪ ||

ಧಾತ್ರಾ ವಿಭವಸಂಯುಕ್ತಂ ಸೌಂದರ್ಯಂ ಯತ್ಕೃತಂ ಪೃಥಕ್ ।
ತತ್ತದೇಕಗತಂ ದ್ರಷ್ಟುಂ ವೃಂದಾಗಾತ್ರಂ ವಿನಿರ್ಮಿತಂ || ೪೫ ||

ತಾಂ ವೃಂದಾಮತಿಚಾರ್ವಂಗೀಂ ಪ್ರಮದಾಜನಮೋಹಿನೀಂ ।
ಸ್ವರ್ಣಾಂ ಜಾಲಂಧರಸ್ಯಾರ್ಥೇ ದದೌ ಶುಕ್ರಾಯ ಯಾಚತೇ || ೪೬ ||

|| ಶುಕ್ರ ಉವಾಚ ||

ಕಂದರ್ಪಸ್ಯ ಜಗನ್ನೇತ್ರಶಸ್ತ್ರೇಣಾಶ್ಚರ್ಯಕಾರಿಣಾ ।
ರೂಪೇಣಾನೇನ ರಂಭೋರು ದೀರ್ಘಾಯುಸ್ಸುಖಿನೀ ಭವ || ೪೭ ||

---

೪೪. ಇತ್ತ ಸ್ವರ್ಗದಲ್ಲಿ ಸ್ವರ್ಣಳೆಂಬ ಹೆಸರುಳ್ಳ ಒಬ್ಬ ಅಪ್ಸರಸ್ತ್ರೀಯು ಇದ್ದಳು. ಅವಳಿಗೆ ಕ್ರೌಂಚಋಷಿಯ ಅನುಗ್ರಹದಿಂದ ವೃಂದೆಯೆಂಬ ಮಗಳಾಗಿದ್ದಳು.

೪೫. ಬ್ರಹ್ಮನು ಅತ್ಯುತ್ಕೃಷ್ಟವಾಗಿ ಯಾವ ಯಾವ ಸೌಂದರ್ಯಗಳನ್ನು ಬೇರೆ ಬೇರೆಯಾಗಿ ನಿರ್ಮಿಸಿದ್ದನೋ ಅವೆಲ್ಲವನ್ನೂ ಒಂದೆಡೆಯಲ್ಲಿ ನೋಡಬೇಕೆಂಬ ಇಷ್ಟದಿಂದ ಅವನು ಈ ವೃಂದೆಯ ದೇಹವನ್ನು ನಿರ್ಮಿಸಿದ್ದನು.

೪೬. ಬಹಳ ಸುಂದರಿಯಾದ, ಹೆಂಗಸರಿಗೆ ಮೋಹವನ್ನುಂಟುಮಾಡುವ ಆ ವೃಂದೆಯನ್ನು ಕೊಡೆಂದು ಸ್ವರ್ಣೆಯನ್ನು ಶುಕ್ರಾಚಾರ್ಯನು ಜಲಂಧರನಿಗೆ ಕನ್ಯಾರ್ಥಿಯಾಗಿ ಕೇಳಲು ಆ ಕ್ರೌಂಚನು ಕೊಟ್ಟನು.

೪೭. ಶುಕ್ರನು ಹೇಳಿದನು-ಪ್ರಪಂಚಕ್ಕೆಲ್ಲಾ ಮುಖ್ಯ ಶಸ್ತ್ರವಾದ, ಆಶ್ಚರ್ಯಕಾರಿಯಾದ ಮನ್ಮಥನಿಗೆ ಶಸ್ತ್ರದಂತಿರುವ ಈ ರೂಪಿನಿಂದ ಕೂಡಿಕೊಂಡು ಎಲೈ ರಂಭೋರುವೇ ! ನೀನು ದೀರ್ಘಾಯುಸ್ಸುಳ್ಳವಳಾಗಿ ಸುಖವಾಗಿರು.

ನಿರ್ಮಾಯ ಸ್ವಯಮೇವ ವಿಸ್ಮಿತಮನಾಃ ಸೌಂದರ್ಯಸಾರೇಣ ತಂ
ಸ್ವಸ್ಯಾಪಾರಪರಿಶ್ರಮಸ್ಯ ಕಲುಷಂ ವೇಧಾಃ ಸಮಾರೋಪಯತ್ ।
ಕಂದರ್ಪಂ ಪುರುಷಂ ಸ್ತ್ರೀಯೋ ವಿದಧತೋ ಯಸ್ಮಿನ್ನದೃಷ್ಟೇ ಸತಿ
ದೃಷ್ಟ್ವಾಸ್ಯಾವಧಿರೂಪಮಾಪ್ನುಹಿ ಪತಿಂ ತಂ ದೀರ್ಘನೇತ್ರಂ ಭಟಂ ॥ ೪೮ ॥

ಉಪಯೇಮೇ ವಿವಾಹೇನ ಗಾಂಧರ್ವೇಣಾರ್ಣವಾತ್ಮಜಃ ।
ವೃಂದಾಂ ತೌ ದಂಪತೀ ಜಾತೌ ಜನಾನಂದಕರೌ ನೃಪ ॥ ೪೯ ॥

ಚಂಚಲತ್ವಂ ಪರಿತ್ಯಕ್ತಂ ತಯಾ ಜಲಂಧರೋಽಪಿ ಹ ।
ವೃತ್ತೇನ ವೃದ್ಧಕಾರ್ಯೇಣ ಒಕಮೇ ನ ಪರಸ್ತ್ರಿಯಂ ॥ ೫೦ ॥

---

೪೮. ಬ್ರಹ್ಮನು ಸೌಂದರ್ಯಸಾರದಿಂದ ಆ ಜಲಂಧರನನ್ನು ನಿರ್ಮಿಸಿ ನನಗೆ ಹೀಗೆ ಮಾಡಲು ಬರುವುದೇ ಇಲ್ಲ! ಇವನು ಹೇಗೆ ಇಷ್ಟೊಂದು ರೂಪ ವಂತನಾಗಿದ್ದಾನೆಂದು ಆಶ್ಚರ್ಯಪಡುತ್ತಾ ತನ್ನ ಕೆಲಸವು ಸರಿಯಾಗಿ ಅಭ್ಯಾಸವಾಗ ಲಿಲ್ಲವೆಂದು ಅದರಲ್ಲಿ ದೋಷವನ್ನು ಕಂಡುಕೊಂಡನು. ಆಗ ಆ ಬ್ರಹ್ಮನು ಈ ಜಲಂಧರನನ್ನು ನೋಡಿಲ್ಲದಿದ್ದುದರಿಂದ ಹೆಂಗಸರಿಗೆ ರೂಪವಂತನನ್ನು ನೋಡಲು ಕಂದರ್ಪನೇ ಮೊದಲನೆಯವನೆಂದು ಮಾಡಿದ್ದನು. ಈಗ ಇವನನ್ನು ನೋಡಿದ ಮೇಲೆ ಕಂದರ್ಪನಿಗಿಂತಲೂ ಜಲಂಧರನೇ ರೂಪವಂತನೆಂದು ಗೊತ್ತಾಯಿತು. ಆದ್ದರಿಂದ ಆ ಸೌಂದರ್ಯವಂತರಲ್ಲಿ ಮೊದಲನೆಯವನಾದ ಕಮಲಾಕ್ಷನಾದ, ಭಟನಾದ, ಆತನನ್ನು ಗಂಡನನ್ನಾಗಿ ಹೊಂದಿ ಸುಖಿಸು.

೪೯. ಆಗ ಸಮುದ್ರರಾಜನ ಮಗನಾದ ಜಲಂಧರನು ವೃಂದೆಯನ್ನು ಗಾಂಧರ್ವ ವಿವಾಹದಿಂದ ಮದುವೆಯಾದನು. ಆ ದಂಪತಿಗಳು ಜನರಿಗೆ ಆನಂದ ವನ್ನು ಉಂಟುಮಾಡುವವರಾದರು.

೫೦. ಈ ಸುಂದರನನ್ನೂ ಐಶ್ವರ್ಯವಂತನನ್ನೂ ಹೊಂದಿ ಆ ವೃಂದೆಯು ತೃಪ್ತಳಾಗಿ ಚಂಚಲ ಸ್ವಭಾವವನ್ನು ಬಿಟ್ಟಳು. ಹಿಂದಿನವರ ಒಳ್ಳೆಯ ನಡತೆ ಯನ್ನು ಹೊಂದಿ ಸೌಂದರ್ಯದಿಂದಲೂ ತೃಪ್ತನಾಗಿ ಆತನೂ ಬೇರೆಯ ಹೆಂಗಸ ರನ್ನು ಕಣ್ಣೆತ್ತಿಯೂ ನೋಡಲಿಲ್ಲ.

**ಕದಾಚಿತ್ಸಮಮಾಸೀನೋ ದೃಷ್ಟ್ವಾ ರಾಹುಶಿರೋ ಹೃತಂ ।**
**ಕಸ್ಮಾತ್ಕಾಯಾರ್ಧಶೇಷೋಽಯಮಿತಿ ಪಪ್ರಚ್ಛ ಭಾರ್ಗವಂ ॥ ೫೧ ॥**

**ಸ ತಸ್ಯ ಕಥಯಾಮಾಸ ಪೂರ್ವವೃತ್ತಾಂತಮಾದಿತಃ ।**
**ಯಥಾ ನಿರ್ಮಥಿತೋ ದೇವೈಃ ಕ್ಷೀರೋದೋಽಮೃತಕಾರಣಾತ್ ॥ ೫೨ ॥**

**ತಚ್ಛ್ರುತ್ವಾ ವಿಸ್ಮಿತೋ ವಾಕ್ಯಂ ಪ್ರಾಹ ಜಾಲಂಧರೋಽಸುರಃ ।**
**ಪ್ರಸಾದಸುಮುಖೋ ರಾಹುಂ ಕಾಮರೂಪೋ ಭವಾಧುನಾ ॥ ೫೩ ॥**

**ಇತಿ ಶುಕ್ರಸ್ಯ ಮಂತ್ರೇಣ ಸಿಂಧುಸೂನುಃ ಪ್ರತಾಪವಾನ್ ।**
**ಪಿತೃವ್ಯಂ ಸಂಸ್ಮರನ್ವೀರೋ ವಿಗ್ರಹಂ ತ್ವಕರೋತ್ಸುರೈಃ ॥ ೫೪ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ವೃಂದಾವಿವಾಹ ಜಾಲಂಧರ ಅಭಿಷೇಕೋ ನಾಮ ಚತುರ್ಥೋಽಧ್ಯಾಯಃ**

---

೫೧. ಎಲ್ಲರೂ ಒಂದು ಸಾರಿ ಜೊತೆಯಲ್ಲಿ ಕುಳಿತಿರುವಾಗ್ಗೆ ರಾಹುವನ್ನು ನೋಡಿ ಇವನ ತಲೆಯೆಲ್ಲಿ ಹೋಯಿತು ? ಇವನು ಏತಕ್ಕೆ ಅರ್ಧಶರೀರವುಳ್ಳವ ನಾದನು ? ಎಂದು ಶುಕ್ರನನ್ನು ಕೇಳಿದನು.

೫೨. ದೇವತೆಗಳು ಅಮೃತಕ್ಕೋಸ್ಕರ ಕ್ಷೀರಸಮುದ್ರವನ್ನು ಕಡೆದ ವಿಷಯವನ್ನು ಆ ಜಲಂಧರನಿಗೆ ಶುಕ್ರನು ಮೊದಲಿನಿಂದಲೂ ಹೇಳಿದನು.

೫೩. ಆಗ ಆಶ್ಚರ್ಯಗೊಂಡ ಆ ಜಲಂಧರನು ರಾಹುವನ್ನು ಕುರಿತು ಅನು ಗ್ರಹ ಬುದ್ಧಿಯಿಂದ ಕೂಡಿ ಎಲೈ ರಾಹುವೇ ! ಈಗ ನೀನು ಇಷ್ಟಬಂದ ರೂಪ ಉಳ್ಳವನಾಗು ಎಂದನು.

೫೪. ಈ ರೀತಿಯಾಗಿ ಶುಕ್ರನ ಮಂತ್ರದಿಂದ ಪ್ರತಾಪಶಾಲಿಯಾದ ಜಲಂಧರನು ಚಿಕ್ಕತಂದೆಯನ್ನು ಸ್ಮರಿಸಿ ದುಃಖಿಸುತ್ತಾ ದೇವತೆಗಳೊಡನೆ ಯುದ್ಧ ವನ್ನು ಮಾಡಿದನು.

ಇಂತು ಪದ್ಮಮಹಾಪುರಾಣದ ಉತ್ತರ ಖಂಡದಲ್ಲಿ ಯುಧಿಷ್ಠಿರ ನಾರದ ಸಂವಾದದ ಜಾಲಂಧರನ ಕಥೆಯಲ್ಲಿ ವೃಂದಾವಿವಾಹ, ಜಾಲಂಧರನ ರಾಜ್ಯಾಭಿಷೇಷಕವೆಂಬ ನಾಲ್ಕನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚಮೋಽಧ್ಯಾಯಃ ॥



**॥ ಯುಧಿಷ್ಠಿರ ಉವಾಚ ॥**

**ಕಃ ಪಿತೃವ್ಯಃ ಸಿಂಧುಸೂನೋಃ ಕಿಂ ವೃತ್ತಂ ತಸ್ಯ ವಿಗ್ರಹೇ ।**
**ಯುಯುಧೇ ಸ ಕಥಂ ದೈತ್ಯಸ್ತನ್ಮೇ ಕಥಯ ನಾರದ ॥ ೧ ॥**

**॥ ನಾರದ ಉವಾಚ ॥**

**ಶೃಣು ತ್ವಂ ನೃಪಶಾರ್ದೂಲ ಪಿತೃವ್ಯಃ ಕ್ಷೀರಸಾಗರಃ ।**
**ಜಾಲಂಧರಸ್ಯ ತಂ ದೇವೈಃ ಪ್ರಮಥ್ಯ ಧನಮಾಹೃತಂ ॥ ೨ ॥**

**ಶ್ರೀ ಚಂದ್ರಾಮೃತನಾಗಾಶ್ಚ ಪೂರ್ವಂ ತಸ್ಯ ಸುರಾಸುರೈಃ ।**
**ತಚ್ಛ್ರುತ್ವಾ ವಿಗ್ರಹಂ ಚಕ್ರೇ ದೇವೈರ್ಜಾಲಂಧರೋಽಸುರಃ ॥ ೩ ॥**

---

## ಐದನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು– ಎಲೈ ನಾರದನೇ! ಜಲಂಧರನಿಗೆ ಪಿತೃವ್ಯ [ತಂದೆಯ ಜೊತೆಯಲ್ಲಿ ಹುಟ್ಟಿದವನು] ಯಾರು? ಆ ಜಲಂಧರನು ಹೇಗೆ ಯುದ್ಧಮಾಡಿದನೆಂಬುದನ್ನು ನನಗೆ ಹೇಳು.

೨. ನಾರದನು ಹೇಳಿದನು– ಎಲೈ ದೊರೆಯೇ! ಕೇಳು. ಆ ಜಲಂಧರನಿಗೆ ತಂದೆಯ ಜೊತೆಯಲ್ಲಿ ಹುಟ್ಟಿದವನು ಕ್ಷೀರಸಾಗರನು. ದೇವತೆಗಳು ಆ ಕ್ಷೀರಸಾಗರನನ್ನು ಕಡೆದು ಅವನಲ್ಲಿ ಇದ್ದುದನ್ನೆಲ್ಲಾ ಕಿತ್ತುಕೊಂಡರು.

೩. ಹಿಂದೆ ಈ ಕ್ಷೀರಸಮುದ್ರವನ್ನು ಕಡೆದು ಲಕ್ಷ್ಮಿ, ಚಂದ್ರ, ಅಮೃತ, ಐರಾವತ, ಇವುಗಳನ್ನು ಕದ್ದು ಇರುವುದನ್ನು ಕೇಳಿದನು. ಅದನ್ನು ಕೇಳಿ ಅವರೊಡನೆ ಯುದ್ಧಮಾಡಲು ಮನಸ್ಸುಮಾಡಿದನು.

ಕದಾಚಿತ್ಪ್ರೇಷಯಾಮಾಸ ದೂತಂ ದುರ್ವ್ಯಾರಣಂ ಬಲೀ ।
ಶಿಕ್ಷಯಿತ್ವಾ ತು ವಕ್ತವ್ಯಂ ದೇವೇಂದ್ರಭವನಂ ಪ್ರತಿ　　॥ ೪ ॥

ಅಥ ಸ್ಯಂದನಮಾರುಹ್ಯ ಯಯೌ ದುರ್ವ್ಯಾರಣೋ ದಿವಿ ।
ಪ್ರವೇಷ್ಟುಕಾಮೋ ಭವನಂ ದ್ವಾಃಸ್ಥೈರ್ದ್ವಾರಿ ನಿವಾರಿತಃ　　॥ ೫ ॥

॥ ದೂತ ಉವಾಚ ॥

ಜಾಲಂಧರಸ್ಯ ದೂತೋಽಹಮಾಗತಃ ಶಕ್ರಸನ್ನಿಧೌ ।
ಗತ್ವಾ ತತ್ರ ಭವಂತೋ ಮಾಂ ವಿಜ್ಞಾಪಯಿತುಮರ್ಹತ　　॥ ೬ ॥

॥ ನಾರದ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ತದೈವ ತು ಶಚೀಪತಿಂ ।
ಗತ್ವಾ ಚ ಪ್ರಣಿಪತ್ಯಾಹ ದೂತೋ ದೇವಾಗತೋ ಭುವಃ　　॥ ೭ ॥

---

೪. ಅನಂತರ ಒಂದು ಸಲ ದುರ್ವ್ಯಾರಣನೆಂಬ ದೂತನಿಗೆ ಹೇಳತಕ್ಕುದೆಲ್ಲವನ್ನೂ ಹೇಳಿ ಕಲಿಸಿ, ದೇವೇಂದ್ರನಿಗೆ ಈರೀತಿ ಹೇಳೆಂದು ಕಳುಹಿಸಿದನು.

೫. ಅನಂತರ ದೂತನಾದ ದುರ್ವ್ಯಾರಣನು ರಥವಲ್ಲಿ ಕುಳಿತು ಸ್ವರ್ಗಕ್ಕೆ ಹೋದನು. ಹೋಗಿ ಇಂದ್ರನ ಮನೆಯನ್ನು ಒಳಹೋಗಲು ಹೋದಾಗ ಬಾಗಿಲು ಕಾಯುವವರು ಅವನನ್ನು ತಡೆದರು.

೬. ದೂತನು ಹೇಳಿದನು– ನಾನು ಜಲಂಧರನ ದೂತನು ಇಂದ್ರನನ್ನು ನೋಡಲು ಬಂದಿದ್ದೇನೆ. ನೀವು ಆ ಇಂದ್ರನಲ್ಲಿಗೆ ಹೋಗಿ ನಾನು ಬಂದಿರುವುದನ್ನು ತಿಳಿಸಿರಿ.

೭. ನಾರದನು ಹೇಳಿದನು– ಆ ಇಂದ್ರನ ದೂತರು ಈ ಮಾತನ್ನು ಕೇಳಿದೊಡನೆಯೇ ಇಂದ್ರನ ಬಳಿಗೆ ಬಂದು ಅವನಿಗೆ ನಮಸ್ಕರಿಸಿ ಭೂಮಿಯಿಂದ ಒಬ್ಬ ದೂತನು ಬಂದಿದ್ದಾನೆ. ಎಂದು ತಿಳಿಸಿದರು.

ದೌವಾರಿಕೋ ಮಹೇಂದ್ರೇಣ ಪ್ರತ್ಯುಕ್ತೋ ದೂತಮಾನಯ ।
ಹಸ್ತೇ ಗೃಹೀತ್ವಾ ತಂ ದೂತಂ ವಾಸವಾಂತಿಕಮಾನಯತ್ ॥ ೮ ॥

ದುರ್ವಾರಣೋ ದೇವಸಭಾಂ ಪ್ರವಿಷ್ಟಃ ಪ್ರವ್ಯಲೋಕಯತ್ ।
ಹರಿಂ ದೇವೈಸ್ತ್ರಯಸ್ತ್ರಿಂಶತ್ಕೋಟಿಭಿಃ ಪರಿವೇಷ್ಟಿತಂ ॥ ೯ ॥

ಸ್ವರ್ಣಸಿಂಹಾಸನೇ ದಿವ್ಯಚಾಮರಾನಿಲಸೇವಿತಂ ।
ಶಚೀಪ್ರೇಮರಸೋತ್ಫುಲ್ಲ ನಯನಾಬ್ಜ ಸಹಸ್ರಕಂ ॥ ೧೦ ॥

ದುರ್ವಾರಣೋಪಿ ದೇವೇಶಂ ವಿಲೋಕ್ಯ ಗುರುಣಾ ಸಹ ।
ಪ್ರಣನಾಮಾತ್ಮಗರ್ವೇಣ ಪ್ರಹಸನ್ನಯನಶ್ರಿಯಂ ॥ ೧೧ ॥

ನಿರ್ದಿಷ್ಟಮಾಸನಂ ಭೇಜೇ ದೂತೋ ಜಾಲಂಧರಸ್ಯ ಸಃ ।
ತಸ್ಯ ತ್ವಂ ಕೇನ ಕಾರ್ಯೇಣ ಪ್ರಾಪ್ತಃ ಪ್ರಾಹೇತಿ ತಂ ಹರಿಃ ॥ ೧೨ ॥

---

೮. ಮಹೇಂದ್ರನು ದ್ವಾರಪಾಲಕನಿಗೆ ದೂತನನ್ನು ಕರೆದುಕೊಂಡು ಬಾ. ಎಂದು ಹೇಳಲು, ದ್ವಾರಪಾಲಕನು ದೂತನನ್ನು ಕೈಯ್ಯಲ್ಲಿ ಹಿಡಿದುಕೊಂಡು ಇಂದ್ರನ ಬಳಿಗೆ ಕರೆತಂದನು.

೯. ಆ ದೂತನಾದ ದೂರ್ವಾರಣನು ದೇವಸಭೆಯನ್ನು ಹೊಕ್ಕು ಮೂವತ್ತಮೂರು ಕೋಟಿ ದೇವತೆಗಳಿಂದ ಕೂಡಿ ಅವರಿಂದ ಸೇವಿಸಲ್ಪಡುತ್ತಿರುವ ಇಂದ್ರನನ್ನು ನೋಡಿದನು.

೧೦. ಆ ಇಂದ್ರನು ಚಿನ್ನದ ಸಿಂಹಾಸನದಲ್ಲಿದ್ದುಕೊಂಡು ದಿವ್ಯವಾದ ಚಾಮರದ ಗಾಳಿಯಿಂದ ಸೇವಿಸಲ್ಪಡುತ್ತಿದ್ದನು. ಮತ್ತು ಶಚೀದೇವಿಯಲ್ಲಿನ ಪ್ರೇಮರಸದಿಂದ ಸಾವಿರಕಣ್ಣುಗಳೂ ಅರಳಿದ್ದವು.

೧೧. ಈ ದುರ್ವಾರಣನು ಬೃಹಸ್ಪತಿಯಿಂದ ಕೂಡಿರುವ ದೇವೇಂದ್ರನನ್ನು ನೋಡಿದನು. ಮತ್ತು ಸಾವಿರ ಕಣ್ಣುಗಳಿಂದ ನೋಡುತ್ತಿರುವ ಇಂದ್ರನನ್ನು ತಾನು ಗರ್ವದಿಂದ ನಮಸ್ಕರಿಸಿದನು.

೧೨. ಜಾಲಂಧರನ ಆ ದೂತನು ತನಗೆ ಹಾಕಿದ್ದ ಆಸನದಲ್ಲಿ ಕುಳಿತುಕೊಂಡನು. ಆಗ ಆ ಇಂದ್ರನು ನೀನು ಯಾರ ಕಡೆಯವನು ? ಏತಕ್ಕೆ ಬಂದಿದ್ದೀಯೆ ? ಎಂದು ಕೇಳಿದನು.

ದೂತೋ ಜಾಲಂಧರಸ್ಯಾಹಂ ಸ ಜಗಾದ ಪುರಂದರಂ ।
ಸ ರಾಜಾ ಸರ್ವಲೋಕಾನಾಂ ತಸ್ಯಾಜ್ಞಾಂ ಶೃಣು ಮನ್ಮುಖಾತ್ ॥ ೧೩ ॥

ಪಿತೃವ್ಯೋ ಮಮ ದುಗ್ಧಾಬ್ಧಿಸ್ತ್ವಯಾ ಕಸ್ಮಾದ್ವಿಲೋಡಿತಃ ।
ಮಂದರಾದ್ರಿವಿಧಾನೇನ ಹೃತಃ ಕೋಶೋ ಮಹಾಧನಃ ॥ ೧೪ ॥

ಶ್ರೀ ಚಂದ್ರಾಮೃತನಾಗಾಂಶ್ಚ ತನ್ಮಣಿಂ ವಿದ್ರುಮಾದಿಕಂ ।
ದೇಹಿ ಸರ್ವಂ ತಥಾ ಸ್ವರ್ಗಂ ಶೀಘ್ರಂ ತ್ಯಜ ಪುರಂದರ ॥ ೧೫ ॥

ಕಿಂ ಕೇಕೀವ ಶಿಖಂಡಿಮಂಡಿತತನುಃ ಸಾರೀವ ಕಿಂ ಸುಸ್ವರಃ
ಕಿಂ ವಾ ಹಂತ ಶಂಕುಂತಬಾಲಕಪಿತುಃ ಕರ್ಣಾಮೃತಸ್ಯಂದನಃ ।
ಕಿಂ ವಾ ಹಂಸ ಇವಾಂಗನಾಗತಿಗುರುಃ ಕಿಂ ಕೀರವತ್ಪಾಠಕಃ
ಕಾಕಃ ಕೇನ ಗುಣೇನ ಕಾಂಚನಮಯೇಽಲಂಕಾರಿತಃ ಪಂಜರೇ ॥ ೧೬ ॥

---

೧೩. ಆಗ ಜಲಂಧರನ ದೂತನೆಂದು ಆ ದುರ್ವಾರಣನು ಇಂದ್ರನಿಗೆ ಹೇಳಿ ಇಂತೆಂದನು- ಆ ಜಲಂಧರನು ಎಲ್ಲಾ ಲೋಕಕ್ಕೂ ರಾಜನು. ಅವನ ಆಜ್ಞೆಯನ್ನು ನನ್ನ ಬಾಯಿಂದ ಕೇಳು.

೧೪. ನನ್ನ ಚಿಕ್ಕಪ್ಪನಾದ ಕ್ಷೀರಸಮುದ್ರನನ್ನು ನೀನು ಮಂದರಪರ್ವತ ದಿಂದ ಕಡೆಯಲು ಕಾರಣವೇನು ? ಅವನ ಧನವೆಲ್ಲವನ್ನೂ ಅಪಹರಿಸಲು ಕಾರಣವೇನು ?

೧೫. ಲಕ್ಷ್ಮೀ, ಚಂದ್ರ, ಅಮೃತ, ಐರಾವತ, ಅನೇಕವಾದ ಮಣಿಗಳು, ಹವಳಗಳು ಇವೆಲ್ಲವನ್ನೂ ಜಾಗ್ರತೆಯಾಗಿ ಕೊಟ್ಟು, ಸ್ವರ್ಗವನ್ನೂ ಬಿಟ್ಟು ನೀನು ಜಾಗ್ರತೆಯಾಗಿ ಹೊರಡು.

೧೬. ಕಾಗೆಯು ನವಿಲಿನಂತೆ ಗರಿಗಳಿಂದ ಅಲಂಕೃತವಾಗಿದೆಯೇ ? ನಾರಿ ಕೆಯಂತೆ ಸ್ವರವಾದರೂ ಚೆನ್ನಾಗಿದೆಯೇ ? ಕಿವಿಗೆ ಇಂಪಾಗಿರುವಂತೆ ಕೋಗಿಲೆ ಯಂತೆ ಹಾಡಬಲ್ಲುದೇ ? ಹೆಣ್ಣು ಹಂಸದ ನಡಗೆಯಂತೆ ನಡೆಯಬಲ್ಲುದೆ ? ಗಿಣಿಯಂತೆ ಮಾತನಾಡಬಲ್ಲುದೆ ? ಆ ಕಾಗೆಯಲ್ಲಿ ಯಾವ ಗುಣವನ್ನು ನೋಡಿ ಚಿನ್ನದ ಪಂಜರದಲ್ಲಿ ಅದನ್ನು ಅಲಂಕರಿಸಿ ಇಟ್ಟಾರು ?

ಸ ತ್ವಂ ಮದ್ವಚನಾತ್ತೂರ್ಣಂ ಕುರು ಸರ್ವಂ ಯಥೋಚಿತಂ ।
ತತ್ ಕ್ಷಮಾಪಯ ಭೂಪಾಲಂ ಯದಿ ಜೀವಿತುಮಿಚ್ಛಸಿ ॥ ೧೭ ॥

॥ ನಾರದ ಉವಾಚ ॥

ಅಥ ಪ್ರಹಸ್ಯ ಮಘವಾ ಪ್ರಾಹ ದುರ್ವಾರಣಂ ಪ್ರತಿ ॥ ೧೮ ॥

॥ ಇಂದ್ರ ಉವಾಚ ॥

ಶೃಣು ದೂತ ಸಮಾಸೇನ ಸಿಂಧೋರ್ಮಥನಕಾರಣಂ ।
ಪುರಾ ಹಿಮವತಸ್ಸೂನುರ್ಮೈನಾಕೋ ನಾಮ ಮೇ ರಿಪುಃ ॥ ೧೯ ॥

ಸ ಕುಕ್ಷೌ ವಿಧೃತಸ್ತೇನ ಸಾಗರೇಣ ಜಡೇನ ಚ ।
ದಗ್ಧಂ ಚರಾಚರಂ ಯೇನ ವಹ್ನಿನಾ ಹಯರೂಪಿಣಾ ॥ ೨೦ ॥

ಸ ಚಾಪಿ ವಿಧೃತಸ್ತೇನ ಸಾಗರೇಣ ದುರಾತ್ಮನಾ ।
ಧರ್ಮದ್ವಿಷಾಂ ದಾನವಾನಾಮಸೌ ಪಾ ಆಶ್ರಯಃ ಪ್ರಭುಃ ॥ ೨೧ ॥

ನಿತ್ಯಂ ದಧಿಘೃತಂ ಕ್ಷೀರಂ ದಾನವೇಭ್ಯಃ ಪ್ರಯಚ್ಛತಿ ।
ಅತ ಏವಾಯಮಸ್ಮಾಭಿರ್ದುರ್ವಾರಣ ವಿಲೋಡಿತಃ ॥ ೨೨ ॥

---

೧೭- ಆದ್ದರಿಂದ ನಾನು ಹೇಳಿದಂತೆ ಎಲ್ಲವನ್ನೂ ಬೇಗನೆಮಾಡು. ನೀನು ಜೀವಿಸಬೇಕೆಂದಿದ್ದರೆ ಆ ರಾಜನಾದ ಜಾಲಂಧರನಲ್ಲಿ ಕ್ಷಮಾಪಣೆ ಕೇಳಿಕೋ.

೧೮. ನಾರದನು ಹೇಳಿದನು- ಆಗ ಇಂದ್ರನು ನಕ್ಕು ಆ ದುರ್ವಾರಣನನ್ನು ಕುರಿತು ಇಂತೆಂದನು.

೧೯-೨೨. ಇಂದ್ರನು ಹೇಳಿದನು-ಎಲೈ ದೂತನೇ ! ಸಮುದ್ರಮಥನ ಕಾರಣವನ್ನು ಸಂಗ್ರಹವಾಗಿ ಹೇಳುತ್ತೇನೆ. ಕೇಳು. ನನಗೆ ಶತ್ರುವಾದ ಹಿಮವಂತನ ಮಗನಾದ ಮೈನಾಕನನ್ನು ಈ ಕ್ಷೀರಸಮುದ್ರವು ತನ್ನ ಹೊಟ್ಟೆಯಲ್ಲಿ ಮುಚ್ಚಿಟ್ಟು ಕೊಂಡು ಆಶ್ರಯಕೊಟ್ಟಿತು. ಅಂತಹ ದಡ್ಡನು. ಕುದುರೆಯ ರೂಪವನ್ನು ಹೊಂದಿ ಯಾವ ಅಗ್ನಿಯು ಸ್ಥಾವರಜಂಗಮಗಳೆಲ್ಲವನ್ನೂ ಸುಟ್ಟಿತೋ ಅಂತಹ ದುಷ್ಟನಾದ ಅಗ್ನಿಯನ್ನು ಆ ಸಮುದ್ರನು ತನ್ನಲ್ಲಿ ಸೇರಿಸಿಕೊಂಡಿದ್ದನು. ಧರ್ಮದ್ವೇಷಿಗಳಾದ ದಾನವರಿಗೆ ಆ ಸಮುದ್ರನು ಆಶ್ರಯವನ್ನು ಕೊಟ್ಟು ಇರುವುದಲ್ಲದೆ ನಿತ್ಯವೂ ಅವರಿಗೆ ಹಾಲು ಮೊಸರು ತುಪ್ಪಗಳನ್ನು ಕೊಡುತ್ತಿದ್ದನು. ಎಲೈ ದುರ್ವಾರಣನೇ ! ಆದ್ದರಿಂದಲೇ ಅವನನ್ನು ನಾವು ಕಡೆದೆವು.

ದಂಡಿತಶ್ಚ ಗತಶ್ರೀಕೋ ದೇವೈರಥ ಪುರಾತನೈಃ ।
ಶೃಣು ದೂತ ಸಂಬಂಧೇನ ಮಮ ವಿಪ್ರೇಣ ಶೋಷಿತಃ ॥ ೨೩ ॥

ಕುಂಭೋದ್ಭವೇನ ಕಿಂಚಿತ್ತಂ ದುಸ್ಸಂಗೋ ನೈವ ಬಾಧತೇ ।
ಸೋಽಪಿ ಯುದ್ಧಾರ್ಥಮಸ್ಮಾಭಿಃ ಸರ್ವಸೈನ್ಯೇನ ಸಂವೃತಃ ॥
ಆಗಮಿಷ್ಯತಿ ವೈ ನಾಶಂ ಗಮಿಷ್ಯತಿ ತದೈವ ಹಿ ॥ ೨೪ ॥

॥ ನಾರದ ಉವಾಚ ॥

ಇತೀರಯಿತ್ವಾ ವಿರರಾಮ ವೃತ್ರಹಾ
ಸರಿತ್ಪತೇರಾತ್ಮಜದೂತಮುಚ್ಚಕೈಃ ।
ಶಶಂಸ ಚಾಗತ್ಯ ಸಮುದ್ರಸೂನೋಃ
ದೇವೇಶ್ವರೇಣೋಕ್ತಮಶೇಷಮಾದೃತಃ ॥ ೨೫ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಪಂಚಮೋಽಧ್ಯಾಯಃ

---

೨೩–೨೪. ಆದ್ದರಿಂದ ಅವನನ್ನು ಹಿಂದಿನವರೂ ಧರ್ಮವನ್ನು ಬಲ್ಲವರೂ ಆದ ದೇವತೆಗಳು ಶಿಕ್ಷಿಸಿ ಅವನ ಸಂಪತ್ತೆಲ್ಲವನ್ನೂ ಕಿತ್ತುಕೊಂಡರು. ಎಲೈ ದೂತನೇ! ಕೇಳು. ಅದೇ ವಿಷಯದ ಸಂಬಂಧದಿಂದ ಮತ್ತೊಂದನ್ನು ಹೇಳುತ್ತೇನೆ. ಅವನು ದುಷ್ಟನಾದುದರಿಂದಲೇ ನನ್ನ ಕಡೆಯ ಬ್ರಾಹ್ಮಣನಾದ ಅಗಸ್ತ್ಯನು ಆತನು ಬತ್ತಿಹೋಗುವಂತೆ ಮಾಡಿದನು. ದುಷ್ಟನಾದವನ ಸಹ ವಾಸವು ಅಯೋಗ್ಯನನ್ನು ತೊಂದರೆಪಡಿಸುವುದಿಲ್ಲವೆ! ಆ ಜಾಲಂಧರನು ನಮ್ಮೊಡನೆ ಯುದ್ಧಮಾಡಲು ಎಲ್ಲಾ ಸೈನ್ಯವನ್ನೂ ಸಿದ್ಧಮಾಡಿಕೊಂಡಿರುವನು. ಮತ್ತು ನಮ್ಮ ಮೇಲೆ ಯುದ್ಧಕ್ಕೂ ಬರುವನು. ಬಂದಾಗಲೇ ನಾಶವನ್ನೂ ಹೊಂದುವನು.

೨೫. ನಾರದನು ಹೇಳಿದನು– ಈ ರೀತಿಯಾಗಿ ಇಂದ್ರನು ಜಲಂಧರನ ದೂತನನ್ನು ಕುರಿತು ಗಟ್ಟಿಯಾಗಿ ಹೇಳಿ ಸುಮ್ಮನಾದನು. ಆ ದೂತನೂ ಕೂಡ ಹಿಂತಿರುಗಿ ಬಂದು ಜಲಂಧರನಿಗೆ ಇಂದ್ರನು ಹೇಳಿದುದನ್ನೆಲ್ಲಾ ಹೇಳಿದನು.

ಇಂತು ಶ್ರೀ ಪದ್ಮಮಹಾಪುರಾಣ ಉತ್ತರಖಂಡ ನಾರದ ಯುಧಿಷ್ಠಿರ ಸಂವಾದದಲ್ಲಿ ಜಾಲಂಧರೋಪಾಖ್ಯಾನವೆಂಬ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷಷ್ಠೋಽಧ್ಯಾಯಃ ॥



### ॥ ನಾರದ ಉವಾಚ ॥

**ಮಹೇಂದ್ರವಚನಂ ಶ್ರುತ್ವಾ ನಿಜದೂತಮುಖೇನ ಚ ।**
**ಸಮುದ್ರಸೂನುಸ್ಸಂಕ್ರುದ್ಧಃ ಸರ್ವಸೈನ್ಯಂ ಸಮಾಹ್ವಯತ್ ॥ ೧ ॥**

**ರಸಾತಲಸ್ಥಿತಾ ದೈತ್ಯಾ ಯೇ ಚ ಭೂತಲವಾಸಿನಃ ।**
**ಆಯಯುಸ್ಸಬಲಾಸ್ತತ್ರ ಜಾಲಂಧರಮಥಾಜ್ಞಯಾ ॥ ೨ ॥**

**ಪ್ರಯಾಣಪ್ರಕ್ರಮೇ ಸಿಂಧುಸೂನೋಃ ಸೈನ್ಯಸ್ಯ ಗರ್ಜಿತೈಃ ।**
**ಸ್ಫುಟಂತಿ ನಭಸೋ ರಾಜನ್ಪಾತಾಲಮಖಿಲಾ ದಿಶಃ ॥ ೩ ॥**

---

### ಆರನೆಯ ಅಧ್ಯಾಯವು

೧. ನಾರದನು ಹೇಳಿದನು- ಜಲಂಧರನು ದೂತನ ಮುಖದಿಂದ ಮಹೇಂದ್ರನ ಮಾತನ್ನು ಕೇಳಿ ಕೋಪಗೊಂಡು ಎಲ್ಲ ಸೈನ್ಯವನ್ನೂ ಒಟ್ಟು ಗೂಡಿಸಿದನು.

೨. ರಸಾತಳ, ಮತ್ತು ಭೂತಳದಲ್ಲಿದ್ದ ದೈತ್ಯರೆಲ್ಲರೂ ಜಲಂಧರನ ಅಪ್ಪಣೆ ಯಂತೆ ತಮ್ಮ ತಮ್ಮ ಸೈನ್ಯಗಳನ್ನು ತೆಗೆದುಕೊಂಡು ಆ ಜಲಂಧರನಿದ್ದಲ್ಲಿಗೆ ಬಂದರು.

೩. ಜಲಂಧರನ ಪ್ರಯಾಣಕಾಲದಲ್ಲಿ ಅವನ ಸೈನ್ಯದ ಗರ್ಜನೆಯಿಂದ ಆಕಾಶವೂ ಪಾತಾಳವೂ ಎಲ್ಲಾ ದಿಕ್ಕುಗಳೂ ಒಡೆದು ಹೋಗುತ್ತಿದ್ದುವು.

**ಹಯನಾಗೋಷ್ಟ್ರವದನಾ ಬಿಡಾಲಮುಖಭೀಷಣಾಃ ।**
**ವ್ಯಾಘ್ರಸಿಂಹಾಖುವದನಾ ಹದ್ಯುತ್ಸದೃಶಲೋಚನಾಃ ॥ ೪ ॥**

**ಸರ್ಪಕೇಶಾ ಮಹಾದೇಹಾಃ ಕೇಚಿತ್ಖಡ್ಗತನೂರುಹಾಃ ।**
**ಅನ್ಯೇ ಚ ಪರಿಧಾವಂತಿ ಗರ್ಜಂತಿ ಜಲದಸ್ವನೈಃ ॥ ೫ ॥**

**ರಥಗಜಹಯಪಂಕ್ತಿಸಂಕುಲಂ**
**ಸಮರವಿನೋದಕದಂಬಭಾಸುರಂ ।**
**ಅಬ್ಜಶತಸಹಸ್ರಕೋಟಿನಾಯಕಂ**
**ಬಲಮಖಿಲಂ ಚ ತದಾ ರರಾಜ ರಾಜನ್ ॥ ೬ ॥**

**ಶತಯೋಜನವಿಸ್ತೀರ್ಣಂ ವಿಮಾನಂ ಹಂಸಕೋಟಿಭಿಃ ।**
**ಯುಕ್ತಂ ಭಾತಿ ಸಹಸ್ರೌಘಂ ಸರ್ವವಸ್ತುಪ್ರಪೂರಿತಂ ॥ ೭ ॥**

---

೪-೫. ಆ ಸೈನ್ಯದಲ್ಲಿ ಕೆಲವರು ಕುದುರೆ, ಆನೆ, ಒಂಟೆಗಳ ಮುಖದಂತೆ ಮುಖವುಳ್ಳವರು. ಮತ್ತೆ ಕೆಲವರು ಬೆಕ್ಕಿನ ಮುಖದಂತೆ ಹೆದರಿಕೆಯನ್ನುಂಟು ಮಾಡುವ ಮುಖವುಳ್ಳವರು. ಇನ್ನು ಕೆಲವರು ಹುಲಿ, ಸಿಂಹ, ಇಲಿಗಳ ಮುಖದಂತೆ ಮುಖವುಳ್ಳವರು. ಕೆಲವರು ಮಿಂಚಿನಂತಿರುವ ಕಣ್ಣುಳ್ಳವರು. ಕೆಲವರಿಗೆ ತಲೆಗೂದಲು ಸರ್ಪಗಳಂತಿದ್ದುವು. ಮತ್ತೆ ಕೆಲವರುಗಳ ಮೈಗೂದಲು ಕತ್ತಿಗಳಂತಿದ್ದುವು. ಇವರು ಮತ್ತು ಉಳಿದವರೂ ಕೂಡ ಓಡಿಬರುತ್ತಿದ್ದರು. ಗುಡುಗಿನಂತೆ ಗರ್ಜಿಸುತ್ತಿದ್ದರು.

೬. ರಥ, ಆನೆ, ಕುದುರೆ, ಕಾಲಾಳುಗಳಿಂದ ಕೂಡಿದ, ಯುದ್ಧದ ಆನಂದದಿಂದ ಪ್ರಕಾಶಿಸುತ್ತಿರುವ, ಪದ್ಮಕ್ಕೆ, ಕೋಟಿಗೆ, ಲಕ್ಷಕ್ಕೆ, ಹತ್ತುಸಾವಿರಕ್ಕೆ ಸಾವಿರಕ್ಕೆ, ನೂರಕ್ಕೆ ಈರೀತಿಯಾಗಿ ಬೇರೆ ಬೇರೆ ಸೇನಾಪತಿಗಳುಳ್ಳ, ಆ ದೈತ್ಯರ ಸೇನೆಯು ಹೊರಟಿರುವುದು ಕಂಡು ಬಂದಿತು.

೭. ನೂರು ಯೋಜನ ವಿಸ್ತಾರವುಳ್ಳ, ಅನೇಕವಾಗಿ ಹಂಸಗಳನ್ನು ಕಟ್ಟಿದಿರುವ, ಅನೇಕ ಪ್ರತ್ಯಾಸವಾದ ಸ್ಥಳಗಳಿಂದ ಕೂಡಿದ, ಎಲ್ಲಾ ಪದಾರ್ಥಗಳನ್ನೂ ತುಂಬಿರುವ, ಆ ಜಲಂಧರನ ವಿಮಾನವು ಪ್ರಕಾಶಿಸಿತು.

ತದ್ವಿಮಾನಂ ಸಮಾರುಹ್ಯ ಸದ್ಯೋ ಜಾಲಂಧರೋ ಯಯೌ ।
ಮಧ್ಯಾಹ್ನೇ ಮಂದರಂ ಪ್ರಾಪ್ತಃ ಪ್ರಥಮೇಽಹ್ನಿ ಬಲೈಸ್ಸಹ ॥ ೮ ॥

ಖಂಡಿತಂ ಶಿಬಿಕಾವಾಹ್ಯೈಃ ದಲಿತಂ ಭೂರಿ ಕುಂಜರೈಃ ।
ದ್ವಿತೀಯೇ ದಿವಸೇ ಮೇರುಂ ಸಂಪ್ರಾಪ್ತೋ ಬಲಸಂಯುತಃ ॥ ೯ ॥

ಇಲಾವೃತೇ ತು ಶಿಖರೇ ತಸ್ಥೌ ತತ್ಕಟಕಂ ಮಹತ್ ।
ಆಯಂ ಪದಾತಿಭಿರ್ಭಗ್ನಂ ಖಾಡವಂ ನಂದನಂ ವನಂ ॥ ೧೦ ॥

ಶಿಖರಾಣಿ ವಿಶೀರ್ಣಾನಿ ಮೇರೋರ್ದಾನವಪುಂಗವೈಃ ।
ಸಂತಾನಕೇಷು ವೃಕ್ಷೇಷು ಬದ್ಧ್ವಾ ಹಿಂದೋಲಮುಚ್ಚಕೈಃ ॥ ೧೧ ॥

ಸಿದ್ಧಾಂಗನಾಭಿಸ್ಸಹಿತಾ ರೇಮಿರೇ ದೈತ್ಯಪುಂಗವಾಃ ।
ಕುಚಕುಂಕುಮತಾಂಬೂಲಚಂದನಾಗರುಭೂಷಣೈಃ ॥ ೧೨ ॥

---

೮. ಈ ಜಲಂಧರನು ಅಂತಹ ವಿಮಾನವನ್ನು ಹತ್ತಿ ಸೈನ್ಯಸಹಿತನಾಗಿ ಹೊರಟು ಮೊದಲನೆಯ ದಿನ ಮಧ್ಯಾಹ್ನಕ್ಕೆ ಮಂದರಪರ್ವತವನ್ನು ಹೊಂದಿದನು.

೯. ಆಗ ಆ ಮಂದರಪರ್ವತವನ್ನು ಪಲ್ಲಕ್ಕಿಯನ್ನು ಹೊತ್ತುಕೊಂಡು ಹೋಗುವುದಕ್ಕೆ ಅನುಕೂಲವಾಗುವಂತೆ ಅವರ ಕಡೆಯವರೂ ಮತ್ತು ಅವನ ಆನೆಗಳೂ ಬಹುವಾಗಿ ಮುರಿದು ನಾಶಮಾಡಿದುವು. ಅನಂತರ ಎರಡನೆಯ ದಿವಸಕ್ಕೆ ಮೇರುಪರ್ವತವನ್ನು ಹೊಂದಿ ಅಲ್ಲಿ ಪಾಳಯವನ್ನು ಬಿಟ್ಟನು.

೧೦. ಆ ಮೇರುಪರ್ವತದ ಇಲಾವೃತವೆಂಬ ಶಿಖರದಲ್ಲಿ ಇವನ ಸೈನ್ಯವು ಬೀಡುಬಿಟ್ಟಿತು. ಈ ಶಿಖರವನ್ನೂ ಅಲ್ಲಿರುವ ಖಾಂಡವವೆಂಬ ವನವನ್ನೂ ಈ ಜಲಂಧರನ ಕಾಲಾಳುಗಳು ನಾಶಪಡಿಸಿದರು.

೧೧–೧೪. ಈ ದಾನವರು ಆ ಮೇರುವಿನ ಶಿಖರಗಳನ್ನೆಲ್ಲಾ ನಾಶಪಡಿಸಿದರು. ಕಲ್ಪವೃಕ್ಷಕ್ಕೆ ಎತ್ತರವಾಗಿ ಉಯ್ಯಾಲೆಯನ್ನು ಕಟ್ಟಿ ಆಡುತ್ತಾ ಅಲ್ಲಿದ್ದ ಸಿದ್ಧ ಸ್ತ್ರೀಯರ ಜೊತೆಯಲ್ಲಿ ಸ್ವೇಚ್ಛೆಯಾಗಿ ವಿಹರಿಸಿದರು. ಆ ದೈತ್ಯ ಸ್ತ್ರೀಯರ ಮತ್ತು ದೈತ್ಯರ ಸ್ತನಪ್ರದೇಶದಲ್ಲಿ ಬಳಿದುಕೊಂಡಿದ್ದ ಕುಂಕುಮಕೇಸರಿ, ಬಾಯಿನ ತಾಂಬೂಲ, ಬಳಿದುಕೊಂಡಿದ್ದ ಚಂದನದ ಗಂಧ ಅಗರು ಇವನ್ನು ತೊಳೆದುದ

ಕೇಶಪಾಶಚ್ಯುತೈಃ ಪುಷ್ಪೈರ್ಮೇರೋಸ್ಸಂಪೂರಿತಾ ನದೀ ।
ಸುಮೇರೋಃ ಪೂರ್ವದಿಗ್ಭಾಗೋ ಗಜೈಸ್ತಸ್ಯ ವಿಘಟ್ಟಿತಃ ॥ ೧೩ ॥

ದಕ್ಷಿಣಂ ಚ ರಥೈಶ್ಚೈರುರುತ್ತರಂ ಪಶ್ಚಿಮಂ ಭಟೈಃ ।
ಅಥ ಪ್ರಸ್ಥಾಪಯಾಮಾಸ ದೈತ್ಯಾನ್ ಜಾಲಂಧರೋಽಸುರಃ ॥ ೧೪ ॥

ಮಹೇಂದ್ರಶಿಖರಂ ಚಾನ್ಯೇ ಯಯುರ್ದುಂದುಭಿನಿಸ್ಸ್ವನೈಃ ।
ರಾಜರಾಜಪುರೀಂ ಭಂಕ್ತ್ವಾ ಯಮಸ್ಯ ವರುಣಸ್ಯ ಚ ॥ ೧೫ ॥

ಅನ್ಯೇಷಾಂ ಲೋಕಪಾಲಾನಾಮಾಯಯುಸ್ತೇಽಮರಾವತೀಂ ।
ಅಥೋತ್ಪಾತಾ ಭವನ್ನಾಕೇ ದಿವ್ಯಭೌಮಾಂತರಿಕ್ಷಗಾಃ ॥ ೧೬ ॥

ರಜಃ ಪಪಾತ ಬಹುಲಂ ತಮಸ್ತೋಮೋ ವಿಜೃಂಭತೇ ।
ತದಾ ಪಪಾತ ಕುಲಿಶಂ ಕರಾದಿಂದ್ರಸ್ಯ ನಿಷ್ಪ್ರಭಂ ॥ ೧೭ ॥

---

ರಿಂದಲೂ ಬಿದ್ದುಹೋದ ಒಡವೆಗಳಿಂದಲೂ ಆ ಮೇರುಪರ್ವತದ ನದಿಗಳು ತುಂಬಿದ್ದವು. ಆ ಮೇರುಪರ್ವತದ ಪೂರ್ವದಿಗ್ಭಾಗವನ್ನು ಆನೆಗಳೂ, ದಕ್ಷಿಣ ದಿಗ್ಭಾಗವನ್ನು ರಥಗಳೂ, ಉತ್ತರ ಪಶ್ಚಿಮಗಳನ್ನು ಕಾಲಾಳುಗಳೂ ಅನುಭವಿಸಿ ನಾಶಮಾಡಿದುವು. ಅನಂತರ ಆ ಜಲಂಧರನು ಸೇನೆಯನ್ನು ಮುಂದೆ ಹೋಗುವಂತೆ ಆಜ್ಞಾಪಿಸಿದನು.

೧೫–೧೭. ಕೆಲವು ಭಟರು ಮಹೇಂದ್ರಪರ್ವತದ ಶಿಖರಕ್ಕೆ ವಾದ್ಯ ಮುಂತಾದ ಧ್ವನಿಗಳೊಡನೆ ಹೋದರು. ಅಲ್ಲಿ ಕುಬೇರನ ಪಟ್ಟಣವನ್ನು ಕೊಳ್ಳೆ ಹೊಡೆದು ನಾಶಮಾಡಿದರು. ಅನಂತರ ಯಮನ, ವರುಣನ, ಇದೇ ರೀತಿಯಾಗಿ ಎಲ್ಲಾ ಲೋಕಪಾಲಕರ ನಗರಗಳಿಗೂ ಹೋಗಿ ಅವೆಲ್ಲವನ್ನೂ ಲೂಟಿಮಾಡಿದರು. ಅನಂತರ ಇಂದ್ರನ ಪಟ್ಟಣವಾದ ಅಮರಾವತಿಗೆ ಹೋದರು. ಇತ್ತ ಸ್ವರ್ಗದಲ್ಲಿ ಅಪಶಕುನ ಸೂಚಕವಾದ ಉತ್ಪಾತಗಳು ಸ್ವರ್ಗ, ಭೂಮಿ, ಅಂತರಿಕ್ಷಗಳಲ್ಲಿ ಉಂಟಾದುವು. ಧೂಳು ಬೇಕಾದ ಹಾಗೆ ಕವಿದುಕೊಳ್ಳಲು ಮೊದಲಾಯಿತು. ಕತ್ತಲೆಯು ಹಗಲಿನಲ್ಲಿಯೇ ಎಲ್ಲಾ ಕಡೆಯಲ್ಲೂ ಕವಿದುಕೊಳ್ಳುತ್ತಿದ್ದಿತು. ಇಂದ್ರನ ಕೈಯ್ಯಿಂದ ವಜ್ರಾಯುಧವು ಕಾಂತಿಹೀನವಾಗಿ ಕೆಳಗೆ ಬೀಳುತ್ತಿದ್ದಿತು.

ದೃಷ್ಟ್ವಾ ನಿಮಿತ್ತಾನಿ ಭಯಾವಹಾನಿ
ನಾಕೇ ಮಹೇಂದ್ರೋ ಗುರುಮಿತ್ಯುವಾಚ ।
ಕಿಂ ಕುರ್ಮಹೇ ಕಂ ಶರಣಂ ಚ ಯಾಮಃ
ತ್ವಂ ಪಶ್ಯ ಯುದ್ಧಂ ಸಮುಪಸ್ಥಿತಂ ॥ ೧೮ ॥

ತತೋ ವಾಚಸ್ಪತಿರ್ವಾಕ್ಯಮುವಾಚ ತ್ರಿದಶಾಧಿಪಂ ಚ ॥ ೧೯ ॥

॥ ಗುರುರುವಾಚ ॥

ಚರಣೌ ಯಾಹಿ ಶರಣಂ ವಿಷ್ಣೋರ್ವೈಕುಂಠವಾಸಿನಃ ॥ ೨೦ ॥

॥ ನಾರದ ಉವಾಚ ॥

ಇತ್ಯುಕ್ತೋ ಗುರುಣಾ ದೇವೈಃ ಸಾಕಂ ವೈಕುಂಠಮಂದಿರಂ !
ಜಗಾಮಾಖಂಡಲಶ್ಶೀಘ್ರಂ ಶರಣಂ ಕೈಟಭದ್ವಿಷಃ ॥ ೨೧ ॥

ಶಶಂಸ ವಾಸುದೇವಾಯ ವಿಜಯೋ ದ್ವಾರಪಾಲಕಃ ।
ಜಾಲಂಧರಭಯತ್ರಸ್ತಾಃ ಸರ್ವೇ ದೇವಾಸ್ಸಮಾಗತಾಃ ॥ ೨೨ ॥

---

೧೮. ಈ ರೀತಿಯಾದ ಭಯಂಕರವೂ ಯುದ್ಧಸೂಚಕವೂ ಆದ ನಿಮಿತ್ತಗಳನ್ನು ನೋಡಿ ಮಹೇಂದ್ರನು ಬೃಹಸ್ಪತಿಯನ್ನು ಕುರಿತು ಯುದ್ಧವು ಪ್ರಾಪ್ತವಾಗಿದೆ. ನಮಗೆ ದುರ್ನಿಮಿತ್ತಗಳು ಕಾಣಿಸಿಕೊಳ್ಳುತ್ತಿವೆ. ಈಗ ಏನು ಮಾಡೋಣ? ಯಾರನ್ನು ಮರೆಹೊಕ್ಕರೆ ಒಳ್ಳೆಯದು? ಎಂದು ಕೇಳಿದನು.

೧೯. ಆಗ ಬೃಹಸ್ಪತಿಯು ಮಹೇಂದ್ರನನ್ನು ಕುರಿತು ಇಂತೆಂದನು.

೨೦. ಎಲೈ ಇಂದ್ರನೇ! ವೈಕುಂಠವಾಸಿಯಾದ ವಿಷ್ಣುವನ್ನು ಶರಣು ಹೊಂದು. ಎಂದನು.

೨೧. ನಾರದನು ಹೇಳಿದನು– ಗುರುವು ಇಂತೆನ್ನಲು ಮಹೇಂದ್ರನು ದೇವತೆಗಳನ್ನು ಕರೆದುಕೊಂಡು ವೈಕುಂಠಕ್ಕೆ ಹೋಗಿ ಆ ಕೈಟಭನನ್ನು ಕೊಂದ ಸ್ವಾಮಿಯಾದ ವಿಷ್ಣುವನ್ನು ಮರೆಹೊಕ್ಕನು.

೨೨. ಆಗ ದ್ವಾರಪಾಲಕನಾದ ವಿಜಯನು ಒಳಗೆ ಹೋಗಿ ಸ್ವಾಮಿಯನ್ನು ಕುರಿತು ಜಲಂಧರನಿಂದ ಭಯಗೊಂಡು ದೇವತೆಗಳೆಲ್ಲರೂ ತಮ್ಮಲ್ಲಿಗೆ ಬಂದಿರುವರೆಂದು ವಿಜ್ಞಾಪಿಸಿದನು.

॥ ಶ್ರೀರುವಾಚ ॥

ನ ವಧ್ಯೋಽಸೌ ಮಮ ಭ್ರಾತಾ ದೇವಾರ್ಥೇ ಯುಧ್ಯತಾ ತ್ವಯಾ ।
ಶಾಪಿತೋ ದೇವ ಮತ್ಪ್ರೀತ್ಯಾ ವಧಾರ್ಹೋ ನ ಭವಿಷ್ಯತಿ ॥ ೨೩ ॥

॥ ನಾರದ ಉವಾಚ ॥

ಇತಿ ಶ್ರೀವಚನಂ ಶ್ರುತ್ವಾ ವಿಷ್ಣುಃ ತ್ರೈಲೋಕ್ಯಪಾಲಕಃ ।
ಅಥಾರುರೋಹ ಗರುಡಂ ಪಕ್ಷಕ್ಷೇಪಾವೃತಾಂಬರಂ ॥ ೨೪ ॥

ವೈಕುಂಠಭವನಾತ್ತೂರ್ಣಂ ನಿರ್ಗತಸ್ತ್ರಿದಶಾನ್ ಹರಿಃ ।
ಜಾಲಂಧರಭಯತ್ರಸ್ತಾನ್ಗತಕಾಂತೀನವೈಕ್ಷತ ॥ ೨೫ ॥

ದದೃಶುಸ್ತೇ ಸುರಾಸ್ಸರ್ವೇ ಹರಿಂ ಸಾಂದ್ರಘನೋಪಮಂ ।
ಶಾರ್ಙ್ಗಶಂಖಗದಾಪದ್ಮವಿಭೂಷಿತ ಚತುರ್ಭುಜಂ ॥ ೨೬ ॥

---

೨೩. ಲಕ್ಷ್ಮಿಯು ಹೇಳಿದಳು– ಎಲೈ ವಲ್ಲಭನೇ ! ದೇವತೆಗಳ ಪಕ್ಷವನ್ನು ನೀನು ವಹಿಸಿ ಯುದ್ಧಮಾಡಿದರೆ ಆ ನನ್ನ ಸಹೋದರನಾದ ಜಲಂಧರನನ್ನು ಕೊಲ್ಲಬೇಡ. ನನ್ನ ಪ್ರೀತಿಯಿಂದ ಆಣೆಯಿಟ್ಟಿದ್ದೇನೆ. ಅವನನ್ನು ಕೊಲ್ಲಬೇಡ.

೨೪. ನಾರದನು ಹೇಳಿದನು– ಲಕ್ಷ್ಮಿಯ ಮಾತನ್ನು ಕೇಳಿ ದೇವತೆಗಳನ್ನು ನೋಡಲು ರೆಕ್ಕೆಗಳನ್ನು ಹರಡಿಕೊಂಡು ಹಾರಲು ಸಿದ್ಧನಾಗಿರುವ ಗರುಡನ ಮೇಲೆ ಕುಳಿತನು.

೨೫. ಹೀಗೆ ಕುಳಿತು ವೈಕುಂಠದ ಮನೆಯಿಂದ ದೇವತೆಗಳನ್ನು ನೋಡಲು ಹೊರಟು ಜಲಂಧರನ ಭಯದಿಂದ ಕಂಗೆಟ್ಟಿರುವ ಕಾಂತಿಹೀನರಾದ ದೇವತೆಗಳನ್ನು ನೋಡಿದನು.

೨೬. ಆಗ ಆ ದೇವತೆಗಳೆಲ್ಲರೂ ನೀಲಮೇಘದಂತೆ ಕಪ್ಪಾದ, ಶಾರ್ಙ್ಗ, ಶಂಖ, ಗದಾ, ಪದ್ಮಗಳೆಂಬ ನಾಲ್ಕು ಆಯುಧಗಳನ್ನೂ ನಾಲ್ಕು ಕೈಯ್ಯಲ್ಲಿ ಹಿಡಿದಿರುವ ಆ ಸ್ವಾಮಿಯನ್ನು ನೋಡಿದರು.

ಸ್ತೋತ್ರಂ ಪಠಿತ್ವಾ ಪುರತಃ ಪ್ರಾಹೇಂದ್ರಸ್ಸರಿತಾಂ ಪತೇಃ ।
ಜಾಲಂಧರೇಣಾತ್ಮಜೇನ ಭಗ್ನಂ ದೇವ ತ್ರಿವಿಷ್ಟಪಂ ॥ ೨೭ ॥

॥ ನಾರದ ಉವಾಚ ॥

ತದಿಂದ್ರವಚನಂ ಶ್ರುತ್ವಾಽಭಯಂ ದತ್ವಾ ದಿವೌಕಸಾಂ ।
ವಿಜೇತುಮಸುರಂ ದೇವೈಃ ಸಹ ರೇಜೇ ಸುರಾಂತಕೃತ್ ॥ ೨೮ ॥

ಅಥಾನೀತಂ ಮಾತಳಿನಾ ರಥಮಾರುಹ್ಯ ವಾಸವಃ ।
ವಾಸುದೇವಸ್ಯ ಪುರತಃ ಪ್ರಯಯೌ ವಿಧೃತಾಶನಿಃ ॥ ೨೯ ॥

ವಾಮತಸ್ತ್ರಿದಶಾಸ್ಸರ್ವೇ ಸವ್ಯತಶ್ಚ ಸಮಾಯಯೌ ।
ಸ್ವಾಹಾ ಪ್ರಿಯೋ ದಕ್ಷಿಣತಃ ಸ ಚ ಮೇಷಂ ಸಮಾಸ್ಥಿತಃ ॥ ೩೦ ॥

ಆರುಹ್ಯೈರಾವಣಂ ನಾಗಂ ಜಯಂತಶ್ಶಕ್ರನಂದನಃ ।
ಉಚ್ಚೈಶ್ರವಸಮಿಂದ್ರಶ್ಚ ಉಭೌ ಭಗವತಃ ಪುರಃ ॥ ೩೧ ॥

---

೨೭. ಮಹೇಂದ್ರನು ಅವನನ್ನು ಮೊದಲು ಸ್ತುತಿಸಿ ನಮಿಸಿ, ಸಮುದ್ರ ರಾಜನ ಮಗನಾದ ಜಲಂಧರನು ಸ್ವರ್ಗವನ್ನು ನಾಶಮಾಡಿವನೆಂದು ಹೇಳಿದನು.

೨೮. ನಾರದನು ಹೇಳಿದನು– ಇಂದ್ರನ ಆ ಮಾತನ್ನು ಕೇಳಿ ಆ ದೇವತೆಗಳಿಗೆ ಅಭಯವನ್ನು ಕೊಟ್ಟು ದೇವತೆಗಳೊಡನೆ ದೈತ್ಯರನ್ನು ಜಯಿಸಲು ವಿಷ್ಣುವೂ ಸಿದ್ಧನಾದನು.

೨೯. ಆಗ ಮಾತಳಿಯು ಇಂದ್ರನಿಗೆ ರಥವನ್ನು ತಂದು ನಿಲ್ಲಿಸಲು ಅದನ್ನು ಹತ್ತಿ ವಜ್ರಾಯುಧವನ್ನು ಹಿಡಿದು ಆ ವಾಸುದೇವನೆದುರಿಗೆ ಯುದ್ಧಕ್ಕೆ ಹೊರಡಲು ಸಿದ್ಧನಾದನು.

೩೦. ಎಲ್ಲಾ ದೇವತೆಗಳೂ ಅಕ್ಕಪಕ್ಕದಲ್ಲಿ ಹೊರಟರು. ಸ್ವಾಹೆಯ ಗಂಡನಾದ ಅಗ್ನಿಯು ಟಗರನ್ನು ಹತ್ತಿಕೊಂಡು ಆ ವಿಷ್ಣುವಿನ ಬಲದಲ್ಲಿ ಹೊರಟನು.

೩೧. ಇಂದ್ರನ ಮಗನಾದ ಜಯಂತನು ಐರಾವಣವೆಂಬ ಆನೆಯನ್ನು ಹತ್ತಿಯೂ, ಇಂದ್ರನೆಂಬ ಮಗನು ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಹತ್ತಿಯೂ ಇಬ್ಬರೂ ಆ ಭಗವಂತನ ಮುಂದೆ ಹೊರಟರು.

ಧಾತಾರ್ಯಮಾ ಚ ಮಿತ್ರಶ್ಚ ವರುಣೋಂಶೋಭಗಸ್ತಥಾ ।
ಇಂದ್ರೋ ವಿವಸ್ವಾನ್ ಪೂಷಾ ಚ ಪರ್ಜನ್ಯೋ ದಶಮಸ್ಮೃತಃ ॥ ೩೨ ॥

ತತಸ್ತ್ವಷ್ಟಾ ತತೋ ವಿಷ್ಣೋ ರೇಜೇ ಧನ್ಯೋ ಜಘನ್ಯಜಃ ।
ಇತ್ಯೇತೇ ದ್ವಾದಶಾದಿತ್ಯಾ ಇಂದ್ರಸ್ಯ ಪುರತಃ ಸ್ಥಿತಾಃ ॥ ೩೩ ॥

ವೀರಭದ್ರಶ್ಚ ಶಂಭುಶ್ಚ ಗಿರಿಶಶ್ಚ ಮಹಾಯಶಾಃ ।
ಅಜೈಕಪಾದಹಿರ್ಬುಧ್ನ್ಯಃ ಪಿನಾಕೀ ಚಾಪರಾಜಿತಃ ॥ ೩೪ ॥

ಭುವನಾಧೀಶ್ವರಶ್ಚೈವ ಕಪಾಲೀ ಚ ವಿಶಾಂ ಪತೇ ।
ಸ್ಥಾಣುರ್ಭಗಶ್ಚ ಭಗವಾನ್ ರುದ್ರಾ ಏಕಾದಶ ಸ್ಮೃತಾಃ ॥ ೩೫ ॥

ಶ್ವಸನಸ್ಸ್ಪರ್ಶನೋ ವಾಯುರನಿಲೋ ಮಾರುತಸ್ತಥಾ ।
ಪ್ರಾಣಾಪಾನೌ ಸಜೀವೌ ಚ ಮಾರುತೋಷ್ಟೌ ತದಗ್ರತಃ ॥ ೩೬ ॥

ವಿವಸ್ವಾನಪಿ ತನ್ಮಧ್ಯೇ ಯಯೌ ದ್ವಾದಶಮೂರ್ತಿಭಿಃ ।
ಧನದಃ ಶಿಬಿಕಾರೂಢಃ ಕಿನ್ನರೇಶೋ ಯಯೌ ತದಾ ॥ ೩೭ ॥

---

೩೨-೩೩. ಧಾತ, ಅರ್ಯಮಾ, ಮಿತ್ರ, ವರುಣ, ಅಂಶುಮಾನ್, ಭಗ, ಇಂದ್ರ, ವಿವಸ್ವಾನ್, ಪೂಷಾ, ಪರ್ಜನ್ಯ, ತ್ವಷ್ಟಾ, ಕೊನೆಯವನಾದ ವಿಷ್ಣು, ಎಂಬ ಹನ್ನೆರಡು ಆದಿತ್ಯರುಗಳು ಇಂದ್ರನ ಮುಂದೆ ಹೊರಟರು.

೩೪-೩೫. ಶಂಭು, ಗಿರಿಶ, ಅಜ, ಏಕಪಾತ್, ಅಹಿರ್ಬುಧ್ನ್ಯ, ಪಿನಾಕೀ, ಅಪರಾಜಿತ, ಈಶ್ವರ, ಕಪಾಲಿ, ಸ್ಥಾಣು, ಭಗ ಎಂಬ ಹನ್ನೊಂದು ರುದ್ರರೂ ವೀರಭದ್ರನೂ ಹೊರಟರು.

೩೬. ಶ್ವಸನ, ಸ್ಪರ್ಶನ, ವಾಯು, ಅನಿಲ, ಮಾರುತ, ಪ್ರಾಣ, ಅಪಾನ ಜೀವಗಳೆಂಬ ಎಂಟುಜನ ವಾಯುಗಳೂ ಸಹ ಆ ಸ್ವಾಮಿಯ ಮುಂದೆ ಹೊರಟರು.

೩೭. ವಿವಸ್ವಂತನೆಂಬ ಸೂರ್ಯನು ಹನ್ನೆರಡು ಜನ ಹಿಂದೆ ಹೇಳಿದ ಮೂರ್ತಿಗಳೊಂದಿಗೆ ಮಧ್ಯವಲ್ಲಿ ಹೊರಟನು. ಕುಬೇರನು ಪಲ್ಲಕ್ಕಿಯಲ್ಲಿ ಕುಳಿತು ತನ್ನ ಕಿನ್ನರರನ್ನು ಕರೆದುಕೊಂಡು ಹೊರಟನು.

ರುದ್ರಾಶ್ಚ ವೃಷಭಾರೂಢಾ ಮರುತೋ ಮೃಗವಾಹನಾಃ ।
ಯಯುಸ್ಸೈನ್ಯಸ್ಯ ಪುರತಸ್ತ್ರಿಶೂಲಪರಿಘಾಯುಧಾಃ ॥ ೩೮ ॥

ಗಂಧರ್ವಾಶ್ಚಾರಣಾ ಯಕ್ಷಾಃ ಪಿಶಾಚೋರಗಗುಹ್ಯಕಾಃ ।
ಸರ್ವೇ ಸೈನ್ಯಸ್ಯ ಪುರತಃ ಸರ್ವಶಸ್ತ್ರಭೃತೋ ಯಯುಃ ॥ ೩೯ ॥

ಪೂರ್ವಾಪರೌ ತೋಯರಾಶೀ ಸಮಾಕ್ರಾಂತೌ ಚ ಸೈನಿಕೈಃ ।
ತಸ್ಮಿನ್ಸಂಸಾರಭೂರಾಟ್ಸ ವರಾಹವಪುಷಾ ಹರಿಃ ॥ ೪೦ ॥

ಸ್ವರ್ಗಾದಾಗತ್ಯ ವೇಗೇನ ದೈತ್ಯಸೈನ್ಯಜಿಘಾಂಸಯಾ ।
ಸುಮೇರೋರುತ್ತರೋ ಭಾಗಃ ಸುರಸೈನ್ಯೇನ ಸಂವೃತಃ ॥ ೪೧ ॥

ಸೇನಾಭಾರೋದ್ಭುತಕರಃ ತಸೌ ಜಾಲಂಧರಸ್ಯ ಚ ।
ಆಶ್ರಿತ್ಯ ದಕ್ಷಿಣಂ ಭಾಗಂ ತೂರ್ಣಂ ಕನಕಶೃಂಗಿಣಃ ॥ ೪೨ ॥

---

೩೮. ಏಕಾದಶ ರುದ್ರರು, ಹೋರಿಯ ಮೇಲೆ ಕುಳಿತು ತ್ರಿಶೂಲ ಪರಿಘ ಗಳನ್ನು ಹಿಡಿದು ಸೈನ್ಯದ ಮುಂಭಾಗದಲ್ಲಿ ಹೊರಟರು. ಮತ್ತು ಸಪ್ತಮರುತ್ತ ಗಳೂ ಜಿಂಕೆಯ ಮೇಲೆ ಕುಳಿತು ಪರಿಘ ತ್ರಿಶೂಲಗಳನ್ನು ಹಿಡಿದು ಮುಂಭಾಗದಲ್ಲಿ ಹೊರಟರು.

೩೯. ಗಂಧರ್ವರು, ಚಾರಣರು, ಯಕ್ಷರು, ಪಿಶಾಚರು, ಉರಗರು, ಗುಹ್ಯಕರು ಇವರೆಲ್ಲರೂ ಶಸ್ತ್ರಗಳನ್ನು ಹಿಡಿದು ಸೈನ್ಯದ ಮುಂಭಾಗದಲ್ಲಿ ಹೊರಟರು.

೪೦–೪೧. ಈ ರೀತಿಯಾಗಿ ಸೈನಿಕರು ಪೂರ್ವಸಮುದ್ರದಿಂದ ಪಶ್ಚಿಮ ಸಮುದ್ರದವರೆಗೂ ನಿಬಿಡವಾಗುವಂತೆ ಸೇರಿದರು. ಇಂತಹ ಸೈನ್ಯದ ಜೊತೆಗೆ ಸಂಸಾರಕ್ಕೆ ಒಡೆಯನಾದ ಹರಿಯು ವರಾಹರೂಪವನ್ನು ಹೊಂದಿ ದೈತ್ಯರನ್ನು ನಾಶಮಾಡಲು ಬಂದು ಸೇರಿದನು. ಕೊನೆಗೆ ಮೇರುಪರ್ವತದ ಉತ್ತರ ಭಾಗವು ದೇವಸೈನ್ಯದಿಂದ ಬಂದು ತುಂಬಿಕೊಂಡಿತು.

೪೨. ಇತ್ತ ಜಾಲಂಧರನ ಸೈನ್ಯವೂ ಅದ್ಭುತಾಕಾರವಾಗಿ ಸೇರಿ ಆ ಚಿನ್ನದ ಶಿಖರವುಳ್ಳ ಮೇರುಪರ್ವತದ ದಕ್ಷಿಣದಲ್ಲಿ ನಿಂತಿತು.

ಅಹೋ ರಾತ್ರೇಣ ವಿಹಿತಾ ವರ್ಷೇ ತಸ್ಮಿನ್ನಿಲಾವೃತೇ ।
ಮೇರುಮಂದರಯೋರ್ಮಧ್ಯೇ ಯುದ್ಧಭೂಮಿಃ ಪ್ರತಿಷ್ಠಿತಾ || ೪೩ ||

ತತ್ರಾತ್ಮಜಪದಾಂ ಭೂಮಿಂ ಕವಿಪ್ರೋಕ್ತಾಂ ಮುದಾಯುತಾಃ ।
ಜಗ್ಮುಸ್ತೇ ದಾನವಾಸ್ತೂರ್ಣಂ ಗುರುಪ್ರೋಕ್ತಾಂ ಯಯುಸ್ಸುರಾಃ||೪೪||

ರಥಪ್ರವೀರೈಃ ಪರಿತಶ್ಚ ಸಂಪ್ಲವೈಃ
ಗಜೈರ್ಘನಾಕಾರಮದಪ್ರವಾಹಿಭಿಃ ।
ಅಶ್ವೈರನಂತೈರ್ಗರುಡಾಗ್ರಗಾಮಿಭಿಃ
ಪದಾತಿಭಿಃ ಸಾ ರಣಭೂರ್ವೃತಾ ಬಭೌ || ೪೫ ||

ತತೋ ವಾದಿತ್ರನಿರ್ಘೋಷಃ ಸೇನಯೋರುಭಯೋರಭೂತ್ ।
ಕೋಲಾಹಲಶ್ಚ ವೀರಾಣಾಮನ್ಯೋನ್ಯಮತಿಗರ್ಜತಾಂ || ೪೬ ||

---

೪೩. ಆ ಇಲಾವರ್ಷವೆಂಬ ಜಾಗದಲ್ಲಿ ಹಗಲೂ ರಾತ್ರಿಯೂ ಎಡಬಿಡದೆ ಸಿದ್ಧಮಾಡಿಕೊಂಡರು. ಮೇರುಮಂದರ ಪರ್ವತಗಳ ಮಧ್ಯಭಾಗವು ಯುದ್ಧ ಭೂಮಿಯಾಗಿ ಪರಿಣಮಿಸಿತು.

೪೪. ಅಲ್ಲಿ ಶುಕ್ರನು ತಾನು ತನ್ನ ಮಗನ ಜಾಗವು ಪ್ರಶಸ್ತವಾಗಿದೆಯೆಂದು ಹೇಳಲು ಅದನ್ನು ದೈತ್ಯರು ಹೊಂದಿದರು. ಸುರರು ಗುರುವು ಹೇಳಿದ ಸ್ಥಳವನ್ನೇ ಹೊಂದಿದರು.

೪೫. ಎಲ್ಲಾ ಕಡೆಯಲ್ಲಿಯೂ ಓಡಿಯಾಡುತ್ತಿರುವ ರಥಿಕರುಗಳಿಂದಲೂ ನೀಲಮೇಘದಂತಿರುವ ಆನೆಗಳಿಂದಲೂ, ಗರುಡನಿಗಿಂತಲೂ ಬಹು ಮುಂದೆ ಓಡ ಬಲ್ಲುವಾದ ಕುದುರೆಗಳಿಂದಲೂ, ಅನೇಕವಾದ ಕಾಲಾಳುಗಳಿಂದಲೂ ಕೂಡಿ ಆ ಯುದ್ಧಭೂಮಿಯು ಕಂಗೊಳಿಸಿತು.

೪೬. ಆಗ ಆ ಎರಡು ಸೇನೆಗಳಲ್ಲೂ ವಾದ್ಯದಧ್ವನಿಯು ಮೊಳಗಿತು. ಮತ್ತು ಗರ್ಜಿಸುತ್ತಿರುವ ವೀರರ ಕಲಕಲಧ್ವನಿಯು ಹೊರಹೊಮ್ಮುತ್ತಿದ್ದಿತು.

ಅಥ ದಾನವದೇವಾನಾಂ ಸಂಗ್ರಾಮೋಽಭೂದ್ಭಯಾವಹಃ ।
ಸರ್ವಸೈನ್ಯಸ್ಯ ಸಮ್ಮರ್ದೋಽಯಥಾ ತ್ರಿಭುವನಕ್ಷಯಃ ॥ ೪೭ ॥

ಭಯಾಕ್ರಾಂತಾ ಮಹಾಶ್ರಾಂತಾ ಶ್ರುತಿರ್ವಿಲಪತೀ ಮುಹುಃ ।
ಸ್ವರಥಾಕಾರರಹಿತಂ ಶರೈಸ್ಸಂಪೂರಿತಂ ತದಾ ॥ ೪೮ ॥

ರೋಮಾಂಚಿತಾ ಬಭೌ ದ್ಯೌಶ್ಚ ರಜೋವಸ್ತ್ರಂ ವಿಧುನ್ವತೀ ।
ರೌದ್ರೈರ್ವಿಹಂಗಮಾರಾವೈಃ ತ್ರಾಸಾದಾಕ್ರಂದತೀವ ಹಿ ॥ ೪೯ ॥

ದೇವೇಂದ್ರೇಣ ತದಾಜ್ಞಪ್ತಾ ಮೇಘಾಸ್ಸಂವರ್ತಕಾದಯಃ ।
ಗಜಾನುಚ್ಚೈಸ್ಸಮಾರುಹ್ಯ ತೇಽಸುರಾನ್ಯುಯುಧೇ ಮೃಧೇ ॥ ೫೦ ॥

ದೇವಾನಾಮಶ್ವಹಾತಾಶ್ಚ ಜಾತಾ ಗಂಧರ್ವಕಿನ್ನರಾಃ ।
ರಥಿನಸ್ಸಾಧ್ಯಸಿದ್ಧಾಶ್ಚ ಗಜಿನೋ ಯಕ್ಷಚಾರಣಾಃ ॥ ೫೧ ॥

---

೪೭. ಆಗ ದೇವದಾನವರಿಗೆ ಭಯಂಕರವಾದ ಯುದ್ಧವು ಮೊದಲಾಯಿತು. ಈರೀತಿ ಎಲ್ಲಾ ಸೈನ್ಯಗಳೂ ಸೇರಿರುವುದನ್ನು ನೋಡಿದರೆ ಮೂರು ಲೋಕವೂ ನಾಶವಾಗುವದರಲ್ಲಿದ್ದಂತಿದ್ದಿತು.

೪೮-೪೯. ವೇದವು ಭಯಗೊಂಡಿತು. ಬಳಲಿತು. ದುಃಖಿಸುತ್ತಿದ್ದಿತು. ಸ್ವರ್ಗವು ತನ್ನ ಸ್ಥಿತಿಯನ್ನು ಬಿಟ್ಟಿತು. ಅಂತರಿಕ್ಷವು ಬಾಣಗಳಿಂದ ತುಂಬಿಕೊಂಡು ರೋಮಾಂಚವನ್ನು ಹೊಂದಿದಂತೆ ಕಂಡುಬಂದಿತು. ಮತ್ತು ಧೂಳು ಎದ್ದಿರುವುದನ್ನು ನೋಡಿದರೆ ಕೆಂಪು ಬಟ್ಟೆಯನ್ನು ಹೊದ್ದಿದ್ದಂತೆ ಕಂಡುಬಂದಿತು. ಆ ಅಂತರಿಕ್ಷವಲ್ಲಿ ಹೆದರಿಕೆಯಿಂದ ಕೂಗುತ್ತಿರುವ ಪಕ್ಷಿಗಳ ಕೂಗಿನಿಂದ ಅಂತರಿಕ್ಷವು ಹೆದರಿಕೆಯಿಂದ ಅಳುತ್ತಿದೆಯೋ ಎಂಬಂತಿದ್ದಿತು.

೫೦. ಆಗ ದೇವೇಂದ್ರನ ಅಪ್ಪಣೆಯಂತೆ ಸಂವರ್ತಕಾದಿ ಮೇಘಗಳು ಆನೆಯಮೇಲೆ ಕುಳಿತುಕೊಂಡು ಅಸುರರೊಡನೆ ಯುದ್ಧಮಾಡಿದುವು.

೫೧-೫೨. ದೇವತೆಗಳಿಗೆ ಕುದುರೆಯ ರಾಹುತರು ಗಂಧರ್ವಕಿನ್ನರರು ಆದರು. ಸಾಧ್ಯರೂ, ಸಿದ್ಧರೂ ರಥಿಕರಾದರು. ಯಕ್ಷರೂ, ಚಾರಣರೂ,

**ಪದಾತಿನಃ ಕಿಂಪುರುಷಾಃ ಪನ್ನಗಾಃ ಪವನಾಶನಾಃ ।**
**ರೋಗಾಣಾಮಧಿಪೋ ರಾಜಯಕ್ಷ್ಮಾ ಚ ಯಮನಾಯಕಃ　　॥ ೫೨ ॥**

**ತತ್ರ ದಾನವರೋಗಾಣಾಂ ಸಂಗ್ರಾಮೋಽಭೂತ್ಸುದಾರುಣಃ ।**
**ಪತಿತಾ ಲುಲುಠುರ್ಭೂಮೌ ದೈತ್ಯಾಶ್ಶೂಲಜ್ವರಾಮಯೈಃ　　॥ ೫೩ ॥**

**ದಾನವೈರ್ನಿಹತಾ ರೋಗಾಃ ಪೇತುಸ್ಸಮರಮೂರ್ಧನಿ ।**
**ಪಲಾಯಾಂಚಕ್ರಿರೇ ಕೇಚಿತ್ ವ್ಯಾಧಯೋ ಭೂಧರಾನ್ಪ್ರತಿ　　॥ ೫೪ ॥**

**ಓಷಧ್ಯಸ್ತತ್ರ ಸಹಜಾ ವೈಶಲ್ಯಕರಣೀಮುಖಾಃ ।**
**ತಾಭಿರ್ವಿಶಲ್ಯಾಸ್ಸೈನ್ಯೇಷು ಯುಯುಧುರ್ಯಮಕಿಂಕರಾಃ　　॥ ೫೫ ॥**

**ದಾನವೈರ್ನಿಹತಾಸ್ಸರ್ವೇ ಶರಮುದ್ಗರಪಟ್ಟಿಶೈಃ ।**
**ಪದಾತಯಃ ಪಟ್ಟಿಗಣೈಃ ಖಡ್ಗೈಸ್ತೀಕ್ಷ್ಣೈಃ ಪರಶ್ವಧೈಃ　　॥ ೫೬ ॥**

---

ಆನೆಯಮೇಲೆ ಕುಳಿತು ಯುದ್ಧಮಾಡುವವರಾದರು. ಕಿಂಪುರುಷರು ಪದಾತಿ ಸೇನೆಗಳಾದರು. ಸರ್ಪಗಳೂ ಕೂಡ ಪದಾತಿಗಳಾದುವು. ರೋಗಗಳಿಗೆ ಅಧಿಪನಾಗಿ ಯಮನಿಗೆ ನಾಯಕನಾದ ರಾಜಯಕ್ಷ್ಮನೂ ನಿಂತನು.

೫೩. ಆಗ ದಾನವರಿಗೂ ದೇವತೆಗಳ ರೋಗಗಳಿಗೂ ಭಯಂಕರವಾದ ಯುದ್ಧವು ಮೊದಲಾಯಿತು. ಜ್ವರ, ಶೂಲೆ, ಮುಂತಾದ ರೋಗಗಳಿಂದ ಕೂಡಿಕೊಂಡು ದೈತ್ಯರು ನೆಲದಲ್ಲಿ ಬಿದ್ದು ನರಳಿದರು.

೫೪. ದಾನವರು ದೇವತೆಗಳಿಗೆ ಕಲ್ಪಿಸಿದ ರೋಗಗಳು ಯುದ್ಧಭೂಮಿಗೆ ಬಂದುವು. ಕೆಲವು ಪರ್ವತ ಪ್ರದೇಶಗಳಿಗೆ ಹೋದುವು.

೫೫. ವಿಶಲ್ಯಕರಣೀ ಮುಂತಾದ ಔಷಧಿಗಳು ಅವನ್ನು ನಾಶಮಾಡಿದವು. ಯಮನ ಆಳುಗಳು ಆ ವ್ಯಾಧಿಗಳೊಡನೆ ಹೋರಾಡಿದರು.

೫೬–೬೦. ಆ ಯಮನ ಆಳುಗಳನ್ನು ದಾನವರು ಬಾಣ, ಮುದ್ಗರ, ಪಟ್ಟಿಶವೆಂಬ ಆಯುಧಗಳಿಂದ ಕೊಂದರು. ಪದಾತಿಗಳನ್ನು ಪದಾತಿಗಳು, ಖಡ್ಗಗಳಿಂದಲೂ, ಕೊಡಲಿಗಳಿಂದಲೂ ಸೀಳಿದರು. ಈ ರೀತಿ ಯುದ್ಧಮಾಡುತ್ತ

ಕೋಟಿಶೋ ಜಘ್ನುರನ್ಯೋನ್ಯಂ ರುಧಿರಾರುಣವಿಗ್ರಹಾಃ ।
ಅಶ್ವಚಾರಾ ಹಯೈಸ್ತೂರ್ಣೈರ್ಪ್ರಕ್ಷಿಪುಃ ಗಗನೇ ತದಾ ॥ ೫೭ ॥

ಸಂಶ್ಲಿಷ್ಯ ಜಘ್ನುರನ್ಯೋನ್ಯಂ ರುಧಿರಾರುಣ ವಿಗ್ರಹಾಃ ।
ಸಮೂಹೋ ರಥಿನಾಂ ಭೀಮೋ ರಥೌಘೈಶ್ಛಾದ್ಯ ಮೇದಿನೀಂ ॥ ೫೮ ॥

ವಿವ್ಯಾಧ ನಿಶಿತೈರ್ಬಾಣೈಃ ಧನುರ್ಮುಕ್ತೈರ್ಮಹಾರಥಾನ್ ।
ಮದಕ್ಷೀಣಕಪೋಲಾಂಗಾಃ ಕರೈರ್ಬದ್ಧ್ವಾ ಕರಾನ್ದೃಢಂ ॥ ೫೯ ॥

ಗಜಾನ್ಪ್ರತಿ ಗಜಾಃ ಕ್ರುದ್ಧಾಃ ಪಾತಯಂತಿ ಮಹೀತಲೇ ।
ಕೋಽಪಿ ದೈತ್ಯೋ ರಥಂ ದೋರ್ಭ್ಯಾಮುತ್ಕ್ಷಿಪ್ಯೋತ್ಥಾಯ ಖಂ
ಯಯೌ ॥ ೬೦ ॥

ಅಶ್ವಚಾರಾರ್ ಹಯಾನ್ನಾಗಾನ್ ಪಾತಯಾಮಾಸ ಭೂತಳೇ ।
ಸ್ಕಂಧೇ ಗೃಹೀತ್ವಾ ತರಸಾ ಯಯೌ ಜಾಲಂಧರಂ ಪ್ರತಿ ॥ ೬೧ ॥

---

ಒಬ್ಬರಿಗೊಬ್ಬರು ರಕ್ತದಿಂದ ತೋದವರಾದರು. ಕುದುರೆಯ ಮೇಲೆ ಕುಳಿತವರನ್ನು ಕುದುರೆಗಳು ಅಂತರಿಕ್ಷಕ್ಕೆ ಎಸೆಯುತ್ತಿದ್ದುವು. ಆಗ ಒಬ್ಬರಿಗೊಬ್ಬರು ಯುದ್ಧ ಮಾಡುತ್ತ ರಕ್ತದಿಂದ ನೆನೆಯುತ್ತಿದ್ದರು. ರಥಿಕರು ಭೂಮಿಯನ್ನೇ ಮುಚ್ಚುತ್ತಾ ಭಯಂಕರವಾಗಿ ಹರಿತವಾದ ಬಾಣಗಳನ್ನು ಧನುಸ್ಸಿನಿಂದ ಬಿಡುತ್ತಾ ಹೊಡೆದಾಡಿದರು. ಮದವನ್ನು ಸುರಿಸುತ್ತಿದ್ದ ಆನೆಗಳು ಸೊಂಡಲಿನಿಂದ ಶತ್ರುಗಳ ಆನೆಗಳ ಸೊಂಡಲನ್ನು ಹಿಡಿದುಕೊಂಡು ಭೂಮಿಯಲ್ಲಿ ಕೆಡಹುತ್ತಿದ್ದುವು. ಆಗ ಕೋಪಗೊಂಡ ಒಬ್ಬ ದೈತ್ಯನು ರಥವನ್ನು ಎರಡು ಕೈಯಿಂದಲೂ ಮೇಲಕ್ಕೆ ಎತ್ತಿಕೊಂಡು ಅಂತರಿಕ್ಷಕ್ಕೆ ಹಾರಿದನು.

೬೧. ಒಬ್ಬನು ರಾವುತರನ್ನೂ ಕುದುರೆಗಳನ್ನೂ, ಆನೆಗಳನ್ನೂ ಕೆಳಗೆ ಕೆಡಹುತ್ತಾ ಬಂದನು. ಒಬ್ಬನು ಆನೆಯನ್ನು ಹೆಗಲಮೇಲೆ ಹೊತ್ತುಕೊಂಡು ಜಲಂಧರನಲ್ಲಿಗೆ ಹೋದನು.

ಕಕ್ಷಯೋರ್ದ್ವೌ ಗಜೌ ಗೃಹ್ಯ ತೃತೀಯಂ ಜಠರೋಪರಿ |
ಚತುರ್ಥಂ ಮಸ್ತಕೇ ಗೃಹ್ಯ ರಣೇ ಧಾವತಿ ಕಶ್ಚನ || ೬೨ ||

ಉತ್ಪಾಟ್ಯಕೋಶತಃ ಖಡ್ಗಂ ವಿಧೂಯ ವಿಮಲಾಂಬರಃ |
ಯಯೌ ಸಹಸ್ರಶೋ ದೇವಾನ್ ಪಾತಯಿತ್ವಾ ರಣೇಽಸುರಃ || ೬೩ ||

ಕಾಚಿತ್ ಪೀನಸ್ತನೀ ತನ್ವೀ ಖೇಚರೀ ರತಿಲಂಪಟಾ |
ಆಗತ್ಯ ಗಗನಾತ್ತೂರ್ಣಂ ನಿನ್ಯೇ ದೈತ್ಯಂ ರಣಾಂಗಣಾತ್ || ೬೪ ||

ಚುಚುಂಬ ಸಾ ತದ್ವದನಂ ತೀಕ್ಷ್ಣನಾರಾಚಕೀಲಿತಂ |
ದೇವಸೈನ್ಯಂ ತತೋ ಬಿದ್ಧ್ವಾ ಕಾಲನೇಮಿರ್ನನರ್ತ ಹ || ೬೫ ||

ತತೋ ಜನಾರ್ದನಃ ಕ್ರುದ್ಧೋ ನಿರ್ಯಯೌ ಕಾಲನೇಮಿನಂ |
ಯಮೋ ದುರ್ವಾರಣಂ ವೀರಂ ಸ್ವರ್ಭಾನುಂ ಚಂದ್ರಭಾಸ್ಕರೌ || ೬೬ ||

---

೬೨. ಒಬ್ಬನು ಎರಡು ಕಂಕುಳುಗಳಲ್ಲಿಯೂ ಎರಡು ಆನೆಗಳನ್ನು ಹಿಡಿದು ಮೂರನೆಯದನ್ನು ಹೊಟ್ಟೆಯ ಮೇಲಿಟ್ಟುಕೊಂಡು ನಾಲ್ಕನೆಯ ಆನೆಯನ್ನು ತಲೆಯಲ್ಲಿ ಹೊತ್ತುಕೊಂಡು ಆ ರಣರಂಗದಲ್ಲಿ ಓಡುತ್ತಿದ್ದನು.

೬೩. ಒಬ್ಬ ಯೋಧನು ಕೋಶದಿಂದ ಕತ್ತಿಯನ್ನು ಹಿರಿದು ಅದನ್ನು ಝಳಪಿಸುತ್ತಾ ಸಾವಿರಗಟ್ಟಲೆಯಲ್ಲಿ ದೇವತೆಗಳನ್ನು ಯುದ್ಧದಲ್ಲಿ ಕೊಲ್ಲುತ್ತ ಹೋದನು.

೬೪. ದಪ್ಪವಾದ ಮೊಲೆಗಳುಳ್ಳ, ಅಂತರಿಕ್ಷದಲ್ಲಿ ಸಂಚರಿಸುತ್ತಿದ್ದ, ರತಿಯಲ್ಲಿ ಬಹು ಆಸಕ್ತಿಯುಳ್ಳ, ಒಬ್ಬ ದೈತ್ಯಹೆಂಗಸು ಜಾಗ್ರತೆ ಯುದ್ಧರಂಗಕ್ಕೆ ಇಳಿದು ಒಬ್ಬ ಯೋಧನನ್ನು ಹೊತ್ತುಕೊಂಡು ಓಡಿದಳು.

೬೫. ಆಕೆಯು ಬಾಣದಿಂದ ಪೆಟ್ಟುತಿಂದ ಅವನ ಮುಖವನ್ನು ಚುಂಬಿಸುತ್ತಿದ್ದಳು. ಇತ್ತ ಕಾಲನೇಮಿಯು ದೇವತೆಗಳ ಸೈನ್ಯವನ್ನು ಸುತ್ತುಗಟ್ಟಿ ಕುಣಿಯುತ್ತಿದ್ದನು.

೬೬–೬೯. ಆಗ ಕೋಪಗೊಂಡ ಜನಾರ್ದನನು ಕಾಲನೇಮಿಯನ್ನೂ, ಯಮನು ದುರ್ವಾರಣನನ್ನೂ, ಚಂದ್ರಸೂರ್ಯರು ರಾಹುವನ್ನೂ, ಅಗ್ನಿಯು

ಕೇತುಂ ವೈಶ್ವಾನರೋ ದೇವೋ ಯಯೌ ಶುಕ್ರಂ ಬೃಹಸ್ಪತಿಃ ।
ಅಶ್ವಿನೌ ಸಂಯುತೌ ತತ್ರ ದೈತ್ಯಮುಂಗಾರಪರ್ಣಕಂ ॥ ೬೭ ॥

ಸಂಹ್ರಾದಂ ಶಕ್ರಪುತ್ರಶ್ಚ ನಿಹ್ರಾದಂ ಧನದೋ ಯಯೌ ।
ನಿಶುಂಭಶ್ಚಾವೃತೋ ರುದ್ರೈಃ ಶುಂಭೋ ವಸುಭಿರಾಹವೇ ॥ ೬೮ ॥

ಮೋಘಿತಾಕಾರಂ ಸ್ಥಿತಂ ಜೃಂಭಂ ವಿಶ್ವೇದೇವಾಸ್ಸಮಾಯಯುಃ ।
ವಾಯವೋ ವಜ್ರರೋಮಾಣಮಥ ಮೃತ್ಯುರ್ಮಯಂ ಯಯೌ ॥ ೬೯ ॥

ನಮುಚಿಂ ವಾಸವೋಽತ್ಯುಗ್ರಶಕ್ತಿಹಸ್ತೋಽಭ್ಯಧಾವತ ।
ಅನ್ಯೈರಪಿ ಸುರೈರ್ದೈತ್ಯಾಃ ಸ್ವಸ್ವವೀರ್ಯಸಮೈರ್ವೃತಾಃ ॥ ೭೦ ॥

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ
ಯುಧಿಷ್ಠಿರ ಸಂವಾದೇ ದೇವದಾನವಯುದ್ಧಂ ನಾಮ
ಷಷ್ಠೋಽಧ್ಯಾಯಃ

---

ಕೇತುವನ್ನೂ, ಬೃಹಸ್ಪತಿಯು ಶುಕ್ರನನ್ನೂ, ಅಶ್ವಿನೀದೇವತೆಗಳು ಅಂಗಾರಪರ್ಣನನ್ನೂ, ಶಕ್ರನ ಮಗನಾದ ಜಯಂತನು ಸಂಹ್ರಾದನನ್ನೂ, ಕುಬೇರನು ನಿಹ್ರಾದನನ್ನೂ ಎದುರಿಸಿದರು. ರುದ್ರರು ನಿಶುಂಭನನ್ನೂ, ವಸುಗಳು ಶುಂಭನನ್ನೂ, ವಿಶ್ವೇದೇವರು ಬಲಿಷ್ಠನಾದ ಜೃಂಭನನ್ನೂ, ವಾಯುಗಳು ವಜ್ರರೋಮನನ್ನೂ ಮೃತ್ಯುವು ಮಯನನ್ನೂ ಎದುರಿಸಿ ಹೋದರು.

೭೦. ಇಂದ್ರನು ಕ್ರೂರವಾದ ಶಕ್ತ್ಯಾಯುಧವನ್ನು ಹಿಡಿದು ನಮುಚಿಯನ್ನು ಎದುರಿಸಿದನು. ಈ ರೀತಿಯಾಗಿ ದೇವದಾನವರು ಅವರವರಿಗೆ ಸಮವಾದ ಬಲವುಳ್ಳವರನ್ನು ಅವರವರು ಎದುರಿಸಿದರು.

ಇಂತು ಪದ್ಮಮಹಾಪುರಾಣದ ಉತ್ತರ ಖಂಡದ ಯುಧಿಷ್ಠಿರ ನಾರದ
ಸಂವಾದದಲ್ಲಿ ದೇವದಾನವರ ಯುದ್ಧವೆಂಬ
ಆರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತಮೋಽಧ್ಯಾಯಃ ॥



॥ ನಾರದ ಉವಾಚ ॥

**ಏವಂ ದ್ವಂದ್ವೇಷು ಯುದ್ಧೇಷು ಸಂಪ್ರವೃತ್ತೇಷ್ವನೇಕಶಃ ।**
**ಜಘಾನಾಥ ಹರಿಃ ಕ್ರುದ್ಧೋ ಗದಯಾ ಕಾಲನೇಮಿನಂ ॥ ೧ ॥**

**ವಿಹಾಯ ಮೂರ್ಛಾಂ ಸಂಚಿಂತ್ಯ ವಿಷ್ಣುಂ ಬಾಣೈರ್ಜಘಾನ ಸಃ ।**
**ಹತಃ ಕ್ರುದ್ಧೇನ ಹರಿಣಾ ಸ ಕ್ಷಿತೌ ಪತಿತೋ ವ್ಯಸುಃ ॥ ೨ ॥**

**ರಾಜರ್ಷ ಜಘಾನ ಸಂಚಿಂತ್ಯ ರಾಹುಂ ಖಡ್ಗೇನ ಚಂದ್ರಮಾಃ ।**
**ರಾಹುಸ್ತು ತಂ ಪರಿತ್ಯಜ್ಯ ತದಾ ಸೂರ್ಯಮುಧಾವತ ॥ ೩ ॥**

---

## ಏಳನೆಯ ಅಧ್ಯಾಯವು

೧. ನಾರದನು ಹೇಳಿದನು– ಈ ರೀತಿಯಾಗಿ ಅನೇಕರು ಅನೇಕರೀತಿಯಾಗಿ ದ್ವಂಧಯುದ್ಧವನ್ನು ಮಾಡುತ್ತಿರಲು ವಿಷ್ಣುವು ಕೋಪಗೊಂಡು ಗದೆಯಿಂದ ಕಾಲನೇಮಿಯನ್ನು ಹೊಡೆದನು.

೨. ವಿಷ್ಣುವು ಹೀಗೆ ಹೊಡೆಯಲು ಕಾಲನೇಮಿಯು ಮೂರ್ಛೆಗೊಂಡನು. ಅನಂತರ ಮೂರ್ಛೆತಿಳಿದು ಬಾಣಗಳಿಂದ ವಿಷ್ಣುವನ್ನು ಹೊಡೆದನು. ಮತ್ತೆ ವಿಷ್ಣುವು ಕೋಪಗೊಂಡು ಹೊಡೆಯಲು ಪ್ರಾಣಹೋಗಿ ಕೆಳಗೆ ಬಿದ್ದನು.

೩. ಇತ್ತ ಚಂದ್ರನು ರಾಹುವಿನೊಡನೆ ಯುದ್ಧಮಾಡುತ್ತ ಖಡ್ಗದಿಂದ ಆ ರಾಹುವನ್ನು ಹೊಡೆಯಲು ರಾಹುವು ಆ ಚಂದ್ರನನ್ನು ಬಿಟ್ಟು ಸೂರ್ಯನನ್ನು ಎದುರಿಸಿದನು.

ಸಹಸ್ರಾಂಶುಂ ರಣೇ ಜಿತ್ವಾ ರಾಹುಶ್ಚಂದ್ರಮಧಾವತ ।
ಜಘಾನ ತಂ ಚ ಖಡ್ಗೇನ ಸಮರೇ ರಜನೀಪತಿಃ ॥ ೪ ॥

ಸೈಹಿಂಕೇಯಾಂಗಕಾಠಿಣ್ಯಾತ್ಖಡ್ಗಂ ಚೂರ್ಣಮಭೂತ್ತದಾ ।
ಜಘಾನ ಮುಷ್ಟಿನಾ ಗಾಢಂ ಕಠಿಣೇನ ವಿಧುಂತುದಃ ॥ ೫ ॥

ಚಂದ್ರಂ ಮೂರ್ಛಾಪರಿಕ್ಲಿಷ್ಟಂ ಧೃತ್ವಾ ವೇಗಾನ್ಮಹಾಸ್ಪಥೇ ।
ಗಿಳಿತ್ವಾ ರಾಹುಣಾ ಚಂದ್ರೋऽಪ್ಯುದ್ಗೀರ್ಣಶ್ಚ ತತಃ ಪುನಃ ॥ ೬ ॥

ಮೃಗಂ ಸ್ವಂ ಚಿಹ್ನಮುರಸಿ ನಿಧಾಯ ವಿಸಸರ್ಜ ಹ ।
ಸ ಉಚ್ಚೈಃಶ್ರವಸಂ ಗೃಹ್ಯ ಹಯರತ್ನಂ ವಿಧುಂತುದಃ ॥ ೭ ॥

ಜಾಲಂಧರಾಂತಿಕಂ ನೀತ್ವಾ ಭಕ್ತ್ಯಾ ತಸ್ಮೈ ನ್ಯವೇದಯತ್ ।
ದುರ್ವಾರಣೋ ರಣೇ ಕ್ರುದ್ಧಃ ತಂ ಯಮಂ ಗದಯಾಹನತ್ ॥ ೮ ॥

---

೪. ರಾಹುವು ಸೂರ್ಯನನ್ನು ಜಯಿಸಿ ಚಂದ್ರನ ಮೇಲೆ ಬಿದ್ದನು. ಆ ಚಂದ್ರನು ಯುದ್ಧಮಾಡುತ್ತಾ ಖಡ್ಗದಿಂದ ರಾಹುವನ್ನು ಹೊಡೆದನು.

೫. ರಾಹುವಿನ ದೇಹವು ಕಠಿಣವಾಗಿದ್ದುದರಿಂದ ಆ ಚಂದ್ರನ ಖಡ್ಗವು ಮುರಿದುಹೋಯಿತು. ಅನಂತರ ರಾಹುವು ಮುಷ್ಟಿಯಿಂದ ಆ ಚಂದ್ರನನ್ನು ಹೊಡೆದನು.

೬. ಒಡನೆಯೇ ಚಂದ್ರನು ಮೂರ್ಛೆಗೊಂಡನು. ರಾಹುವು ಕೂಡಲೇ ಅವನನ್ನು ಯುದ್ಧಭೂಮಿಯಿಂದ ಹೊರಗೆಕೊಂಡೊಯ್ದನು. ಮತ್ತು ನುಂಗಿ ಬಿಟ್ಟನು. ರಾಹುವು ನುಂಗಿದರೂ ಚಂದ್ರನು ಮತ್ತೆ ಹೊರಗೆ ಬಂದನು. [ಕತ್ತಿನಿಂದ ಕೆಳಕ್ಕೆ ರಾಹುವಿಗೆ ಶರೀರವು ಇಲ್ಲವಾದುದರಿಂದ ಇದು ಸ್ವಭಾವ.]

೭–೮. ಆಗ ರಾಹುವು ತನ್ನ ಪತಾಕೆಯ ಚಿಹ್ನೆಯಾದ ಮೃಗವನ್ನು ಆ ಚಂದ್ರನ ಎದೆಯಲ್ಲಿ ಗುರುತನ್ನಾಗಿಯೂ ಮಾಡಿಬಿಟ್ಟನು. ಅನಂತರ ರಾಹುವು ಇಂದ್ರನ ಉಚ್ಚೈಶ್ರವಸ್ಸೆಂಬ ಕುದುರೆಯನ್ನು ಹಿಡಿದು ಜಲಂಧರನ ಹತ್ತಿರಕ್ಕೆ ತೆಗೆದುಕೊಂಡು ಹೋಗಿ ಅವನಿಗೆ ಭಕ್ತಿಯಿಂದ ಒಪ್ಪಿಸಿದನು. ಯಮನು ದುರ್ವಾರಣನನ್ನು ಕೋಪಗೊಂಡು ಗದೆಯಿಂದ ಹೊಡೆದನು.

ನಿಶಿತೈರ್ಮಾರ್ಗಣೈರ್ಭಿನ್ನಃ ಶಕ್ರಪುತ್ರೇಣ ಚಾಹವೇ ।
ಧೃತ್ವಾ ಸಪತ್ನಂ ಸಂಹ್ರಾದಃ ಪರಿಘಾಘಾತಮೂರ್ಛಿತಂ ॥ ೯ ॥

ಐರಾವತಂ ಸಮಾರುಹ್ಯ ಯಯೌ ಜಾಲಂಧರಂ ಪ್ರತಿ ।
ಹತಂ ತತ್ರೈವ ಗದಯಾ ನಿಹ್ರಾದಂ ಧನದೋ ರಣೇ ॥ ೧೦ ॥

ರುದ್ರಾಸ್ತ್ರಿಶೂಲನಿರ್ಘಾತೈರ್ನಿಶುಂಭಂ ಜಘ್ನುರೋಜಸಾ ।
ನಿಶುಂಭೋ ಬಾಣಜಾಲೈಶ್ಚ ಪೀಡಯಾಮಾಸ ತಾನಪಿ ॥ ೧೧ ॥

ಶುಂಭಾಸುರೋ ದೇವಗಣಾನ್ ಪೂರಯಾಮಾಸ ಮಾರ್ಗಣೈಃ ।
ಮೃತ್ಯುಂ ಮಾಯಾಮಯೋ ಬದ್ಧ್ವಾ ಪಾಶೈರ್ನಿನಾಯ ತಂ ॥೧೨॥

ದದೌ ಜಾಲಂಧರಾಯಾಸೌ ಪೌಲೋಮ್ನೇ ಸೋಽಪಿ ಸಿಂಧವೇ ।
ಅಬ್ಧಿನಾ ಸ್ವಮುಖೇ ಕ್ಷಿಪ್ತೋ ಲೋಕೋ ಜೀವತು ನಿರ್ಭಯಃ ॥ ೧೩ ॥

---

೯–೧೧. ಸಂಹ್ರಾದನನ್ನು ಜಯಂತನು ಹರಿತವಾದ ಬಾಣದಿಂದ ಹೊಡೆದನು. ಆಗ ಸಂಹ್ರಾದನು ಪರಿಘದಿಂದ ಜಯಂತನನ್ನು ಹೊಡೆಯಲು ಅವನು ಮೂರ್ಛೆಗೊಂಡನು. ಮೂರ್ಛೆಗೊಳ್ಳಲು ಅವನನ್ನು ಐರಾವತದ ಮೇಲೆ ಹಾಕಿಕೊಂಡು ಜಲಂಧರನ ಸಮೀಪಕ್ಕೆ ಕೊಂಡೊಯ್ದನು. ಕುಬೇರನು ಗದೆಯಿಂದ ನಿಹ್ರಾದನನ್ನು ಕೊಂದನು. ರುದ್ರರು ತ್ರಿಶೂಲದಿಂದ ನಿಶುಂಭನನ್ನು ಹೊಡೆದರು. ನಿಶುಂಭನೂ ಬಾಣಗಳಿಂದ ಆ ರುದ್ರರನ್ನು ಹೊಡೆದನು.

೧೨. ಶುಂಭಾಸುರನು ದೇವತೆಗಳ ಮೇಲೆ ಬಾಣಗಳನ್ನು ಬಿಟ್ಟನು. ಮಾಯಾವಿಯಾದ ಮಯನು ಮೃತ್ಯುವನ್ನು ಹಗ್ಗಗಳಿಂದ ಕಟ್ಟಿಕೊಂಡು ಹೋದನು.

೧೩. ಮಯನು ಮೃತ್ಯುವನ್ನು ಕೊಂಡುಹೋಗಿ ಜಲಂಧರನಿಗೆ ಕೊಟ್ಟನು. ಅವನು ಪುಲೋಮನಿಗೆ ಕೊಟ್ಟನು. ಆ ಪುಲೋಮನು ಸಮುದ್ರನಿಗೆ ಕೊಟ್ಟನು. ಆ ಸಮುದ್ರನು ಈ ಮೃತ್ಯುವಿನ ನಾಶದಿಂದ ಲೋಕವೆಲ್ಲವೂ ನಿರ್ಭಯವಾಗಿ ಬದುಕಲೆಂದು ಹೇಳಿ ತನ್ನ ಬಾಯಲ್ಲಿಯೇ [ಸಮುದ್ರದಲ್ಲಿಯೇ] ಹಾಕಿಕೊಂಡನು.

ಬದ್ಧ್ವಾ ಚ ನಮುಚಿಂ ಪಾಶೈರ್ವಾಸವೋಽಪಿ ರಸಾತಲಂ ।
ನಿನ್ಯೇ ನಿಶ್ವಸ್ಯ ಹಸ್ತಾರಮಥ ಜಾಲಂಧರೋ ಯಯೌ ॥ ೧೪ ॥

ಅಥೇಂದ್ರವಲಯೋರ್ಯುದ್ಧಮಭೂದ್ರಾಜನ್ ಸುದಾರುಣಂ ।
ವಲಾಂಕರೋಚಿಷಾ ಭಾಂತಿ ದಿಶೋ ದಶ ರವೇರಿವ ॥ ೧೫ ॥

ಸರ್ವಾಣ್ಯಸ್ತ್ರಾಣಿ ಶಕ್ರಸ್ಯ ಶೀರ್ಣಾನ್ಯಂಗೇ ವಲಸ್ಯ ಚ ।
ಬಲೀಯಸಾ ಬಲೇನೇಂದ್ರೋ ಮುದ್ಗರೇಣ ಹತೋ ಹೃದಿ ॥ ೧೬ ॥

ನನಾದೇಂದ್ರಸ್ತತೋ ಭೀಮಂ ತಚ್ಛ್ರುತ್ವಾ ಸವಲೋಽಹಸತ್ ।
ಹಸತಸ್ತಸ್ಯ ನಿಶ್ಚೇರುರ್ಮುಖತೋ ಮೌಕ್ತಿಕಾನಿ ಚ ॥ ೧೭ ॥

---

೧೪. ಇತ್ತ ಇಂದ್ರನು ಪಾಶದಿಂದ ನಮುಚಿಯನ್ನು ಕಟ್ಟಿ ರಸಾತಳಕ್ಕೆ ಕೊಂಡುಹೋಗಿಬಿಟ್ಟನು. ಅನಂತರ ಆ ಜಲಂಧರನು ಇದನ್ನು ನೋಡಿ ಆ ಇಂದ್ರನ ಮೇಲೆ ಯುದ್ಧಕ್ಕೆ ಬಂದನು.

೧೫. ಎಲೈ ದೊರೆಯೇ ! ಅನಂತರ ವಲನು ಜಲಂಧರನನ್ನು ಕಳುಹಿಸಿ ತಾನು ಇಂದ್ರನ ಮೇಲೆ ಬರಲು ಇಬ್ಬರಿಗೂ ಯುದ್ಧ ನಡೆಯಿತು. ಆ ವಲನ ದೇಹದ ತೇಜಸ್ಸಿನಿಂದ ಹತ್ತುದಿಕ್ಕುಗಳೂ ಬೆಳಕಾದುವು. ಇದನ್ನು ನೋಡಿದರೆ ಸೂರ್ಯನಿಂದ ಬೆಳಗಲ್ಪಟ್ಟಿತೋ ಎಂಬಂತೆ ಇದ್ದಿತು.

೧೬. ಇಂದ್ರನು ಅನೇಕ ಬಾಣಗಳನ್ನು ಬಿಟ್ಟನು. ಅವೆಲ್ಲ ಆ ವಲನ ದೇಹದಲ್ಲಿಯೇ ಅಡಗಿಹೋದುವು. ಆಗ ಇಂದ್ರನು ಇದನ್ನು ನೋಡಿ ತನ್ನ ಬಲವನ್ನೆಲ್ಲಾ ಉಪಯೋಗಿಸಿ ಮುದ್ಗರದಿಂದ ಆ ವಲನ ಎದೆಗೆ ಹೊಡೆದನು.

೧೭. ಇಂದ್ರನು ಹೀಗೆ ಹೊಡೆದು ಸಿಂಹನಾದ ಮಾಡಿದನು. ಈ ಸಿಂಹ ನಾದವನ್ನು ಕೇಳಿ ವಲನು ನಕ್ಕನು. ನಗುತ್ತಿರುವಾಗ ಅವನ ಬಾಯಿಂದ ಮುತ್ತುಗಳು ಉದುರಿದುವು.

ತಸ್ಯಾಂಗಸ್ಯಾಭಿಲಾಷೇಣ ನ ಯುದ್ಧಮಕರೋತ್ತದಾ ।
ತುಷ್ಟಾವ ವಾಸವೋತ್ಯರ್ಥಂ ತಂ ಬಲಂ ಬಲಸಾಗರಂ ॥
ವರಂ ವೃಣು ಸುರುಶ್ರೇಷ್ಠೇತ್ಯುಕ್ತಃ ಪ್ರಾಹ ಬಲಂ ಪ್ರತಿ ॥ ೧೮ ॥

॥ ಇಂದ್ರ ಉವಾಚ ॥

ಯದಿ ತುಷ್ಟೋಽಸಿ ದೈತ್ಯೇಶ ಸ್ವಂ ವಪುರ್ದಾತುಮರ್ಹಸಿ ॥ ೧೯ ॥

॥ ನಾರದ ಉವಾಚ ॥

ತದಿಂದ್ರವಚನಂ ಶ್ರುತ್ವಾ ಛಿತ್ವಾ ಶಸ್ತ್ರೈರ್ಗೃಹಾಣ ಮಾಂ ।
ಇತ್ಯುವಾಚ ಬಲಂ ಸೋಽಪಿ ಕಿಮದೇಯಂ ಮಹಾತ್ಮನಾಂ ॥ ೨೦ ॥

ಗೀರಿವ ಶ್ರೋತ್ರಹೀನಸ್ಯ ಲೋಲಾಕ್ಷೀವ ವಿಚಕ್ಷುಷಃ ।
ಪರಾಸೋಃ ಪುಷ್ಪಮಾಲೇವ ಶ್ರೀಃ ಕದರ್ಯಸ್ಯ ನಿಷ್ಫಲಾ ॥ ೨೧ ॥

---

೧೮. ಇಂದ್ರನು ಆ ವಲನ ದೇಹವಲ್ಲಿ ಅಭಿಲಾಷೆ ಹುಟ್ಟಿ ಯುದ್ಧವನ್ನು ಮಾಡದೆ ಅವನನ್ನು ಬಹುವಾಗಿ ಸ್ತುತಿಸಿದನು. ಈ ಸ್ತೋತ್ರದಿಂದ ವಲನು ಸಂತೋಷಗೊಂಡು ಎಲೈ ಇಂದ್ರನೇ ! ವರವನ್ನು ಕೇಳಿಕೋ. ಎಂದೆನ್ನಲು ಆಗ ಇಂದ್ರನು ವಲನನ್ನು ಕುರಿತು ಇಂತೆಂದನು.

೧೯. ಇಂದ್ರನು ಹೇಳಿದನು–ಎಲೈ ದೈತ್ಯಶ್ರೇಷ್ಠನೇ ! ನೀನು ಸಂತೋಷ ಗೊಂಡಿದ್ದರೆ ನಿನ್ನ ದೇಹವನ್ನು ನನಗೆ ಕೊಡು. ಎಂದು ಕೇಳಿದನು.

೨೦. ನಾರದನು ಹೇಳಿದನು– ಇಂದ್ರನ ಈ ಮಾತನ್ನು ಕೇಳಿ ವಲನು ಶಸ್ತ್ರಗಳಿಂದ ನನ್ನನ್ನು ಕತ್ತರಿಸಿ ತೆಗೆದುಕೋ. ಎಂದು ಹೇಳಿದನು. ಮಹಾತ್ಮರು ಕೊಡದಿರುವುದು ಯಾವುದಿದೆ ?

೨೧. ಕೃಪಣನಲ್ಲಿ ಐಶ್ವರ್ಯ ಇದ್ದರೆ ಅದು ಕಿವುಡನ ಮುಂದೆ ಮಾತಾಡಿ ದಂತೆಯೂ, ಕುರುಡನಿಗೆ ಸುಂದರಿಯಂತೆಯೂ, ಹೆಣಕ್ಕೆ ಹೂಮಾಲೆಯಂತೆಯೂ ಫಲವಿಲ್ಲದೆ ಹೋಗುವುದು.

ಮಹಾತ್ಮಾನೋಽನುಗೃಹ್ಣಂತಿ ಹಿಂಸಮಾನಾನ್ರಿಪೂನಪಿ ।
ಸಪತ್ನೀಃ ಪ್ರಾಪಯಂತ್ಯಬ್ಧಿಂ ಸಿಂಧವೋ ನಗನಿಮ್ನಗಾಃ ॥ ೨೨ ॥

ಸುಜನೋ ನ ಯಾತಿ ವಿಕೃತಿಂ ಪರ
ಹಿತನಿರತೋ ವಿನಾಶಕಾಲೇಽಪಿ ।
ಛಿನ್ನೋಽಪಿ ಚಂದನತರುಃ ಸುರಭಯತಿ
ಮುಖಂ ಕುಠಾರಸ್ಯ ॥ ೨೩ ॥

ದೈವಂ ಪರಂ ನಶ್ಯತಿ ತಸುರಪಿ ನ ಶ್ರೀಃನಿವೇದಿತಂ ಸತ್ಸು ।
ಅವಿಶಿಷ್ಯತೇ ಹಿಮಾಂಶೋಃ ಸೈವ ಕಲಾ ಶಿರಸಿ ಯಾ ಶಂಭೋಃ ॥ ೨೪ ॥

ತೇ ಸಾಧವೋ ಭುವನಮಂಡಲಮೌಲಿಭೂತಾ
ಯೇ ಸಾಧುತಾಮನುಪಕಾರಿಷು ದರ್ಶಯಂತಿ ।
ಆತ್ಮಪ್ರಯೋಜನವಶಾತ್ ಕೃತಭಿನ್ನ ದೇಹಾ
ಪೂರ್ವೋಽಪಕಾರಿಶು ಖಲೋಽಪಿ ಹಿತಾನುರಕ್ತಃ ॥ ೨೫ ॥

---

೨೨-೨೩. ಬೆಟ್ಟದಲ್ಲಿ ಹುಟ್ಟಿದ ಮಹಾನದಿಗಳು ತಮ್ಮ ದೊಡ್ಡತನದಿಂದ ಸವತಿಯರನ್ನೂ ಕೂಡ ಸಮುದ್ರಕ್ಕೆ ಕರೆದುಕೊಂಡು ಹೋಗುತ್ತವೆ. ಈ ರೀತಿ ಮಹಾತ್ಮರು ತಮ್ಮನ್ನು ಹಿಂಸಿಸುತ್ತಿರುವ ಶತ್ರುಗಳಲ್ಲಿಯೂ ಅನುಗ್ರಹವುಳ್ಳವರಾಗಿ ಇರುತ್ತಾರೆ. ಪರಹಿತನಿರತನಾದ ಸಜ್ಜನನು ತನ್ನ ವಿನಾಶಕಾಲದಲ್ಲಿಯೂ ವಿಕಾರವನ್ನು ಹೊಂದಿರುವುದಿಲ್ಲ. ಗಂಧದ ಮರವು ಕೊಡಲಿಯು ತನ್ನನ್ನು ಕಡಿಯುತ್ತಿದ್ದರೂ ಅದನ್ನು ವಾಸನೆಯುಳ್ಳದ್ದನ್ನಾಗಿ ಮಾಡುತ್ತದೆ.

೨೪. ಯಾವನು ಸಜ್ಜನರಲ್ಲಿ ತನ್ನ ಸಂಪತ್ತುಗಳನ್ನು ದಾನಮಾಡುವನೋ ಅವನ ಸಂಪತ್ತು ಸ್ವಲ್ಪವೂ ನಾಶವಾಗುವುದಿಲ್ಲ. ಚಂದ್ರನು ತನ್ನ ಒಂದು ಕಳೆಯನ್ನು ಈಶ್ವರನಿಗೆ ದಾನಮಾಡಿ ಅದನ್ನು ಈಶ್ವರನು ತನ್ನ ತಲೆಯಲ್ಲಿ ಧರಿಸಿದ್ದರೂ ಚಂದ್ರನು ಆ ಕಳೆಯಿಂದ ಕಡಿಮೆಯಾಗದೆ ಪೂರ್ಣವಾಗಿಯೇ ಇರುವನು.

೨೫. ಯಾರು ತನಗೆ ಉಪಕಾರ ಮಾಡದವನಲ್ಲಿ ತಮ್ಮ ಸಾಧುತನವನ್ನು ತೋರಿಸುವರೋ ಅವರೇ ಈ ಪ್ರಪಂಚಕ್ಕೆ ಶಿರೋಭೂಷಣರಾದ ಸಾಧುಗಳು. ಈ ರಾಕ್ಷಸನೂ ಕೂಡ ತನಗೆ ಅಪಕಾರಮಾಡುತ್ತಿರುವ ಇಂದ್ರನಿಗೆ ಅವನ ಅನುಕೂಲಕ್ಕೋಸ್ಕರ ತನ್ನ ದೇಹವನ್ನು ಕತ್ತರಿಸಿಕೊಟ್ಟು ಅವನ ಹಿತದಲ್ಲಿಯೇ ಆಸೆಪಟ್ಟನು.

ತಥೇತ್ಯುಕ್ತ್ವಾ ಸಹಸ್ರಾಕ್ಷೋ ಮುದ್ಗರೇಣಾಹನದ್ಬಲಂ ।
ನ ಬಿಭೇದ ತದಾ ದೇಹಂ ಶಕ್ರಶ್ಚಿಂತಾಮುವಾಪ ಹ ॥ ೨೬ ॥

ಸಂಸ್ಮಾರಿತೋ ಮಾತಳಿನಾ ವಜ್ರೇಣಾಂಗಂ ಜಘಾನ ತತ್ ।
ತೇನ ವಜ್ರಪ್ರಹಾರೇಣ ಬಲಾಂಗಂ ತದ್ವ್ಯಶೀರ್ಯತ ॥ ೨೭ ॥

ಬಲಾಂಗಸ್ಯೈಕಭಾಗಸ್ತು ಪಪಾತ ಕನಕಾಚಲೇ ।
ಮಹೇಶಾದ್ರೌ ದ್ವಿತೀಯಸ್ತು ತೃತೀಯೋ ಗೋನಗೇಪತತ್ ॥ ೨೮ ॥

ಚತುರ್ಥೋ ದೇವನದ್ಯಾಂ ಚ ಪಂಚಮೋ ಮಂದರೇ ತಥಾ ।
ವಜ್ರಾಕಾರಃ ಪಪಾತಾಂಶಃ ಷಷ್ಠಶ್ಚ ವಿಜಯಾಂಗಜಃ ॥ ೨೯ ॥

ತಸ್ಯ ಜಾತಿವಿಶುದ್ಧಸ್ಯ ಪರಿಶುದ್ಧೇನ ಕರ್ಮಣಾ ।
ಕಾಯಸ್ಯಾವಯವಾಸ್ಸರ್ವೇ ರತ್ನ ಬೀಜತ್ವಮಾಗತಾಃ ॥ ೩೦ ॥

---

೨೬. ಇಂದ್ರನು ಹಾಗೇ ಆಗಲೆಂದು ಮುದ್ಗರದಿಂದ ಆ ವಲಾಸುರನನ್ನು ಹೊಡೆದನು. ಆದರೂ ಅವನ ದೇಹವು ಸೀಳಲಿಲ್ಲ. ಆಗ ಇಂದ್ರನಿಗೆ ಯೋಚನೆ ಆಯಿತು.

೨೭. ಮಾತಳಿಯು ಇಂದ್ರನಿಗೆ ಸೂಚಿಸುತ್ತಲೂ ಇಂದ್ರನು ವಜ್ರಾಯುಧವನ್ನು ತೆಗೆದುಕೊಂಡು ಆ ವಲನ ದೇಹಕ್ಕೆ ಹೊಡೆದನು. ಆ ವಜ್ರಾಯುಧದ ಹೊಡೆತದಿಂದ ಆ ವಲನ ಶರೀರವು ಒಡೆದು ಚೂರಾಯಿತು.

೨೮-೨೯. ಆ ವಲನ ಚೂರಾದ ಶರೀರದ ಒಂದು ಭಾಗವು ಮೇರು ಪರ್ವತದಲ್ಲಿಯೂ, ಎರಡನೆಯ ಭಾಗವು ಹಿಮವತ್ಪರ್ವತದಲ್ಲೂ, ಮೂರನೆಯ ಭಾಗವು ವೃಷಭಾಚಲದಲ್ಲೂ, ನಾಲ್ಕನೆಯ ಭಾಗವು ಗಂಗಾನದಿಯಲ್ಲೂ, ಐದನೆಯ ಭಾಗವು ಮಂದರಪರ್ವತದಲ್ಲಿಯೂ, ಆರನೆಯ ಭಾಗವು ವಜ್ರಾಕಾರವಾಗಿ ವಿಜಯನ ಅಂಗವನ್ನೂ ಹೊಂದಿದುವು.

೩೦. ಜಾತಿಯಲ್ಲಿಯೂ ಕುಲದಲ್ಲಿಯೂ ಶುದ್ಧವಾದ ಮತ್ತು ಕರ್ಮದಿಂದ ಪವಿತ್ರವಾದ ಆ ವಲನ ದೇಹದ ಅವಯವಗಳೆಲ್ಲವೂ ರತ್ನಗಳಿಗೆ ಬೀಜಗಳಾಗಿ ಪರಿಣಮಿಸಿದುವು.

ವಜ್ರಾಪ್ರದಸ್ಥಿಕಣಾಃ ಕೀರ್ಣಾಃ ಷಟ್ಕೋಣಾಮಣಯೋಽಭವನ್ ।
ಅಕ್ಷಿಭ್ಯಾಮಿಂದ್ರನೀಲಾ ವೈ ಮಾಣಿಕ್ಯಂ ಶ್ರುತಿಸಂಭವಃ ॥ ೩೧ ॥

ಕ್ಷತಜಾತ್ಪದ್ಮರಾಗಸ್ತು ಮೇದಸೋ ಮರಕಾಸ್ತಥಾ ।
ಪ್ರವಾಳಾನಿ ಚ ಜಿಹ್ವಾಽಸ್ಯ ದಂತಾ ಮುಕ್ತಾ ಸ್ತಥಾಽಭವನ್ ॥ ೩೨ ॥

ದ್ವಿಪೇಂದ್ರಜೀಮೂತವರಾಹಭೇಕ
ಮತ್ಸ್ಯಾಹಿಶುಕ್ತ್ಯುದ್ಭವವೇಣುಜಾನಿ ।
ಮುಕ್ತಾಫಲಾನ್ಯಚ್ಛತಮಾನಿ ಲೋಕೇ
ತೇಷಾಂ ಸ ದೈವ ಕಥಿತಾ ಭವಭೂಮಿರೇಷಃ ॥ ೩೩ ॥

ಸಿತಂ ವೃತ್ತಂ ಗುರುಸ್ನಿಗ್ಧಂ ಕೋಮಲಂ ನಿರ್ಮಲಂ ತಥಾ ।
ಷಾಡ್ಗುಣ್ಯೇನ ಸಮಾಯುಕ್ತಂ ಮೌಕ್ತಿಕಂ ಗುಣತಃಸ್ಮೃತಂ ॥ ೩೪ ॥

ಮಜ್ಜೋದ್ಭವಂ ಮರಕತಂ ಸಿಂಧುಸೂನೋಃ ಪ್ರಹಾರತಃ ।
ಗರುಡೋದ್ಗಾರನಾಮ್ನಾಽಸೌ ರಾಜನ್ಮಣಿರಭೂತ್ತದಾ ॥ ೩೫ ॥

---

೩೧–೩೨. ವಜ್ರದಿಂದ ಹೊಡೆದಾಗ ಅವನ ಮೂಳೆಗಳ ಚೂರು ಆ ಹೊಡೆತಕ್ಕೆ ಹಾರಿದವು. ಅವೇ ಆರು ಮೂಲೆಗಳ ಮಣಿಗಳೆನ್ನಿಸಿಕೊಂಡುವು. ಅವನ ಕಣ್ಣುಗಳಿಂದ ಇಂದ್ರನೀಲಗಳೂ ಕಿವಿಯಿಂದ ಮಾಣಿಕ್ಯಗಳೂ ರಕ್ತದಿಂದ ಪದ್ಮರಾಗಗಳೂ ಮೇದಸ್ಸಿನಿಂದ ಮರಕತಗಳೂ ನಾಲಗೆಯಿಂದ ಹವಳಗಳೂ ಹಲ್ಲುಗಳಿಂದ ಮುತ್ತುಗಳೂ ಆದವು.

೩೩. ಆನೆ, ಮೇಘ, ಹಂದಿ, ಕಪ್ಪೆ, ಮೀನು, ಹಾವು, ಕಪ್ಪೇಚಿಪ್ಪು, ಬಿದಿರು, ಇವುಗಳಲ್ಲಿ ಉತ್ತಮವಾಗಿರತಕ್ಕ ಮುತ್ತುಗಳಿವೆ. ಎಂದು ಲೋಕ ಪ್ರಸಿದ್ಧವಾಗಿವೆ. ಅವಕ್ಕೆಲ್ಲಾ ಈತನೇ ಉತ್ಪತ್ತಿಸ್ಥಾನನು.

೩೪. ಬಿಳುಪು, ದುಂಡು, ದಪ್ಪ, ನುಣುಪು, ಮನೋಹರತೆ, ಸ್ವಚ್ಛವಾಗಿರುವುದು. ಈ ಆರು ಗುಣಗಳು ಮುತ್ತಿನ ಗುಣವೆಂದು ತಿಳಿಯಬೇಕು.

೩೫. ಇಂದ್ರನ ಆ ಏಟಿನಿಂದ ಮಜ್ಜೆ (ಕೊಬ್ಬು) ಯಲ್ಲಿ ಮರಕತ ಮಣಿಯು ಹುಟ್ಟಿತು. ಅದೇ ಗರುಡ ಮಣಿಯೆಂಬ ಹೆಸರನ್ನು ಹೊಂದಿ ಪ್ರಸಿದ್ಧವಾಯಿತು.

ಪಾಟಕೋಪರಿ ಸಂವೇಶ್ಯ ಪುಮಾಂಸ್ತಂ ವಿದಧಾತಿ ಯಃ ।
ಸರ್ಪಗ್ರಹದರಿದ್ರಾದಿಭಯಂ ತಸ್ಯ ನ ಜಾಯತೇ ॥ ೩೬ ॥

ಕಾಂಸ್ಯಂ ಪುರೀಷಂ ರಜತಂ ವೀರ್ಯಂ ತಾಮ್ರಂ ಚ ಮೂತ್ರಜಂ ।
ಅಂಗಸ್ಯೋದ್ವರ್ತನಾಜ್ಜಾತಂ ಪಿತ್ತಲಂ ಬ್ರಹ್ಮವೀತಿಕಾಃ ॥ ೩೭ ॥

ನಾದಾದ್ವೈಡೂರ್ಯಮುತ್ಪನ್ನಂ ರತ್ನಂ ಚಾರುತರಂ ತದಾ ।
ನಖೇಭ್ಯಃ ಕನಕೋತ್ಪತ್ತೀ ರುಧಿರಾಚ್ಚ ರಸೋದ್ಭವಃ ॥ ೩೮ ॥

ಮೇದಸಸ್ಸ್ಫಟಿಕಂ ಜಾತಂ ಪ್ರವಾಳಂ ಮಾಂಸಸಂಭವಂ ।
ಬಲದೇಹೋದ್ಭವಾನ್ಯಾಸನ್ ರತ್ನಾನಿ ಪೃಥಿವೀ ತಳೇ ॥ ೩೯ ॥

ಪುಣ್ಯೋಪಚಯಸಂಪತ್ತ್ಯಾ ಭೋಕ್ಷ್ಯಂತೇ ವಿಮಲೈರ್ಜನೈಃ ।
ಅತ್ರಾಂತರೇ ಹತಂ ಶ್ರುತ್ವಾ ಬಲಂ ಮಘವತಾ ಮೃಧೇ ॥ ೪೦ ॥

---

೩೬. ಚಿನ್ನದಲ್ಲಿ ಆ ಮಣಿಯನ್ನು ಕಟ್ಟಿಸಿ ಮನುಷ್ಯನು ಧರಿಸಿದರೆ, ಹಾವು ಗ್ರಹ, (ದೆವ್ವ) ದರಿದ್ರ, ಇತ್ಯಾದಿಗಳ ಭಯವು ಸ್ವಲ್ಪವೂ ಇರುವುದಿಲ್ಲ.

೩೭. ಆ ವಲನ ಪಾಯಿಖಾನೆಯೇ ಕಂಚಾಯಿತು. ವೀರ್ಯವೇ ಬೆಳ್ಳಿಯಾಯಿತು. ಮೂತ್ರದಿಂದ ತಾಮ್ರವು ಹುಟ್ಟಿತು. ಮೈಯ್ಯನ್ನು ತಿಕ್ಕಿದುದರಿಂದ ಬಂದ ಕೊಳೆಯೇ ಹಿತ್ತಾಳೆಯಾಯಿತು.

೩೮. ಅವನ ಧ್ವನಿಯಿಂದ ವೈಡೂರ್ಯವೂ, ಉಗುರುಗಳಿಂದ ಚಿನ್ನವೂ ರಕ್ತದಿಂದ ರಸಗಳೂ ಉತ್ಪನ್ನವಾದುವು.

೩೯. ಮೇದಸ್ಸಿನಿಂದ ಸ್ಫಟಿಕವೂ, ಮಾಂಸದಿಂದ ಹವಳವೂ ಉಂಟಾದವು. ಈ ರೀತಿಯಾಗಿ ಭೂಮಿಯಲ್ಲಿ ರತ್ನಗಳೆಲ್ಲವೂ ವಲನೆಂಬ ದೈತ್ಯನ ದೇಹದಿಂದ ಹುಟ್ಟಿದುವು.

೪೦-೪೧. ಇವೆಲ್ಲವನ್ನೂ ಉತ್ತಮರಾದ ಜನರು ಬಹುವಾದ ಪುಣ್ಯ ಮಾಡಿದ್ದರೆ ಅನುಭವಿಸುತ್ತಾರೆ. ಇಷ್ಟರಲ್ಲಿ ಇತ್ತ ಯುದ್ಧದಲ್ಲಿ ಇಂದ್ರನು ವಲನನ್ನುಕೊಂದನು ಎಂಬುದನ್ನು ಅವನ ಹೆಂಡತಿಯಾದ ಮಹಾರಾಣಿ

ಪ್ರಭಾವತೀ ನಾಮ ರಾಜ್ಞೀ ಯಯೌ ತಚ್ಚರಣಾಂತಿಕಂ ।
ವಿಲಲಾಪ ಪತಿಂ ದೃಷ್ಟ್ವಾ ವಿಶೀರ್ಣಾವಯವಂ ರಣೇ ॥
ಪ್ರಭಾವತ್ಯಶ್ರುಪೂರ್ಣಾಕ್ಷೀ ಮುಕ್ತಕೇಶೀ ಘನಸ್ತನೀ ॥ ೪೧ ॥

॥ ಪ್ರಭಾವತ್ಯುವಾಚ ॥

ಹಾ ನಾಥ ಬಲ ವಿಕ್ರಾಂತ ಕಾಂತದೇಹ ಜಗತ್ಪ್ರಿಯ ।
ಮಾಂ ತ್ವಂ ವಿಹಾಯ ಕಿಂ ಚಾತ್ರ ಕೈವಲ್ಯಂ ಗತವಾನಸಿ ॥ ೪೧ ॥

ಜರಾ ಕುಷ್ಠಾದಿಭಿರ್ವ್ಯಾಪ್ತಂ ಬುದ್ಧ್ವಾ ದೇಹಂ ತ್ಯಜಂತಿ ನ ।
ದೇಹಿನೋಽನ್ಯೇ ಪರಂ ಕಾಂತಂ ತ್ವಯಾ ದೇಹಂ ವೃಥೋಜ್ಝಿತಂ ॥ ೪೨ ॥

ತವ ದೇಹೇನ ದಿವ್ಯೇನ ಹಾರಕೋ ಭೂಷ್ಯತೇ ಪ್ರಿಯ ।
ರಣೋತ್ಸುಕೇನ ಭವತಾ ಯಾ ವೇಣೀ ಗ್ರಥಿತಾ ಮಮ ॥
ತಾಮುದ್ಗ್ರಂಥಯ ವೈಧವ್ಯದುಃಖಾರ್ತಾಯಾಃ ಸ್ವಯಂ ಪ್ರಿಯ ॥೪೪॥

---

ಪ್ರಭಾವತಿಯು ಕೇಳಿ ಆ ಯುದ್ಧರಂಗದಲ್ಲಿರುವ ಶವದ ಬಳಿಗೆ ಬಂದಳು. ಇವನ ದೇಹವು ಯುದ್ಧರಂಗದಲ್ಲಿ ಚಲ್ಲಾಪಿಲ್ಲಿಯಾಗಿ ಚೆಲ್ಲಿರುವುದನ್ನು ನೋಡಿ ಆ ಪ್ರಭಾವತಿಯು ಕಣ್ಣೀರು ಬಿಡುತ್ತಾ ತಲೆಯನ್ನು ಬಿಚ್ಚಿಕೊಂಡು ಅಳಲು ಉಪಕ್ರಮ ಮಾಡಿದಳು.

೪೨. ಪ್ರಭಾವತಿಯು ಹೇಳಿದಳು– ಎಲೈ ನಾಥನೇ ! ಬಲನೇ ! ಪರಾಕ್ರಮಿಯೇ ! ಮನೋಹರವಾದ ದೇಹವುಳ್ಳವನೇ ! ಪ್ರಪಂಚಕ್ಕೇ ಪ್ರಿಯನಾದವನೇ ! ನನ್ನನ್ನು ಬಿಟ್ಟು ಬಿಟ್ಟು ನೀನೇಕೆ ಕೈವಲ್ಯಕ್ಕೆ ಹೋದೆ ?

೪೩. ಮುಪ್ಪು, ಕುಷ್ಠ, ಮುಂತಾದವುಗಳಿಂದ ಕೂಡಿದ ದೇಹವನ್ನು ಕೂಡ ಇತರ ಪ್ರಾಣಿಗಳು ಬಿಡುವುದಿಲ್ಲ. ಹೀಗಿರುವಲ್ಲಿ ಬಹು ಉತ್ತಮವಾದ ಈ ದೇಹವನ್ನು ನೀನು ವ್ಯರ್ಥವಾಗಿ ಬಿಟ್ಟೆಯಲ್ಲ !

೪೪. ನಿನ್ನ ಈ ದಿವ್ಯವಾದ ದೇಹದಿಂದ ಹಾರಕ್ಕೆ ಅಲಂಕಾರವಾಗಿರುತ್ತದೆ. ರಣದಲ್ಲಿ ಆಸೆಪಟ್ಟು ಹೋಗುವಾಗ ನೀನು ನನಗೆ ಜಡೆಯನ್ನು ಹಾಕಿದ್ದೀಯೆ. ಈಗ ಆ ತಲೆಯ ಜಡೆಯನ್ನು ದುಃಖಗೊಂಡ ನನಗೆ ತುರುಬುಕಟ್ಟು.

|| ನಾರದ ಉವಾಚ ||

ಏವಂ ವಿಲಪತೀಂ ವೀಕ್ಷ್ಯ ಬಲರಾಜ್ಞೀಂ ಸಮುದ್ರಜಃ |
ದುಃಖಿತಃ ಶುಕ್ರಮಿತ್ಯಾಹ ಬಲಂ ಜೀವಯ ಭಾರ್ಗವ || ೪೫ ||

|| ಶುಕ್ರ ಉವಾಚ ||

ಇಚ್ಛಯಾ ಮರಣಂ ಪ್ರಾಪ್ತಂ ತಂ ಕಥಂ ಜೀವಯಾಮ್ಯಹಂ |
ತಥಾಪಿ ಮಂತ್ರಸಾಮರ್ಥ್ಯಾದ್ವಾಚಮುಚ್ಚಾರಯಿಷ್ಯತಿ || ೪೬ ||

|| ಜಾಲಂಧರ ಉವಾಚ ||

ಬಲಸ್ಯ ರೂಪವಚನಂ ಶ್ರೋತುಮಿಚ್ಛಾಮಿ ಭಾರ್ಗವ || ೪೭ ||

|| ನಾರದ ಉವಾಚ ||

ಜಾಲಂಧರೇಣೈವಮುಕ್ತಃ ಕ್ಷಣಂ ಧ್ಯಾನಪರೋಽಭವತ್ |
ಅಥೋದತಿಷ್ಠದ್ವದನಾತ್ ಸ್ವನಃ ಶ್ರೋತ್ರಮನೋರಮಃ || ೪೮ ||

---

೪೫. ನಾರದನು ಹೇಳಿದನು- ಸಮುದ್ರನ ಮಗನಾದ ಜಲಂಧರನು ವಲನ ಹೆಂಡತಿಯು ಹೀಗೆ ಅಳುತ್ತಿರುವುದನ್ನು ನೋಡಿ ತಾನೂ ದುಃಖಗೊಂಡು ಶುಕ್ರಾಚಾರ್ಯನನ್ನು ಕುರಿತು ಈ ವಲನನ್ನು ಬದುಕಿಸೆಂದನು.

೪೬. ಶುಕ್ರನು ಹೇಳಿದನು– ಎಲೈ ಜಲಂಧರನೇ ! ಆತನು ಇಚ್ಛಿಪಟ್ಟು ಸತ್ತಿರುವುದರಿಂದ ಹೇಗೆ ತಾನೇ ಬದುಕಿಸಲಿ ? ಆದರೂ ಕೂಡ ಮಂತ್ರದ ಶಕ್ತಿಯಿಂದ ಮಾತನಾಡಿಸುತ್ತೇನೆ.

೪೭. ಜಲಂಧರನು ಹೇಳಿದನು– ಎಲೈ ಶುಕ್ರಾಚಾರ್ಯನೇ ! ವಲನ ರೂಪವ ವಿಷಯುವನ್ನೂ ಅವನ ಮಾತನ್ನೂ ಕೇಳಲು ಇಚ್ಛಿಸುತ್ತೇನೆ-

೪೭. ನಾರದನು ಹೇಳಿದನು– ಜಲಂಧರನು ಹೀಗೆ ಹೇಳಲು ಶುಕ್ರಾಚಾರ್ಯನು ಧ್ಯಾನಮಾಡಲು ಮೊದಲುಮಾಡಿದನು. ಆಗ ಆ ವಲನ ಬಾಯಿಂದ ಮನೋಹರವಾದ ಮಾತು ಹೊರಟಿತು.

ಪ್ರಭಾವತೀಂ ಪ್ರತಿ ವ್ಯಕ್ತಂ ವಾದ್ಯಭಾಂಡಾದಿವ್ರೋತ್ಥಿತಃ ।
ಪ್ರಭಾವತಿ ಸ್ವದೇಹಂ ತ್ವಂ ಮಮಾಂಗೇಷು ಲಯಂ ನಯ ॥
ಇತಿ ತಸ್ಯ ವಚಶ್ಶ್ರುತ್ವಾ ನದೀ ಜಾತಾ ಪ್ರಭಾವತೀ ॥ ೪೯ ॥

ಬಲಾಂಗೇಷ್ವೇವ ಲೀನಾ ಸಾ ಸುಮೇರೋಃ ಪೂರ್ವವಾಹಿನೀ ।
ಯಸ್ಯಾಸ್ತೋಯೇನ ಸಂಜಾತಾ ರತ್ನಾನಾಂ ಕಾಂತಿರುತ್ತಮಾ ॥ ೫೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಜಾಲಂಧರೋ
ಪಾಖ್ಯಾನೇ ವಲದೈತ್ಯ ಸ್ವರ್ಗಾರೋಹಣಂ ನಾಮ
ಸಪ್ತಮೋಽಧ್ಯಾಯಃ

---

೪೯. ಆಗ ಪ್ರಭಾವತಿಯನ್ನು ಕುರಿತು ಘಟವಾದ್ಯದಿಂದ ಧ್ವನಿಯು ಹೊರಡುವಂತೆ ಅವನ ಧ್ಯಾನದಿಂದ ವಲನಲ್ಲಿ ಧ್ವನಿಯು ಹೊರಟು ಹೇಳಿತು. ಎಲೈ ಪ್ರಭಾವತಿಯೇ! ನೀನು ನಿನ್ನ ದೇಹವನ್ನು ದೇಹವನ್ನು ನನ್ನ ಅವಯವ ಗಳಲ್ಲಿ ಸೇರಿಸು. ಎಂದು ಹೇಳಿತು. ಈ ರೀತಿಯಾದ ಆತನ ಮಾತನ್ನು ಕೇಳಿ ಆ ಪ್ರಭಾವತಿಯು ನದಿಯಾದಳು.

೫೦. ಆಗ ಆ ನದಿಯು ಸಮೇರುವಿನಿಂದ ಪೂರ್ವಕ್ಕೆ ಹೊರಟು ಆ ವಲನ ಅವಯವದಲ್ಲಿ ಅಡಗಿತು. ಆ ಅಡಗಿದ ನೀರಿನಿಂದಲೇ ರತ್ನಗಳಿಗೆ ಉತ್ತಮವಾದ ಕಾಂತಿಯು ಬಂದಿತು.

ಇಂತು ಶ್ರೀ ಪದ್ಮಮಹಾಪುರಾಣ ದಉತ್ತರಖಂಡದ ಜಾಲಂಧರನ
ಉಪಾಖ್ಯಾನದಲ್ಲಿ ವಲದೈತ್ಯನ ಸ್ವರ್ಗಾರೋಹಣವೆಂಬ
ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಮೋಽಧ್ಯಾಯಃ ॥



॥ ನಾರದ ಉವಾಚ ॥

ತತೋ ಜಾಲಂಧರಃ ಕ್ರುದ್ಧಃ ಪ್ರಾಹ ತಂ ದೈತ್ಯಸೂದನಂ ॥ ೧ ॥

॥ ಜಾಲಂಧರ ಉವಾಚ ॥

ಕಪಟೇನ ಬಲಂ ಹತ್ವಾ ಕ್ವ ಯಾಸ್ಯಸಿ ಬಲಾಧಮ ॥ ೨ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ತಂ ಶತಮುಖಂ ಸಿಂಧುಸೂನುಃ ಪ್ರತಾಪವಾನ್ ।
ಸಸೂತಾಶ್ವಧ್ವಜರಥಂ ಛಾದಯಾಮಾಸ ಮಾರ್ಗಣೈಃ ॥ ೩ ॥

---

## ಎಂಟನೆಯ ಅಧ್ಯಾಯವು

೧. ನಾರದನು ಹೇಳಿದನು– ಆಗ ಜಲಂಧರನು ಇಂದ್ರನನ್ನು ಕುರಿತು ಕೋಪಗೊಂಡು ಇಂತೆಂದನು.

೨. ಜಲಂಧರನು ಹೇಳಿದನು– ಎಲೈ ಹೇಡಿಯೇ! ಮೋಸದಿಂದ ವಲನನ್ನು ಕೊಂದು ಈಗ ಎಲ್ಲಿಗೆ ಹೋಗುತ್ತೀಯೆ?

೩. ನಾರದನು ಹೇಳಿದನು– ಜಲಂಧರನು ಇಂದ್ರನಿಗೆ ಇಂತೆಂದು ಹೇಳುತ್ತಾ ಬಾಣವನ್ನು ಬಿಟ್ಟು ಸಾರಥಿ, ಕುದುರೆ, ರಥಗಳನ್ನು ಮುಚ್ಚಿದನು.

ಸವಾತ ಮೂರ್ಛಿತಶ್ಶಕ್ರೋ ರಥೋಪರಿ ಶರೈಃ ಕ್ಷತಃ ।
ದೃಷ್ಟ್ವಾ ತಂ ಪತಿತಂ ಶಕ್ರಂ ಜಗರ್ಜಾರ್ಣವನಂದನಃ ॥ ೪ ॥

ವಿಕಾಸವದನೀ ಪಿಶುನಃ ಪ್ರಫುಲ್ಲನಯನೋ ಯದಾ ಭವತಿ ।
ಮನ್ಯೇ ತದಾಸ್ಯ ಜಾತಂ ಸಂಕ್ರಮತಃ ಫಲಂ ತೂರ್ಣಂ ॥ ೫ ॥

ಮೂರ್ಛಾಂ ತ್ಯಕ್ತ್ವಾ ಮನೋಽಚೇಂದ್ರೋ ವಜ್ರಂ ಜಾಲಂಧರಂ ಪ್ರತಿ ।
ತದಾದ್ರಿದಳನಂ ಹಸ್ತೇ ಗೃಹೀತ್ವಾ ಸಿಂಧುಸಂಭವಃ ॥ ೬ ॥

ವಜ್ರಂ ಕಕ್ಷಾಪುಟೇ ಧೃತ್ವಾ ರಥಾದುತ್ತೀರ್ಯ ಸತ್ವರಃ ।
ಅಭ್ಯಧಾವತ ದೈತ್ಯೇಂದ್ರೋ ದೇವೇಂದ್ರಂ ಧರ್ತುಮಾಹವೇ ॥ ೭ ॥

ತತೋ ದುದ್ರಾವ ಮಘವಾ ರಥಂ ತ್ಯಕ್ತ್ವಾ ಹರಿಂ ಸ್ಮರನ್ ।
ರಥಮಿಂದ್ರಸ್ಯ ಬಲವಾನಾರುಹ್ಯಾರ್ಣವನಂದನಃ ॥ ೮ ॥

---

೪. ಹೀಗೆ ಬಾಣಗಳಿಂದ ಏಟುಬಿದ್ದು ಇಂದ್ರನು ರಥದಲ್ಲಿಯೇ ಮೂರ್ಛೆ ಬಂದು ಬಿದ್ದನು. ಇಂದ್ರನು ಬಿದ್ದುದನ್ನು ನೋಡಿ ಜಲಂಧರನು ಸಿಂಹನಾದ ಮಾಡಿದನು.

೫. ದುಷ್ಟನು ಯಾವಾಗ ಸಂತೋಷಗೊಂಡು ಮುಖವನ್ನು ಅರಳಿಸಿ ಕೊಂಡು ಕಣ್ಣುಗಳನ್ನು ಅಗಲವಾಗಿ ಬಿಟ್ಟುಕೊಂಡು ಇರುವನೋ ಆಗಲೇ ಅದರ ಫಲವು ಪೂರ್ಣವಾಗಿ ಸೇರಿಕೊಳ್ಳುವುದೆಂದು ನನಗೆ ತೋರುತ್ತದೆ.

೬–೭. ಮೂರ್ಛೆಯು ತಿಳಿದ ಮೇಲೆ ಜಲಂಧರನ ಮೇಲೆ ಇಂದ್ರನು ವಜ್ರಾಯುಧವನ್ನು ಪ್ರಯೋಗಿಸಿದನು ಆಗ ಜಲಂಧರನು ಪರ್ವತವನ್ನು ಕಡಿಯುವ ಆ ವಜ್ರವನ್ನು ಕೈಯ್ಯಲ್ಲಿ ಹಿಡಿದುಕೊಂಡು ಕಂಕುಳಲ್ಲಿ ಇರುಕಿಕೊಂಡು ರಥದಿಂದ ಕೆಳಕ್ಕೆ ಇಳಿದು ದೇವೇಂದ್ರನನ್ನು ಹಿಡಿದುಕೊಳ್ಳಲು ಬೇಗನೆ ಓಡಿದನು.

೮–೯. ಆಗ ಇಂದ್ರನು ರಥವನ್ನು ಬಿಟ್ಟು ಹರಿಯನ್ನು ಸ್ಮರಿಸುತ್ತಾ ಓಡಿದನು. ಆಗ ಈ ಬಲಿಷ್ಠನಾದ ಜಲಂಧರನು ಇಂದ್ರನ ರಥವನ್ನು ಹತ್ತಿ

ಯಂತಾರಂ ಮಾತಳಿಂ ಕೃತ್ವಾ ಯಯೌ ಪ್ರಾಪ್ತಮನೋರಥಃ ।
ರಥಮಿಂದ್ರಸ್ಯ ತರಸಾ ಯತ್ರ ಯತ್ರ ಯಯೌ ವಲೇ ॥
ಜಾಲಂಧರೋ ಮಹಾಬಾಹುಃ ಸ್ವಯಂ ಚಾಂಬುಧರೋ ಯಥಾ ॥ ೯ ॥

ತತಸ್ಸರೋಷಾತ್ಪುರುಷೋತ್ತಮಃ ಸ್ವಯಂ
ಖಡ್ಗಂ ಸಮುದ್ಯಮ್ಯ ಚ ನಂದಕಂ ರಣೇ ।
ಸಂಪ್ರೇರಯಿತ್ವಾ ಗರುಡಂ ಮನೋಜವಂ
ಜಘಾನ ಕೋಪೇನ ಚ ದೈತ್ಯವಾಹಿನೀಂ ॥ ೧೦ ॥

ರಥಾನ್ ಹಯಾನ್ ಕುಂಜರಪತ್ತಿಸಂಘಾನ್
ಸ ಪಾತಯಾಮಾಸ ಬಲಾತ್ಸಹಸ್ರಶಃ ।
ಜನಾರ್ದನಃ ಕಶ್ಯಪಸೂನುಸಂವೃತಃ
ಚಕಾರ ಸಂಖ್ಯೇ ಚರಿತಂ ಭಯಾವಹಂ ॥ ೧೧ ॥

---

ಮಾತಳಿಯನ್ನು ಸಾರಥಿಯನ್ನಾಗಿ ಮಾಡಿಕೊಂಡು ಇಷ್ಟಾರ್ಥವು ಕೈಗೂಡಿದನಾಗಿ ಹೊರಟನು. ಹೀಗೆ ಇಂದ್ರನ ರಥವನ್ನು ಹತ್ತಿ ಈ ಇಂದ್ರನು ಎಲ್ಲೆಲ್ಲಿಗೆ ಹೋದರೂ ಅಲ್ಲಲ್ಲಿಗೆ ಈ ಮಹಾ ಬಾಹುವಾದ ಜಲಂಧರನು ಮೇಘದಂತೆ ಓಡಿಸಿ ಕೊಂಡು ಹೋಗುತ್ತಿದ್ದನು.

೧೦. ಆಗ ಪುರುಷೋತ್ತಮನಾದ ಹರಿಯು ಕೋಪದಿಂದ ನಂದಕವೆಂಬ ಕತ್ತಿಯನ್ನು ಮೇಲಕ್ಕೆತ್ತಿಕೊಂಡು ಗರುಡನನ್ನು ವೇಗದಿಂದ ಸಂಚರಿಸುವಂತೆ ಅಪ್ಪಣೆಮಾಡಿ ಆ ದೈತ್ಯನ ಸೈನ್ಯವನ್ನೆಲ್ಲಾ ಸದೆಬಡಿದನು

೧೧. ಆಗ ಜನಾರ್ದನನು ಗರುಡನಿಂದ ಕೂಡಿಕೊಂಡು ರಥ, ಕುದುರೆ, ಆನೆ, ಕಾಲಾಳು ಇವೆಲ್ಲವನ್ನೂ ಕ್ಷಣಕಾಲದಲ್ಲಿ ಕೆಡಹಿದನು. ಯುದ್ಧದಲ್ಲಿ ಭಯ ವಾಗುವಂತೆ ಎಲ್ಲರನ್ನೂ ಕೊಲ್ಲುತ್ತಾ ಬಂದನು.

ಕೇಶಾಸ್ಥಿಮಜ್ಜಾರುಧಿರೌಘವಾಹಿನೀಂ
ಪಿಶಾಚವೇತಾಳವಿಹಂಗಸೇವಿತಾಂ ।
ಕರೋರುಜಂಘಾಯುಧಶಸ್ತ್ರಪೂರಿತಾಂ
ಸುದುಸ್ತರಾಂ ವ್ಯಾಘ್ರಗಜೇಂದ್ರಸೇವಿತಾಂ ॥
ರಕ್ತಾಂತ್ರಹಾರಾಂಗದಭೂಷಿತಾನಾಂ
ವಿಘೂರ್ಣನೇತ್ರೋತ್ಸವಕಾಂತಿವಾಸಸಾಂ ॥ ೧೨ ॥

ವಿಷ್ಣುನಾ ನಿಹತಂ ಸೈನ್ಯಂ ದೃಷ್ಟ್ವಾ ದಾನವಪುಂಗವಃ ।
ಜಾಲಂಧರಾಜ್ಞಯಾ ಸರ್ವೇ ರುರುಧುಃ ಪರಿತೋ ಹರಿಂ ॥
ದೈತ್ಯಾಸ್ತೇ ತತ್ರ ಬಾಣೌಘಾನ್ ವರ್ಷಮಾಣಾ ಯಥಾಂಬುದಾಃ ॥ ೧೩ ॥

ಅಸ್ಯಸ್ಮಾಲ್ಲಬ್ಧೋಷ್ಮಾ ನೀಚಃ ಪ್ರಾಯೇಣ ದುಸ್ಸಹೋ ಭವತಿ ।
ರವಿರಪಿ ನ ತಪತಿ ತಾದೃಗ್ಯಾದೃಶಂ ತಪತಿ ವಾಲುಕಾ ನಿಕರಃ ॥ ೧೪ ॥

---

೧೨. ಕೂದಲು ಮೂಳೆ ಕೊಬ್ಬು ರಕ್ತಗಳನ್ನು ಸೇರಿಸಿಕೊಂಡು ಹರಿಯುವ, ಪಿಶಾಚಿ ಬೇತಾಳಗಳೆಂಬ ಹಕ್ಕಿಗಳುಳ್ಳ, ಕೈ ಕಾಲು ತೊಡೆ ಆಯುಧಗಳು ಶಸ್ತ್ರಗಳು ಇವುಗಳು ತುಂಬಿಕೊಂಡಿರುವ, ದಾಟಲಶಕ್ಯವಾದ ಹುಲಿ ಆನೆಗಳು ಇವನ್ನುಳ್ಳ, ರಕ್ತ ನರಗಳೆಂಬ ಹಾರ ಭುಜಕೀರ್ತಿಗಳಿಂದ ಕೂಡಿದ, ನೋಡಿದೊಡನೆಯೇ ಕಣ್ಣು ತಿರುಗುವುದರಿಂದ ತಿರುಗುತ್ತಿರುವ ಕಣ್ಣಿನ ಕಾಂತಿಯೆಂಬ ಬಟ್ಟೆಯುಳ್ಳ, ಹೊಳೆಯೆಂಬ ಭಯಂಕರವಾದ ಕೆಲಸವನು ಮಾಡಿದನು.

೧೩. ವಿಷ್ಣುವು ಈರೀತಿ ಸೈನ್ಯವನ್ನು ನಾಶಮಾಡುತ್ತಿರುವುದನ್ನು ಜಲಂಧರನು ನೋಡಿ ದೈತ್ಯರಿಗೆ ಅಪ್ಪಣೆಮಾಡಲು, ಅವರೆಲ್ಲರೂ ವಿಷ್ಣುವನ್ನು ಸುತ್ತಲೂ ಸುತ್ತಿಕೊಂಡು ಬಾಣಗಳನ್ನು ಬಿಡುತ್ತಿರಲು, ಮಳೆ ಸುರಿಸುತ್ತಿರುವ ಮೇಘದಂತೆ ಕಂಡು ಬಂದಿತು.

೧೪. ಮತ್ತೊಬ್ಬನಿಂದ ಕಾವನ್ನು (ಸಂಪತ್ತನ್ನು) ಹೊಂದಿದ ನೀಚನು ಸಾಧಾರಣವಾಗಿ ಲೋಕವು ಸಹಿಸದಂತೆ ಮೆರೆಯುವನು. ಸೂರ್ಯನ ಶಾಖವನ್ನು ತೆಗೆದುಕೊಂಡು ಸುಡುವ ಮರಳು ಎಷ್ಟರಮಟ್ಟಿಗೆ ಸುಡುವುದೋ ಅಷ್ಟರಮಟ್ಟಿಗೆ ಸೂರ್ಯನು ಕೂಡ ಸುಡುವುದಿಲ್ಲ.

ಯಥಾ ದ್ವಿರೇಫೈಃ ಕಮಲಂ ಪರ್ವತೋ ಜಲದೈರಿವ ।
ಚೂತೋ ಯಥಾ ಪಕ್ಷಿಗಣೈರ್ಗಗನಂ ಧೂಮಸಂಚಯೈಃ ॥ ೧೫ ॥

ನ ದೃಶ್ಯೋಽಭೂತ್ತದಾ ವಿಷ್ಣುಃ ನ ತಾರ್ಕ್ಷ್ಯೋ್ ರಣಸಂಕಟೇ ।
ಸರ್ವೇ ತೇ ರಥಮಾರೂಢಾಃ ಸರ್ವಶಸ್ತ್ರೈರ್ಮಹಾಸುರಾಃ ॥ ೧೬ ॥

ವೈಕುಂಠಾಧಿಪತಿಂ ಜಘ್ನುಃ ಗರ್ಜಂತೋ ಭೀಮನಿಸ್ಸ್ವನಾಃ ।
ತಾನ್ ಸರ್ವಾನ್ ಭೀಮರೂಪೇಣ ದೈತ್ಯಾರಿಃ ಕುಪಿತಸ್ತದಾ ॥ ೧೭ ॥

ರಣೇ ನಿಪಾತಯಾಮಾಸ ವಾಯುಃ ಪರ್ಣಚಯಂ ಯಥಾ ।
ಶೈಲರೋಮಾ ತತೋ ವಿಷ್ಣುಂ ದೈತ್ಯಃ ಕೋಪಾದಧಾವತ ॥ ೧೮ ॥

ಹರೇರಪಿ ಶರಾಸ್ತಸ್ಯ ಶರೀರೇ ಶೀರ್ಣತಾಂ ಗತಾಃ ।
ಶೈಲರೋಮಾ ಚ ದೈತ್ಯಾರೇಃ ಶರೀರಂ ಚಾಹನಚ್ಛರೈಃ ॥ ೧೯ ॥

ತತಃ ಖಡ್ಗಂ ವಿನಿರ್ಧೂಯ ಶಿರಸ್ತಸ್ಯ ಜಹಾರ ಹ ।
ಛಿನ್ನೇ ಶಿರಸಿ ದೈತ್ಯಸ್ಯ ಕಬಂಧೋ ವಿಕ್ರಮನ್ರಣೇ ॥ ೨೦ ॥

---

೧೫–೨೨. ದುಂಬಿಗಳು ಕಮಲವನ್ನೂ, ಮೇಘಗಳು ಪರ್ವತವನ್ನೂ, ಪಕ್ಷಿಗಳು ಮಾವಿನಮರವನ್ನೂ, ಹೊಗೆಯು ಅಂತರಿಕ್ಷವನ್ನೂ ಮುಚ್ಚಿಕೊಳ್ಳುವಂತೆ ವಿಷ್ಣುವೂ, ಗರುಡನೂ ಆ ರಣಭೂಮಿಯಲ್ಲಿ ಕಾಣದಂತೆ ದೈತ್ಯರಿಂದ ಮುಚ್ಚಲ್ಪಟ್ಟರು. ಆ ಅಸುರರೆಲ್ಲರೂ ರಥದಲ್ಲಿ ಕುಳಿತು ಶಸ್ತ್ರಗಳನ್ನು ಧರಿಸಿದ್ದರು. ಮತ್ತು ಸಿಂಹನಾದಮಾಡುತ್ತ ಭಯಂಕರ ಧ್ವನಿಯುಳ್ಳವರಾಗಿ ವೈಕುಂಠಕ್ಕೆ ಒಡೆಯನಾದ ವಿಷ್ಣುವನ್ನು ಬಾಣ ಮುಂತಾದವುಗಳಿಂದ ಹೊಡೆದರು. ವಿಷ್ಣುವು ಭಯಂಕರವಾದ ರೂಪವನ್ನು ಹೊಂದಿ ಕೋಪದಿಂದ ಅವರೆಲ್ಲರನ್ನೂ ಗಾಳಿಯು ಎಲೆಗಳನ್ನು ಕೆಡಹುವಂತೆ ಕೆಡಹಿದನು. ಆಗ ಶೈಲರೋಮನೆಂಬ ದೈತ್ಯನು ವಿಷ್ಣುವಿನ ಮೇಲೆ ಕೋಪದಿಂದ ಬೀಳಲು ಹರಿಯು ಬಹುಬಾಣಗಳನ್ನು ಬಿಟ್ಟನು. ಆ ಬಾಣಗಳು ಆ ರಾಕ್ಷಸನ ಶರೀರದಲ್ಲಿಯೇ ಲಯವನ್ನು ಹೊಂದಿದುವು. ಶೈಲರೋಮನು ಪರಾಕ್ರಮವನ್ನು ತೋರಿಸುತ್ತ ವಿಷ್ಣುವಿನ ಶರೀರವನ್ನು ಬಾಣಗಳಿಂದ ಹೊಡೆದನು. ಆಗ ಹರಿಯು ಕತ್ತಿಯನ್ನು ಝಳುಪಿಸುತ್ತ ಆ ಶೈಲರೋಮನ ತಲೆಯನ್ನು ಕತ್ತರಿಸಿದನು. ದೈತ್ಯನನ್ನು ಕತ್ತರಿಸಲು ಅವನ ಮುಂಡವು ರಣದಲ್ಲಿ

ಶೈಲರೋಮಾ ಭುಜಾಭ್ಯಾಂ ಚ ತಾರ್ಕ್ಷ್ಯಂ ಜಗ್ರಾಹ ಪಕ್ಷಯೋಃ ।
ಶಿರಶ್ಚೋತ್ಪತ್ಯ ತರಸಾ ವಿಷ್ಣೂವಂ ಸ್ಕಂಧಯೋರ್ದಧತ್ ॥ ೨೧ ॥

ತಸ್ಮಾತ್ತತ್ರಾಸ ಯುದ್ಧೇಸ ಹೃಷೀಕೇಶೋಽಪಿ ವಿಸ್ಮಿತಃ ।
ಶಿರಸ್ಸಂಲಗ್ನಮಾಲೋಕ್ಯ ಗರುಡೋ ನ್ಯಪತದ್ಭುವಿ ॥ ೨೨ ॥

ಪುನಶ್ಚೋತ್ಪತ್ಯ ವೇಗೇನ ಶಿರಸ್ತ್ಯಾನಂ ಸಮಾಶ್ರಯತ್ ।
ಶೈಲರೋಮಾ ತತೋ ವಿಷ್ಣುಂ ಜಹಾರ ಗರುಡಾದ್ಬಲೀ ॥ ೨೩ ॥

ಹರಿರ್ಜಘ್ನೇ ತಲೇನಾಶು ಗತಾಯುಶ್ಚಾಪತದ್ಭುವಿ ।
ತತೋ ಜಾಲಂಧರಸ್ಸೂತಂ ಖಡ್ಗರೋಮಾಣಮಬ್ರವೀತ್ ॥ ೨೪ ॥

॥ ಜಾಲಂಧರ ಉವಾಚ ॥

ಸಂಪ್ರೇಷಯ ರಥಂ ತತ್ರ ಯತ್ರ ದೇವೋ ಜನಾರ್ದನಃ ॥ ೨೫ ॥

---

ಪರಾಕ್ರಮವನ್ನು ತೋರುತ್ತ ಗರುಡನ ಎರಡು ರೆಕ್ಕೆಗಳನ್ನೂ ತನ್ನ ಭುಜಗಳಿಂದ ಹಿಡಿದುಕೊಂಡಿತು. ತಲೆಯು ಮೇಲಕ್ಕೆ ನೆಗೆದು ಗರುಡನ ಹೆಗಲಮೇಲೆ ಕಚ್ಚಿ ಕುಳಿತುಕೊಂಡಿತು. ಇದನ್ನು ನೋಡಿ ವಿಷ್ಣುವೂ ಕೂಡ ಯುದ್ಧದಲ್ಲಿ ಹೆದರಿ ಆಶ್ಚರ್ಯಪಟ್ಟನು. ಈ ತಲೆಯು ಗರುಡನ ಮೇಲೆ ಕುಳಿತಿರಲು ಗರುಡನು ತಡೆಯ ಲಾರದೆ ಭೂಮಿಯಲ್ಲಿ ಬಿದ್ದುಬಿಟ್ಟನು.

೨೩. ಮತ್ತೆ ಆ ತಲೆಯು ವೇಗದಿಂದ ನೆಗೆದು ಗರುಡನ ತಲೆಯನ್ನೇ ಬಾಯಿಂದ ಹಿಡಿಯಿತು. ಈ ರೀತಿ ಶೈಲರೋಮನು ಗರುಡನನ್ನು ವಿಷ್ಣುವಿನಿಂದ ಬೇರೆಮಾಡಿದನು.

೨೪. ಆಗ ಹರಿಯು ಮುಷ್ಟಿಯಿಂದ ಆ ರುಂಡಮುಂಡಗಳಿಗೆ ಹೊಡೆ ಯಲು ಅವು ನಾಶವಾದವು. ಆಗ ಜಲಂಧರನು ಖಡ್ಗರೋಮನೆಂಬ ಸೂತನನ್ನು ಕುರಿತು ಇಂತೆಂದನು.

೨೫. ಜಲಂಧರನು ಹೇಳಿದನು– ಎಲೈ ಸೂತನೇ! ಜನಾರ್ದನನಿರು ವಲ್ಲಿಗೆ ರಥವನ್ನು ಬಿಡು.

|| ನಾರದ ಉವಾಚ ||

ಜಾಲಂಧರಸ್ಯ ವಚಸಾತ್ ಖಡ್ಗರೋಮಾನಯದ್ರಥಂ ।
ದೃಷ್ಟ್ವಾ ತಂ ಪುರತೋ ವಿಷ್ಣುಮುವಾಚಾರ್ಣವನಂದನಃ || ೨೬ ||

|| ಜಾಲಂಧರ ಉವಾಚ ||

ನಿಶ್ಶಂಕಂ ಜಹಿ ಮಾಂ ವಿಷ್ಣೋ ನಾಹಂ ತಾಂ ಹನ್ಮಿ ಮಾಧವ || ೨೭ ||

|| ನಾರದ ಉವಾಚ ||

ತಸ್ಯ ತದ್ವಚನಂ ಶ್ರುತ್ವಾ ಕ್ರೋಧಸಂರಕ್ತಲೋಚನಃ ।
ನಾರಾಯಣಃ ಪ್ರಾಣಹರೈಃ ಶರೈರೇನಮಪೂರಯತ್ || ೨೮ ||

ವಿಷ್ಣುನಾ ಚ ವಿಭಿನ್ನಾಂಗೋಽರ್ಣವಸೂನುಃ ಪ್ರತಾಪವಾನ್ ।
ಹರಿಂ ಸಂಪೂರಯಾಮಾಸ ಮಾರ್ಗಣೌಘೈರ್ನಿರಂತರಂ || ೨೯ ||

ಅಸ್ಯ ಬಾಣಶತೈರ್ಭಿನ್ನೋ ಗರುಡೋ ಮೂರ್ಛಿತೋಽಪತತ್ ।
ಗರುಡಂ ಪತಿತಂ ದೃಷ್ಟ್ವಾ ಸಿಂಧುಸೂನೋಶ್ಶರೈರ್ಭುವಿ || ೩೦ ||

---

೨೬. ನಾರದನು ಹೇಳಿದನು– ಜಲಂಧರನ ಮಾತಿನಂತೆ ಖಡ್ಗರೋಮನೆಂಬ ಸಾರಥಿಯು ರಥವನ್ನು ವಿಷ್ಣುವಿನ ಬಳಿಗೆ ನಡೆಸಿದನು. ಜಲಂಧರನು ವಿಷ್ಣುವಿನ ಎದುರಿಗೆ ಹೋಗಿ ಅವನನ್ನು ಕುರಿತು ಇಂತೆಂದನು.

೨೭. ಜಲಂಧರನು ಹೇಳಿದನು– ಎಲೈ ವಿಷ್ಣುವೇ ! ನೀನು ನನ್ನನ್ನು ಕೊಂದು ಹಾಕು. ನೀನು ನನ್ನ ಸಹೋದರಿಯ ಗಂಡನಾದುದರಿಂದ ನಾನು ನಿನ್ನನ್ನು ಕೊಲ್ಲುವುದಿಲ್ಲ.

೨೮. ನಾರದನು ಹೇಳಿದನು– ಜಲಂಧರನ ಆ ಮಾತನ್ನು ಕೇಳಿ ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ ನಾರಾಯಣನು ಪ್ರಾಣಗಳನ್ನು ನಾಶ ಮಾಡುವ ಬಾಣಗಳಿಂದ ಅವನನ್ನು ಮುಚ್ಚಿದನು.

೨೯. ಜಲಂಧರನು ವಿಷ್ಣುವಿನಿಂದ ಏಟುತಿಂದವನಾಗಿ ಬಾಣಗಳಿಂದ ಸ್ವಲ್ಪವೂ ಬಿಡದಂತೆ ಆ ಹರಿಯನ್ನು ಮುಚ್ಚಿದನು.

೩೦–೩೧. ಈ ಜಲಂಧರನ ಬಾಣಗಳಿಂದ ನೊಂದ ಗರುಡನು ಮೂರ್ಛಿತನಾಗಿ ಕೆಳಗೆ ಬಿದ್ದನು. ಗರುಡನು ಜಲಂಧರನ ಬಾಣಗಳಿಂದ ಕೆಳಗೆ ಬೀಳಲು

ರಥಂ ಸಂಸ್ಮಾರಯಾಮಾಸ ವೈಕುಂಠಸ್ಥಂ ಜನಾರ್ದನಃ ।
ಸ ರಥಸ್ತಸ್ಯ ಸಂಪ್ರಾಪ್ತಃ ಸೂತಹೀನೋ ಹಯೈರ್ವೃತಃ ॥ ೩೧ ॥

ಅಶ್ವೈರ್ಯುತಂ ರಥಂ ದೃಷ್ಟ್ವಾ ವಿಸ್ಮಿತೋ ಭಗವಾನ್ರಣೇ ।
ಸ ಬೋಧಯಿತ್ವಾ ಗರುಡಂ ಸಾರಥ್ಯೇ ಸಮಯೂಯುಜತ್ ॥ ೩೨ ॥

ಸ ಧೃತ್ವಾ ಮುಕುಟಂ ಮೂರ್ಧ್ನಿ ಕೌಸ್ತುಭಂ ಹೃದಯೇ ಮಣಿಂ ।
ಪುರುಷಾರ್ಥಾನ್ಹಯಾನ್ ಕೃತ್ವಾ ಯಯೌ ಜಾಲಂಧರಂ ಹರಿಃ ॥ ೩೩ ॥

ಮೇದಿನೀಂ ರಥಚಕ್ರೇಣ ದಾರಯಂಶ್ಚ ಸುರೈಸ್ಸಹ ।
ಜಘಾನ ತರಸಾ ಬಾಣೈಃ ದಾನವಾನಾಂ ಚ ವಾಹಿನೀಂ ॥ ೩೪ ॥

ದೇವರಾಜೇನ ಸಂದಿಷ್ಟೋ ವೀತಿಹೋತ್ರೋ ರಣಾಂಗಣೇ ।
ದದಾಹ ದಾನವಾನೀಕಂ ಸಮೀರಣಸಮನ್ವಿತಃ ॥ ೩೫ ॥

---

ವಿಷ್ಣುವು ವೈಕುಂಠದಲ್ಲಿರುವ ತನ್ನ ರಥವನ್ನು ಸ್ಮರಿಸಿದನು. ಆಗ ಆ ರಥವು ಕುದುರೆಗಳಿಂದ ಎಳೆಯಲ್ಪಟ್ಟದ್ದಾಗಿ ಅವನ ಬಳಿಗೆ ಬಂದಿತು. ಆದರೆ ಸಾರಥಿಯು ಮಾತ್ರ ಇರಲಿಲ್ಲ.

೩೨. ರಥದಲ್ಲಿ ಕುದುರೆಗಳಿದ್ದೂ ಸಾರಥಿಯು ಇಲ್ಲದುದನ್ನು ನೋಡಿ ಜನಾರ್ದನನು ಆಶ್ಚರ್ಯಪಟ್ಟು ಗರುಡನನ್ನು ಸಮಾಧಾನಪಡಿಸಿ ಸಾರಥಿಯನ್ನಾಗಿ ಮಾಡಿದನು.

೩೩. ಆ ವಿಷ್ಣುವು ತಲೆಗೆ ಕಿರೀಟವನ್ನಿಟ್ಟುಕೊಂಡು ಎದೆಗೆ ಕೌಸ್ತುಭ ಮಣಿಯನ್ನು ಅಳವಡಿಸಿಕೊಂಡು ಧರ್ಮಾರ್ಥಕಾಮಮೋಕ್ಷಗಳೆಂಬ ಪುರುಷಾರ್ಥ ಗಳನ್ನು ಕುದುರೆಗಳನ್ನಾಗಿ ಮಾಡಿಕೊಂಡು ಗರಡುನನ್ನು ಸಾರಥಿಯನ್ನಾಗಿ ಮಾಡಿ ಕೊಂಡು ಜಲಂಧರನನ್ನು ಎದುರಿಸಿದನು.

೩೪. ದೇವತೆಗಳನ್ನು ಜೊತೆಯಲ್ಲಿ ಕರೆದುಕೊಂಡು ರಥದ ಚಕ್ರದಿಂದ ಭೂಮಿಯನ್ನು ಸೀಳುತ್ತಾ ಬಾಣಗಳನ್ನು ವೇಗದಿಂದ ಬಿಡುತ್ತಾ ದೈತ್ಯರ ಆ ಸೇನೆಯನ್ನು ಬಾಣಗಳಿಂದ ಹೊಡೆದನು.

೩೫. ಇಂದ್ರನು ಅಗ್ನಿಯನ್ನು ಕುರಿತು ಸುಡುವಂತೆ ಅಪ್ಪಣೆಮಾಡಲು ಆತನು ವಾಯುವನ್ನೂ ಜೊತೆಗೆ ಕರೆದುಕೊಂಡು ದೈತ್ಯರ ಸೇನೆಯನ್ನು ಸುಟ್ಟನು.

ತದಾ ಹತಂ ಭಗವತಾ ದೈತ್ಯಸೈನ್ಯಂ ಸುರೈಃ ಸಹ ।
ಜಾಲಂಧರಃ ಸ್ವಲ್ಪಶೇಷಂ ದಧ್ಯೌ ದೃಷ್ಟ್ವಾ ಬಲಂ ಸ್ವಕಂ || ೩೬ ||

ಅಥಾಹ ಭಾರ್ಗವಂ ರಾಜಾ ಮತ್ಸೈನ್ಯಂ ನಿಹತಂ ಸುರೈಃ ।
ತ್ವಯಿ ತಿಷ್ಠತಿ ಮಂತ್ರಜ್ಞೇ ವಿಖ್ಯಾತೋ ವಿದ್ಯಯಾ ಭವಾನ್ || ೩೭ ||

ಕಿಂ ತಯಾ ವಿದ್ಯಯಾ ಬ್ರಹ್ಮನ್ ಬ್ರಾಹ್ಮೇಣಾಥ ಬಲೇನ ಚ ।
ಯಾ ನ ರಕ್ಷತಿ ರೋಗಾರ್ತಾನ್ ಯದ್ಬಲಂ ಶರಣಾಗತಾನ್ ।
ಜಾಲಂಧರವಚಶ್ಶ್ರುತ್ವಾ ಭಾರ್ಗವಸ್ತಮುಭಾಷತ || ೩೮ ||

|| ಶುಕ್ರ ಉವಾಚ ||

ಪಶ್ಯ ರಾಜನ್ಮಮ ಬಲಂ ಬ್ರಾಹ್ಮಣಸ್ಯ ರಣಾಂಗಣೇ || ೩೯ ||

---

೩೬. ಆಗ ದೇವತೆಗಳೊಡನೆ ವಿಷ್ಣುವು ದೈತ್ಯರ ಸೈನ್ಯವನ್ನು ಕೊಲ್ಲಲು ಜಲಂಧರನು ತನ್ನ ಸೈನ್ಯವು ನಷ್ಟವಾಗಿ ಸ್ವಲ್ಪವೇ ಉಳಿದಿರುವುದನ್ನು ನೋಡಿ ಯೋಚಿಸತೊಡಗಿದನು.

೩೭. ಆಗ ಜಲಂಧರನು ಶುಕ್ರಾಚಾರ್ಯನನ್ನು ಕುರಿತು ಎಲೈ ಶುಕ್ರಾಚಾರ್ಯನೇ ! ವಿದ್ಯೆಯಲ್ಲಿ ಪ್ರಖ್ಯಾತನಾದ ತಿಳಿವಳಿಕೆಯುಳ್ಳ ನೀನು ನಮ್ಮ ಕಡೆ ಇದ್ದರೂ ನನ್ನ ಸೈನ್ಯವೆಲ್ಲವೂ ನಾಶವಾಯಿತಲ್ಲ !

೩೮. ಎಲೈ ಬ್ರಾಹ್ಮಣನೇ ! ಯಾವ ವಿದ್ಯೆಯು ರೋಗಿಗಳನ್ನೂ, ಯಾವ ಬಲವು ಶರಣಾಗತರನ್ನೂ ರಕ್ಷಿಸುವುದಿಲ್ಲವೋ ಅಂತಹ ವಿದ್ಯೆಯಿಂದಾಗಲಿ ಅಂತಹ ಬ್ರಾಹ್ಮಣ್ಯದಿಂದಾಗಲೀ ಪ್ರಯೋಜನವೇನು ? ಎಂದು ಜಲಂಧರನು ಹೇಳಲು ಆ ಮಾತನ್ನು ಕೇಳಿ ಶುಕ್ರನು ಇಂತೆಂದನು.

೩೯. ಶುಕ್ರನು ಹೇಳಿದನು– ಎಲೈ ರಾಜನೇ ! ಈ ಯುದ್ಧರಂಗದಲ್ಲಿ ಬ್ರಾಹ್ಮಣನಾದ ನನ್ನ ಶಕ್ತಿಯನ್ನು ನೋಡು, ತೋರಿಸುತ್ತೇನೆ.

॥ ನಾರದ ಉವಾಚ ॥

ಇತ್ಯುಕ್ತ್ವಾ ವಾರಿಣಾ ಸ್ಪೃಷ್ಟ್ವಾ ಹುಂಕಾರೇಣ ಪ್ರಬೋಧಿತಾಃ ।
ಉತ್ಥಾಪಿತಾಸ್ತೇ ಕವಿನಾ ಶರೌಘೈಃ ಪ್ರಾಣಹಾರಕೈಃ ॥ ೪೦ ॥

ದೇವಾ ಹತಾ ರಣೇ ಶೇಷುಃ ಸಮಂತಾತ್ಸಿಂಧುಸೂನುನಾ ।
ಬಾಣೈರ್ಜರ್ಜರದೇಹಾಸ್ತೇ ಧೃತಪ್ರಾಣಾ ನರಾಧಿಪ ॥ ೪೧ ॥

ನ ಮೃತಾಸ್ತ್ವಮರತ್ವಾಚ್ಚ ಬಾಣೈರ್ಭಿನ್ನಾಶ್ಚ ಸತ್ತಮಾಃ ।
ತತೋ ನಾರಾಯಣೋ ದೇವೋ ಬೃಹಸ್ಪತಿಮಭಾಷತ ॥ ೪೨ ॥

ಧಿಗ್ಬಲಂ ದೈವತಗುರೋ ಯೋ ನ ಜೀವಯಸೇ ಸುರಾನ್ ।
ಧಿಷಣಸ್ತು ಜಗನ್ನಾಥಮುವಾಚ ತ್ವರಿತಂ ತದಾ ॥ ೪೩ ॥

॥ ಬೃಹಸ್ಪತಿರುವಾಚ ॥

ಓಷಧೀಭಿರಹಂ ಸ್ವಾಮಿನ್ ಜೀವಯಿಷ್ಯಾಮಿ ನಿರ್ಜರಾನ್ ॥ ೪೪ ॥

---

೪೦-೪೨. ನಾರದನು ಹೇಳಿದನು— ಶುಕ್ರನು ಹೀಗೆಂದು ಹೇಳಿ ನೀರನ್ನು ತೆಗೆದುಕೊಂಡು ಆಚಮನ ಮಾಡಿ ಹುಂಕಾರದಿಂದ ಆ ಸೈನಿಕರನ್ನು ಎಬ್ಬಿಸಿದನು. ಅನಂತರ ಜಲಂಧರನೂ ಅವನ ಕಡೆಯವರೂ ಬಾಣಗಳಿಂದ ಹೊಡೆಯಲು ಆ ದೇವತೆಗಳ ಶರೀರವು ಚೂರುಚೂರಾಯಿತು. ಪ್ರಾಣಮಾತ್ರ ನಿಂತಿದ್ದಿತು. ಅವರು ಅಮೃತಪಾನಮಾಡಿ ಅಮರರಾದುದರಿಂದ ಆ ಬಾಣಗಳಿಂದ ಸಾಯದೆ ದೇಹವು ಮಾತ್ರ ಚೂರುಚೂರಾಗಿ ಕತ್ತರಿಸಲ್ಪಟ್ಟಿತು. ಆಗ ನಾರಾಯಣನು ಬೃಹಸ್ಪತಿಯನ್ನು ಕುರಿತು ಇಂತೆಂದನು.

೪೩. ನಾರದನು ಹೇಳಿದನು— ಎಲೈ ದೇವತೆಗಳಿಗೆ ಗುರುವಾದ ಬೃಹಸ್ಪತಿಯೇ ! ನಿನ್ನ ಬಲಕ್ಕೆ ಧಿಕ್ಕಾರವಿರಲಿ. ನೀನು ನೊಂದ ದೇವತೆಗಳನ್ನು ಉತ್ತಮಗೊಳಿಸಲಾರೆಯಲ್ಲ ? ಎನ್ನಲು ಆಗ ಗುರುವು ವಿಷ್ಣುವನ್ನು ಕುರಿತು ಇಂತೆಂದನು.

೪೪. ಬೃಹಸ್ಪತಿಯು ಹೇಳಿದನು— ಎಲೈ ಸ್ವಾಮಿಯೇ ! ನಾನು ಔಷಧಿಗಳಿಂದ ಅವರೆಲ್ಲರನ್ನೂ ಬದುಕಿಸುತ್ತೇನೆ. ಮತ್ತು ನೋವನ್ನೂ ಕಳೆಯುತ್ತೇನೆ.

|| ನಾರದ ಉವಾಚ ||

ಇತ್ಯುಕ್ತ್ವಾ ಧಿಷಣಸ್ಸೋಽಪಿ ಯಯೌ ಕ್ಷೀರಾರ್ಣವಸ್ಥಿತಂ |
ದ್ರೋಣಾದ್ರಿಂ ತಂ ತದಾ ಗತ್ವಾ ಸುಖಂ ಗೃಹ್ಯೌಷಧೀಚಯಂ ||
ಗುರುಸ್ತಾಸಾಂ ಚ ಯೋಗೇನ ಜೀವಯಾಮಾಸ ನಿರ್ಜರಾನ್ || ೪೫ ||

ಉತ್ಥಿತಾಸ್ತೇ ತತೋ ದೇವಾ ಜಘ್ನುರ್ದಾನವವಾಹಿನೀಂ |
ದೇವಾನ್ ಸಮುತ್ಥಿತಾನ್ ದೃಷ್ಟ್ವಾ ಬಭಾಷೇ ಸಿಂಧುಜಃ ಕವಿಂ || ೪೬ ||

|| ಜಾಲಂಧರ ಉವಾಚ ||

ವಿನಾ ತ್ವದ್ವಿದ್ಯಯಾ ಕಾವ್ಯ ಕಥಮೇತೇ ಸಮುತ್ಥಿತಾಃ || ೪೭ ||

|| ನಾರದ ಉವಾಚ ||

ಇತಿ ದೈತ್ಯೋಕ್ತಮಾಕರ್ಣ್ಯ ಶುಕ್ರಃ ಪ್ರಾಹಾರ್ಣವಾತ್ಮಜಂ || ೪೮ ||

---

೪೫. ನಾರದನು ಹೇಳಿದನು– ಗುರುವು ಹೀಗೆಂದು ಹೇಳಿ ಕ್ಷೀರ ಸಮುದ್ರಕ್ಕೆ ಹೋದನು. ಅಲ್ಲಿರುವ ದ್ರೋಣಪರ್ವತಕ್ಕೂ ಹೋಗಿ ಅಲ್ಲಿ ಒಳ್ಳೆಯ ಔಷಧಿಗಳನ್ನು ತಂದು ಅವುಗಳ ಪ್ರಯೋಗದಿಂದ ಆ ದೇವತೆಗಳನ್ನು ಬದುಕಿಸಿದನು.

೪೬. ಅನಂತರ ದೇವತೆಗಳು ಸುಖವಾಗಿ ಮೇಲಕ್ಕೆದ್ದು ದಾನವರ ಸೈನ್ಯ ಗಳೆಲ್ಲವನ್ನೂ ಕೊಂದರು. ಈ ರೀತಿ ಎದ್ದ ದೇವತೆಗಳನ್ನು ನೋಡಿ ಜಲಂಧರನು ಶುಕ್ರನನ್ನು ಕುರಿತು ಮತ್ತೆ ಇಂತೆಂದನು.

೪೭. ಎಲೈ ಶುಕ್ರಾಚಾರ್ಯನೇ ! ನಿನ್ನ ವಿದ್ಯೆಯು ಅವರಿಗೆ ಪ್ರಯೋಗ ವಾಗದೇನೆ ಆ ದೇವತೆಗಳು ಹೇಗೆ ಎದ್ದರು ?

೪೮. ನಾರದನು ಹೇಳಿದನು– ಜಲಂಧರನು ಇಂತೆನ್ನಲು ಅದನ್ನು ಕೇಳಿ ಶುಕ್ರಾಚಾರ್ಯನು ಅವನಿಗೆ ಇಂತೆಂದನು.

|| ಶುಕ್ರ ಉವಾಚ ||

ಕ್ಷೀರಸಾಗರಮಧ್ಯಸ್ಥೋ ದ್ರೋಣೋ ನಾಮ ಮಹಾಗಿರಿಃ |
ಓಷಧ್ಯಸ್ತತ್ರ ತಿಷ್ಠಂತಿ ಜೀವಯಂತಿ ಚ ತಾನ್ ಮೃತಾನ್ || ೪೯ ||

ತತ್ರ ಗತ್ವಾ ಸುರಾಚಾರ್ಯೋ ಗೃಹೀತ್ವೌಷಧಿಸಂಚಯಂ |
ರಣೇ ವಿನಿಹತಾನ್ ದೇವಾನುತ್ಥಾಪಯತಿ ಮಂತ್ರತಃ || ೫೦ ||

|| ನಾರದ ಉವಾಚ ||

ಭಾರ್ಗವೋಕ್ತಮಥಾಕರ್ಣ್ಯ ಸೈನ್ಯಭಾರಂ ಮಹಾಬಲಃ |
ಶುಂಭೇ ನಿಕ್ಷಿಪ್ಯ ತರಸಾ ಯಯೌ ಜಾಲಂಧರೋಽರ್ಣವಂ || ೫೧ ||

ಅಥ ಪ್ರವಿಷ್ಟಃ ಕ್ಷೀರಾಬ್ಧೌ ವೇಶ್ಮ ದಿವ್ಯಂ ಮಹಾಪ್ರಭಂ |
ಪ್ರವಿಶ್ಯ ತತ್ರ ಕ್ಷೀರಾಬ್ಧೇಃ ಕ್ರೀಡಾಸ್ಥಾನಂ ದದರ್ಶ ಸಃ || ೫೨ ||

---

೪೯. ಶುಕ್ರನು ಹೇಳಿದನು–ಎಲೈ ದೈತ್ಯೇಶ್ವರನೇ! ಕ್ಷೀರಸಾಗರದ ಮಧ್ಯದಲ್ಲಿ ದ್ರೋಣಪರ್ವತವೆಂಬ ಒಂದು ಪರ್ವತವಿರುವುದು. ಔಷಧಿಗಳು ಅಲ್ಲಿವೆ. ಅವನ್ನು ತಂದು ಅವರನ್ನು ಬದುಕಿಸುತ್ತಾನೆ.

೫೦. ಆ ಬೃಹಸ್ಪತಿಯು ಅಲ್ಲಿಗೆ ಹೋಗಿ ಆ ಔಷಧಿಗಳನ್ನು ತೆಗೆದುಕೊಂಡು ಯುದ್ಧದಲ್ಲಿ ನಾಶಮಾಡಿದವರನ್ನು ಮಂತ್ರದ ಸಹಾಯದಿಂದಲೂ, ಆ ಔಷಧಿಗಳ ಸಹಾಯದಿಂದಲೂ ಮೇಲಕ್ಕೆ ಎಬ್ಬಿಸುತ್ತಾನೆ.

೫೧. ನಾರದನು ಹೇಳಿದದು–ಹೀಗೆ ಶುಕ್ರನು ಹೇಳಿದ್ದನ್ನು ಕೇಳಿ ಸೈನ್ಯದ ಆಧಿಪತ್ಯವನ್ನು ಶುಂಭನೆಂಬ ವೀರನನ್ನು ಕರೆದು ಅವನಿಗೆ ವಹಿಸಿ, ತಾನು ಶೀಘ್ರವಾಗಿ ಸಮುದ್ರಕ್ಕೆ ಹೋದನು.

೫೨. ಅಲ್ಲಿಂದ ಹೊರಟು ಕ್ಷೀರಸಮುದ್ರವನ್ನು ಹೊಂದಿ ಅಲ್ಲಿ ಒಂದು ಪ್ರಕಾಶಮಾನವಾದ, ಉತ್ತಮವಾದ ಮನೆಯನ್ನು ನೋಡಿದನು. ಅದರೊಳಗೆ ಹೋಗಲು ಅಲ್ಲಿ ಒಂದು ಕ್ರೀಡಾಸ್ಥಾನವನ್ನೂ ನೋಡಿದನು.

**ನೋಷ್ಣೋ ನ ಶೀತಲೋ ವಾಯುರ್ನ ತಮೋ ಯತ್ರ ದೃಶ್ಯತೇ ।**
**ಯತ್ರ ಗಾಯಂತಿ ನೃತ್ಯಂತಿ ಕ್ರೀಡಂತಿ ಚ ವರಾಃ ಸ್ತ್ರಿಯಃ ॥ ೫೩ ॥**

**ಸುಪೀನಸ್ತನಭಾರಾಢ್ಯಾಃ ಕೃಶೋದರ್ಯಸ್ಸುದಂತಿಕಾಃ ।**
**ನೇತ್ರವಿಭ್ರಮವಿಕ್ಷೇಪೈರ್ನಿತಂಬಪರಿವರ್ತಿತೈಃ ॥ ೫೪ ॥**

**ಅಂಗೈಸ್ಸಂಮೋಹನೈ ರಮ್ಯೈರ್ಬಾಹುವಲ್ಲೀವಿಚಾಲಿತೈಃ ।**
**ಪಾದವಿನ್ಯಾಸರಣಿತೈರ್ಮಧುರೈರ್ವಚನಸ್ತವೈಃ ॥ ೫೫ ॥**

**ಸೌಗಂಧ್ಯಸೌಖ್ಯದೈರ್ವಾಸೈರ್ನೇತ್ರಭ್ರಮರಹುಂಕೃತೈಃ ।**
**ಚಾಮರಾಂದೋಳಲೀಲಾಭಿಃ ಸ್ರಗ್ಭಿಃ ಸ್ಮಿತವಿಲೋಕಿತೈಃ ॥ ೫೬ ॥**

**ಸೇವಾಂ ಚಕ್ರುರ್ವಿಲಾಸಿನ್ಯಃ ತತ್ರ ಗತ್ವೋಪಧೇಸ್ಸುತಃ ।**
**ಕ್ರೀಡಂತಂ ತತ್ರ ದುಗ್ಧಾಬ್ಧಿಂ ಸಂವೀಕ್ಷ್ಯ ಸಮರೋತ್ಸುಕಃ ॥ ೫೭ ॥**

---

೫೩. ಆ ಮನೆಯು ಉಷ್ಣವೂ ಶೀತವೂ ಇಲ್ಲದೆ, ಆನಂದಕರವಾದ ವಾಯುವಿನಿಂದ ಕೂಡಿದೆ. ಅಲ್ಲಿ ಕತ್ತಲೆಯೇ ಇಲ್ಲ. ಅಲ್ಲಿ ಉತ್ತಮರಾದ ಸ್ತ್ರೀಯರು ನರ್ತನಾದಿಗಳನ್ನು ಮಾಡುತ್ತ ಸುಖವಾಗಿ ಕ್ರೀಡಿಸುತ್ತಿರುವರು.

೫೪-೫೭. ಅಲ್ಲಿ ಉತ್ತಮರಾದ ಹೆಂಗಸರನ್ನು ನೋಡಿದನು. ಅವರು ದೊಡ್ಡ ದೊಡ್ಡ ಮೊಲೆಗಳಿಂದ ಕೂಡಿದ್ದರು. ಹೊಟ್ಟೆಯು ಸಣ್ಣಗಿದ್ದಿತು. ಹಲ್ಲುಗಳು ಚೆನ್ನಾಗಿದ್ದುವು. ಕಣ್ಣುಗಳನ್ನು ಹಾರಿಸುವ ಮತ್ತು ಕುಂಡೆಗಳನ್ನು ತಿರುಗಿಸುವ ಲೀಲೆಗಳಿಂದಲೂ, ರಮ್ಯವಾದ ತೋಳನ್ನು ಅಲ್ಲಾಡಿಸುವುದರಿಂದ ಉಂಟಾದ ಅವಯವಗಳ ರಮ್ಯತೆಯಿಂದಲೂ, ಹೆಜ್ಜೆಯನ್ನು ಇಡುವುದರಿಂದಲೂ, ಮಧುರವಾದ ಧ್ವನಿಮಾಡುವುದರಿಂದಲೂ, ತಮ್ಮ ಸ್ವಭಾವವಾದ ಮಧುರವಚನದಿಂದಲೂ ಸ್ತೋತ್ರಗಳಿಂದಲೂ, ಸುವಾಸನೆಯನ್ನು ಬೀರುತ್ತಿರುವ ಮತ್ತು ಚೆನ್ನಾಗಿರುವ ಬಟ್ಟೆಗಳನ್ನು ಹಾಕಿಕೊಂಡಿರುವುದರಿಂದಲೂ, ಕಣ್ಣುಗಳೆಂಬ ದುಂಬಿಗಳ ಹುಂಕಾರದಿಂದಲೂ, ಚಾಮರವನ್ನು ಬೀಸುತ್ತಿರುವುದರಿಂದಲೂ, ಅಲ್ಲಾಡುತ್ತಿರುವ ಮಾಲೆಗಳಿಂದಲೂ, ಮನೋಹರವಾದ ನೋಟಗಳಿಂದಲೂ ಕೂಡಿದವರಾಗಿದ್ದರು. ಇಂತಹ ಸ್ತ್ರೀಯರು ಕ್ಷೀರಾಬ್ಧಿಯನ್ನು ಅಲ್ಲಿ ಸೇವಿಸುತ್ತಿದ್ದರು. ಅಂತಹ ಜಾಗಕ್ಕೆ ಈ ಜಲಂಧರನು ಹೋಗಿ ಅಲ್ಲಿ ಕ್ರೀಡಿಸುತ್ತಿರುವ ಕ್ಷೀರಾಬ್ಧಿಯನ್ನು ನೋಡಿ ಒಡನೆಯೇ ಯುದ್ಧಮಾಡಲು ಮನಸ್ಸುಳ್ಳ ಇವನು ಇಂತೆಂದನು.

ಅಥಾಹ ಪ್ರಣಿಪತ್ಯಾಸೌ ಕ್ಷೀರಾಬ್ಧಿಂ ತಾತ ಹಂಸಿ ಮಾಂ ।
ದ್ರೋಣಾಚಲೌಷಧೀನ್ಯಾಜಾದೂರ್ಮಿಭಿಃ ಪ್ಲಾವಯಸ್ವ ತಂ ॥ ೫೮ ॥

॥ ಕ್ಷೀರಸಾಗರ ಉವಾಚ ॥

ತಂ ಪ್ರಾಪ್ತಂ ಶರಣಂ ಪುತ್ರ ಪ್ಲಾವಯಾಮ್ಯೂರ್ಮಿಭಿಃ ಕಥಂ ।
ಮುನೀಂದ್ರಾಸ್ತಂ ನ ಶಂಸಂತಿ ಯಸ್ತ್ಯಜೇಚ್ಛರಣಾಗತಂ ॥ ೫೯ ॥

॥ ನಾರದ ಉವಾಚ ॥

ಪಿತೃವ್ಯವಚಸಂ ಶ್ರುತ್ವಾ ಸಕ್ರೋಧಾತ್ಸಂಯುತಂ ಗಿರಿಂ ।
ತಲಪ್ರಹರಣೇನೈವ ತಾಡಯಾಮಾಸ ದೈತ್ಯರಾಟ್ ॥ ೬೦ ॥

ತತೋ ದ್ರೋಣಗಿರೀ ರಾಜನ್ ಭೀತೋ ಜಾಲಂಧರಾದ್ಭೃಶಂ ।
ಅಥಾಜಗಾಮ ರೂಪೇಣ ಪ್ರಾಹ ಜಾಲಂಧರಂ ಪ್ರತಿ ॥ ೬೧ ॥

---

೫೮. ಆಗ ಆತನು ಆ ಕ್ಷೀರಾಬ್ಧಿಗೆ ನಮಸ್ಕರಿಸಿ ಎಲೈ ತಂದೆಯೇ! ನನ್ನನ್ನು ನೀನು ಕೊಲ್ಲುತ್ತಿದ್ದೀಯೆ. ಆ ದೇವತೆಗಳನ್ನು ದ್ರೋಣಾಚಲದಲ್ಲಿರುವ ಔಷಧಿಗಳ ಅಲೆಗಳೆಂಬ ನೆವದಿಂದ ತಣ್ಣಗೆಮಾಡಿ ಬದುಕಿಸುತ್ತಿದ್ದೀಯೆ.

೫೯. ಕ್ಷೀರಸಾಗರನು ಹೇಳಿದನು– ಎಲೈ ಮಗನೇ! ಶರಣಾಗತನಾಗಿ ಬಂದವನನ್ನು ಅಲೆಗಳಿಂದ ಹೇಗೆ ತಾನೆ ಮುಳುಗಿಸಲಿ? ಶರಣಾಗತನಾದವನನು ಯಾವನು ಬಿಡುತ್ತಾನೆಯೋ ಅವನನ್ನು ಋಷಿಗಳು ತಿರಸ್ಕರಿಸುತ್ತಾರೆ. ಅದು ಯೋಗ್ಯವಲ್ಲ.

೬೦. ನಾರದನು ಹೇಳಿದನು–ಚಿಕ್ಕಪ್ಪನ ಈ ಮಾತನ್ನು ಕೇಳಿ ಆ ದ್ರೋಣ ಪರ್ವತವನ್ನು ಈ ಜಲಂಧರನು ಒಂದು ಗುದ್ದಿನಿಂದ ಗುದ್ದಿ ಅಲ್ಲೋಲಕಲ್ಲೋಲ ಮಾಡಿದನು.

೬೧. ಆಗ ದ್ರೋಣ ಪರ್ವತವು ಹೆದರಿ ತನ್ನ ರೂಪವನ್ನು ಧರಿಸಿ ಜಲಂಧರನ ಎದುರಿಗೆ ಬಂದು ಅವನನ್ನು ಕುರಿತು ಇಂತೆಂದಿತು.

॥ ದ್ರೋಣ ಉವಾಚ ॥

ತವಾಹಮಭವಂ ದಾಸೋ ರಕ್ಷ ಮಾಂ ಶರಣಾಗತಂ ।
ರಸಾತಳಂ ಮಹಾಬಾಹೋ ಯಾಸ್ಯಾಮಿ ತವ ಶಾಸನಾತ್ ॥
ಯಾವತ್ತ್ವಂ ಕುರುಷೇ ರಾಜ್ಯಂ ತಾವತ್ ಸ್ಥಾಸ್ಯಾಮ್ಯಹಂ ಪ್ರಭೋ ॥೬೨॥

॥ ನಾರದ ಉವಾಚ ॥

ಓಷಧೀನಾಂ ವಿರಾವೇಣ ಸಿದ್ಧಾನಾಂ ರೋದನೇನ ಚ ।
ರಸಾತಲಂ ಜಗಾಮಾದ್ರಿಃ ಸಿಂಧುಸೂನೋಃ ಪ್ರಪಶ್ಯತಃ ॥ ೬೩ ॥

ತತೋ ಜಾಲಂಧರೋ ವೀರ ಆಜಗಾಮ ಮಹಾರಣಂ ।
ಪೂರ್ವಕಲ್ಪಿತಮಾರುಹ್ಯ ರಥಸ್ಥಂ ಕೇಶವಂ ಯಯೌ ।
ರಥಸ್ಥಂ ಮಾಧವಂ ದೃಷ್ಟ್ವಾ ಜಹಾಸೋಚ್ಚೈರ್ನದೀಸುತಃ ॥ ೬೪ ॥

॥ ಜಾಲಂಧರ ಉವಾಚ ॥

ತಾವತ್ತ್ವಂ ತಿಷ್ಠ ಶಕಟೇ ಯಾವದ್ಧನ್ಯಾಮರೀಸಹಂ ॥ ೬೫ ॥

---

೬೨. ದ್ರೋಣಪರ್ವತವು ಹೇಳಿತು– ಎಲೈ ಜಲಂಧರನೇ! ನಾನು ನಿನಗೆ ದಾಸನಾಗಿದ್ದೇನೆ. ಶರಣಾಗತನಾದ ನನ್ನನ್ನು ಕಾಪಾಡು. ನಿನ್ನ ಅಪ್ಪಣೆಯಂತೆ ಇಲ್ಲಿರದೆ ಪಾತಾಳಕ್ಕೆ ಹೋಗುತ್ತೇನೆ. ನೀನು ರಾಜ್ಯಭಾರವನ್ನು ಭೂಮಿಯಲ್ಲಿ ಮಾಡುತ್ತಿರುವವರೆಗೂ ನಾನು ಅಲ್ಲಿರುತ್ತೇನೆ.

೬೩. ನಾರದನು ಹೇಳಿದನು–ಆಗ ಪಾತಾಳಕ್ಕೆ ಈ ಪರ್ವತವು ಹೋಗುತ್ತದೆಯಲ್ಲಾ ಎಂಬ ಸಂಕಟದಿಂದ ಓಷಧಿಗಳು ಕೂಗಿಕೊಳ್ಳುತ್ತಿರಲು, ಸಿದ್ಧರು ಅಳುತ್ತಿರಲು ಇದೊಂದನ್ನೂ ಲಕ್ಷಿಸದೆ ಆ ದ್ರೋಣಪರ್ವತವು ಜಲಂಧರನ ಕಣ್ಣೆದುರಿಗೇನೆ ಪಾತಾಳಕ್ಕೆ ಹೊರಟುಹೋಯಿತು.

೬೪. ಅನಂತರ ಜಲಂಧರನು ರಣಭೂಮಿಗೆ ಬಂದು ಮೊದಲೇ ಸಿದ್ಧಮಾಡಿದ್ದ ರಥವನ್ನು ಹತ್ತಿ ಕೇಶವನ ಎದುರಿಗೆ ಬಂದನು. ರಥದಲ್ಲಿ ಕುಳಿತಿದ್ದ ವಿಷ್ಣುವನ್ನು ನೋಡಿ ಈ ಜಲಂಧರನು ಗಟ್ಟಿಯಾಗಿ ನಕ್ಕನು.

೬೫. ಜಲಂಧರನು ಹೇಳಿದನು– ನಾನು ಶತ್ರುಗಳನ್ನು ಕೊಲ್ಲುವವರೆಗೂ ನೀನು ರಥದಲ್ಲಿ ಕುಳಿತಿರು.

|| ನಾರದ ಉವಾಚ ||

ಏವಮುಕ್ತ್ವಾ ಜಘಾನಾಶು ಶರೈಸ್ತಾಂ ದೇವವಾಹಿನೀಂ ।
ಬಾಣೈರ್ವಿದಾರಿತಾ ದೇವಾಸ್ತ್ರಾಹೀತ್ಯೂಚುರ್ಬೃಹಸ್ಪತಿಂ || ೬೬ ||

ತತೋ ಬೃಹಸ್ಪತಿಶ್ಶೀಘ್ರಮಗಮತ್ ಕ್ಷೀರಸಾಗರಂ ।
ಅದೃಷ್ಟ್ವಾ ತಂ ತತೋ ದ್ರೋಣಮಭೂಚ್ಚಿಂತಾಪರೋ ನೃಪ ||
ಅಥಾಗತ್ಯ ರಣಂ ತೂರ್ಣಮಮರಾನ್ತ್ರಾಹ ಗೋಪತಿಃ || ೬೭ ||

|| ಬೃಹಸ್ಪತಿರುವಾಚ ||

ಪಲಾಯಧ್ವಂ ಸುರಾಸ್ಸರ್ವೇ ದ್ರೋಣಾದ್ರಿಃ ಕ್ಷಯಮಾಗತಃ || ೬೮ ||

|| ನಾರದ ಉವಾಚ ||

ಏವಮುಕ್ತವತಸ್ತಸ್ಯ ಗುರೋಶ್ಶಿಚ್ಛೇದ ಸಿಂಧುಜಃ ।
ಯಜ್ಞೋಪವೀತಂ ಕೇಶಾಂಶ್ಚ ಬಾಣೈಸ್ತೀಕ್ಷ್ಣೈರ್ಹಸನ್ ಸುರಾನ್ ||೬೯||

---

೬೬. ನಾರದನು ಹೇಳಿದನು– ಹೀಗೆಂದು ಹೇಳಿ ಆ ಜಲಂಧರನು ಬಾಣಗಳಿಂದ ಆ ದೇವತೆಗಳ ಸೈನ್ಯವನ್ನು ಹೊಡೆದನು. ಬಾಣಗಳಿಂದ ಏಟುತಿಂದ ದೇವತೆಗಳು ಬೃಹಸ್ಪತಿಯನ್ನು ಕುರಿತು ನಮ್ಮನ್ನು ಕಾಪಾಡು. ಎಂದು ಕೂಗಿಕೊಳ್ಳುತ್ತಿದ್ದರು.

೬೭- ಆಗ ಬೃಹಸ್ಪತಿಯು ಬೇಗನೆ ಕ್ಷೀರಸಮುದ್ರಕ್ಕೆ ಹೋದನು. ಅಲ್ಲಿ ದ್ರೋಣಪರ್ವತವನ್ನು ಕಾಣದಿರಲು ದುಃಖಾಕ್ರಾಂತನಾಗಿ ಅನಂತರ ಮತ್ತೆ ರಣರಂಗಕ್ಕೆ ಬಂದು ಆ ಬೃಹಸ್ಪತಿಯು ದೇವತೆಗಳನ್ನು ಕುರಿತು ಇಂತೆಂದನು.

೬೮. ಬೃಹಸ್ಪತಿಯು ಹೇಳಿದನು– ಎಲೈ ದೇವತೆಗಳಿರಾ ! ನೀವೆಲ್ಲರೂ ರಣಾಂಗಣದಿಂದ ಓಡಿಹೋಗಿರಿ. ದ್ರೋಣಪರ್ವತವು ನಾಶವಾಗಿದೆ.

೬೯- ನಾರದನು ಹೇಳಿದನು– ಬೃಹಸ್ಪತಿಯು ಹೀಗೆ ಹೇಳುತ್ತಿರುವುದನ್ನು ಕೇಳಿ ಜಲಂಧರನು ಹರಿತವಾದ ಬಾಣಗಳಿಂದ ಆ ಬೃಹಸ್ಪತಿಯ ಜನಿವಾರ ತಲೆಯ ಕೂದಲು ಇವುಗಳೆನ್ನು, ದೇವತೆಗಳನ್ನು ನೋಡಿ ಹಾಸ್ಯಮಾಡುತ್ತಾ ಕತ್ತರಿಸಿದನು.

ತತೋ ದುದ್ರಾವ ವೇಗೇನ ಗುರುಃ ಪ್ರಾಣಭಯಾರ್ದಿತಃ ।
ದೇವಾಸ್ಸರ್ವೇ ರಣಂ ಹಿತ್ವಾ ಪಲಾಯಾಂ ಚಕ್ರಿರೇ ನೃಪ ॥ ೭೦ ॥

ಏವಂ ವಿದ್ರಾವ್ಯ ದೇವಾನ್ಸ್ವೈ ಜನಾರ್ಧನಮುಧಾವತ ।
ಹೃಷೀಕೇಶೋಪಿ ದೈತ್ಯೇಶಮನ್ವಧಾವದ್ರಣೋತ್ಸುಕಃ ॥ ೭೧ ॥

ತತೋ ಯುದ್ಧಮುಭೊದ್ಘೋರಂ ವಿಷ್ಣೋರ್ಜಾಲಂಧರಸ್ಯ ಚ ।
ದುರ್ಧರ್ಷಣೋ ಬಾಣಜಾಲೈಃ ಪ್ಲಾವಯಾಮಾಸ ಕೇಶವಂ ॥ ೭೨ ॥

ತಾನ್ಬಾಣಾ ಖಂಡಶಃ ಕೃತ್ವಾ ಪೂರಯಿತ್ವಾ ಶರೈರ್ಮಹಾನ್ ।
ವಾಸುದೇವೋಽಸುರಂ ಬಾಣೈಃ ಜಾಲಂಧರಮಪೀಡಯತ್ ॥ ೭೩ ॥

ಜಾಲಂಧರೋ ರಥಂ ತ್ಯಕ್ತ್ವಾ ಶರಪೀಡಿತವಿಗ್ರಹಃ ।
ವಿಷ್ಣುಂ ವಿಜೇತುಂ ದುದ್ರಾವ ಸಂಯುತಿಸ್ಥಮಥ ದ್ರುತಂ ॥ ೭೪ ॥

---

೭೦. ಆಗ ಗುರುವು ಪ್ರಾಣಭಯದಿಂದ ಭಯಪಟ್ಟು ಬೇಗನೆ ಓಡಿದನು. ದೇವತೆಗಳೂ ಯುದ್ಧಭೂಮಿಯನ್ನು ಬಿಟ್ಟು ಓಡಿದರು.

೭೧. ಹೀಗೆ ಜಲಂಧರನು ದೇವತೆಗಳನ್ನು ಓಡಿಸಿ ಜನಾರ್ದನನ್ನು ಎದುರಿಸಲು ಆತನೂ ಯುದ್ಧಮಾಡಲು ಇಚ್ಛೆಯಿಂದ ಇವನೆದುರಿಗೆ ಬಂದನು.

೭೨. ಆಗ ವಿಷ್ಣು ಜಲಂಧರರಿಗೆ ಘೋರವಾದ ಯುದ್ಧವು ನಡೆಯಿತು. ಜಲಂಧರನು ಕೇಶವನನ್ನು ಬಾಣಗಳಿಂದ ತುಂಬಿದನು.

೭೩. ವಾಸುದೇವನೂ ಆ ಬಾಣಗಳನ್ನು ಚೂರುಚೂರಾಗಿ ಮಾಡಿ ಇನ್ನೂ ಬಹುವಾದ ಬಾಣಗಳನ್ನು ಬಿಟ್ಟು ಜಲಂಧರನನ್ನು ನೋಯಿಸಿದನು.

೭೪. ಆಗ ಜಲಂಧರನು ಬಾಣದ ಏಟುಗಳಿಂದ ನೊಂದವನಾಗಿ ಯುದ್ಧ ಕೊಡುತ್ತಿರುವ ಜನಾರ್ದನನ್ನು ಜಯಿಸಲು ರಥದಿಂದ ಕೆಳಕ್ಕೆ ಇಳಿದು ಅವನ ಬಳಿಗೆ ವೇಗವಾಗಿ ಓಡಿದನು.

ತಮಾಯಾಂತಂ ರಣೇ ದೃಷ್ಟ್ವಾ ಹರಿರ್ವಿವ್ಯಾಧ ಸಾಯಕೈಃ ।
ಬಾಣಾನಂಗೇ ಸಹನ್ವಿಷ್ಣೋಃ ಪ್ರಾಪ್ತೋಸೌ ರಥಸನ್ನಿಧೌ || ೭೫ ||

ಹಸ್ತೇನೈಕೇನ ಗರುಡಂ ದ್ವಿತೀಯೇನ ರಥಂ ಹರೇಃ ।
ಭ್ರಾಮಯಿತ್ವಾಂಬರೇ ಶಶ್ವಚ್ಛ್ವೇತದ್ವೀಪೇ ನ್ಯಪಾತಯತ್ || ೭೬ ||

ಜಾಲಂಧರ ಕರಕ್ಷಿಪ್ತೋ ಗರುಡೋಪಿ ಪಪಾತ ಹ ।
ಕ್ರೌಂಚದ್ವೀಪೇ ಸ ತತ್ರೈವ ವಿಶ್ರಾಮಮಕರೋಚ್ಚಿರಂ || ೭೭ ||

ಅಚ್ಯುತಃ ಪ್ರಚ್ಯುತಸ್ತಸ್ಮಾದ್ಭ್ರಮತೋ ರಥಮಂಡಲಾತ್ ।
ರಣಮಾಗತ್ಯ ದೈತ್ಯೇಶಂ ತಿಷ್ಠ ತಿಷ್ಠೇತ್ಯಭಾಷತ || ೭೮ ||

ದೃಷ್ಟ್ವಾ ತಮಾಗತಂ ಭೂಯಃ ಕೇಶವಂ ಸಮರಪ್ರಿಯಂ ।
ಪೂರಯನ್ಮಾರ್ಗಣೈರ್ಭೂಮಿಂ ಜಗರ್ಜಾರ್ಣವನಂದನಃ || ೭೯ ||

---

೭೫. ಅವನು ಹತ್ತಿರ ಬರುತ್ತಿರುವುದನ್ನು ನೋಡಿ ವಿಷ್ಣುವು ಬಾಣಗಳಿಂದ ಹೊಡೆಯಲು ಮೊದಲುಮಾಡಿದನು. ಆದರೂ ಕೂಡ ಆ ಜಲಂಧರನು ಆ ಏಟನ್ನೂ ಸಹಿಸಿಕೊಂಡು ವಿಷ್ಣುವಿನ ಬಳಿಗೆ ಬಂದನು.

೭೬. ಹತ್ತಿರಕ್ಕೆ ಹೋಗಿ ಒಂದು ಕೈಯಲ್ಲಿ ಗರುಡನನ್ನೂ ಮತ್ತೊಂದು ಕೈಯಲ್ಲಿ ರಥವನ್ನೂ ಹಿಡಿದುಕೊಂಡು ತಿರುಗಿಸುತ್ತಾ ಶ್ವೇತದ್ವೀಪದಲ್ಲಿ ಬೀಳುವಂತೆ ಆ ರಥವನ್ನು ಎಸೆದನು.

೭೭. ಆ ಜಲಂಧರನ ಎಸೆತದಿಂದ ಕ್ರೌಂಚದ್ವೀಪದಲ್ಲಿ ಗರುಡನು ಬಿದ್ದನು. ಆ ನೋವನ್ನು ತಡೆಯಲಾರದೆ ಅಲ್ಲಿಯೇ ಬಿದ್ದಿದ್ದನು.

೭೮. ವಿಷ್ಣುವು ಭ್ರಮಣಗಳೆಂಬ ಸಾಧನೆಗಳಿಂದ ಆ ರಥದಿಂದ ತಪ್ಪಿಸಿಕೊಂಡು ಕೆಳಗೆ ಧುಮುಕಿ ಮತ್ತೆ ಯುದ್ಧರಂಗಕ್ಕೆ ಬಂದು, ಆ ದೈತ್ಯನನ್ನು ಕುರಿತು ನಿಲ್ಲು, ನಿಲ್ಲು, ಎಂದು ಕೂಗಿದನು.

೭೯. ಯುದ್ಧಪ್ರಿಯನಾದ ವಿಷ್ಣುವು ತಪ್ಪಿಸಿಕೊಂಡು ಮತ್ತೆ ಯುದ್ಧಕ್ಕೆ ಬಂದುವನ್ನು ನೋಡಿ ಭೂಮಿಯೆಲ್ಲವನ್ನೂ ಬಾಣದಿಂದಲೇ ತುಂಬುವವನಾಗಿ ಆ ಜಲಂಧರನು ಸಿಂಹನಾದ ಮಾಡಿದನು.

ವಿವ್ಯಾಧ ದೈತ್ಯಂ ಹರಿರಾಶು ಶಕ್ತ್ಯಾ
ಹೃದಿ ಸ್ಫುರಂತ್ಯಾ ಸ ತತಃ ಪಪಾತ ।
ಸೂತೋಽನಯತ್ತಂ ಸಮರಾನ್ನಿವಾಸಂ
ತಂ ಪ್ರಾಹ ರೇ ಕೇನ ಕೃತೋಽಸ್ಮ್ಯಲಜ್ಜಃ ॥ ೮೦ ॥

ದೈತ್ಯಾರಿಜಾಲಂಧರಯೋರ್ಮಹತ್ತದಾ
ಬಭೂವ ಯುದ್ಧಂ ಧರಣೀತಲಸ್ಥಯೋಃ ।
ಪ್ರೇಮ್ಣಾ ಶ್ರಿಯಸ್ತಂ ನ ಜಘಾನ ದಾನವಂ
ಸ್ವಯಂ ಹರಿಸ್ತಸ್ಯ ಶರೈಃ ಪಪಾತ ॥ ೮೧ ॥

ತತೋ ನಿರೀಕ್ಷ್ಯ ಗೋವಿಂದಂ ಪತಿತಂ ಧರಣೀ ತಲೇ ।
ಪ್ರಗೃಹ್ಯಾರ್ಣವಜೋ ದೈತ್ಯ ಆರುರೋಹ ನಿಜಂ ರಥಂ ॥ ೮೨ ॥

---

೮೦. ಆ ಹರಿಯು ಶಕ್ತ್ಯಾಯುಧದಿಂದ ಆ ದೈತ್ಯನ ಎದೆಯಲ್ಲಿ ಹೊಡೆಯಲು ಅವನು ಕೆಳಗೆ ಬಿದ್ದನು. ಇದನ್ನು ನೋಡಿ ಸಾರಥಿಯು ಅವನನ್ನು ಶಿಬಿರಕ್ಕೆ ಕೊಂಡೊಯ್ದನು. ಶಿಬಿರದಲ್ಲಿ ಉಪಚಾರವಾದ ಮೇಲೆ ಜ್ಞಾನಬರಲು ಆಗ ಅಲ್ಲಿರುವ ಸೂತನನ್ನು ಕುರಿತು ಯಾರು ನನಗೆ ಯುದ್ಧದಿಂದ ಹಿಂದಿರುಗಿ ತಂದು ನಾಚಿಕೆಗೆ ಈಡಾದ ಈ ಕೆಲಸವನ್ನು ಮಾಡಿದರು ? ಎಂದನು.

೮೧. ಅನಂತರ ಜಲಂಧರನು ಮತ್ತೆ ಯುದ್ಧಭೂಮಿಗೆ ಬಂದು ಹರಿಯೊಡನೆ ನೆಲದಮೇಲೆಯೇ ಯುದ್ಧಮಾಡಲು ಮೊದಲುಮಾಡಿದನು. ನೆಲದ ಮೇಲೆಯೇ ಇವರಿಬ್ಬರಿಗೂ ಮಹಾಯುದ್ಧವು ನಡೆಯಿತು. ಆಗ ಲಕ್ಷ್ಮಿಯಲ್ಲಿರುವ ಪ್ರೀತಿಯಿಂದ ವಿಷ್ಣುವು ಜಲಂಧರನನ್ನು ಕೊಲ್ಲಲಿಲ್ಲ. ಆದರೆ ತಾನೇನೇ ಆತನ ಬಾಣಗಳ ಪೆಟ್ಟಿನಿಂದ ಕೆಳಗೆ ಬಿದ್ದನು.

೮೨. ಆಗ ಗೋವಿಂದನು ನೆಲದಮೇಲೆ ಬಿದ್ದುದನ್ನು ಜಲಂಧರನು ನೋಡಿ ಆತನನ್ನು ತನ್ನ ರಥದ ಮೇಲೆ ಹಾಕಿಕೊಂಡು ತಾನೂ ರಥವನ್ನು ಹತ್ತಿದನು.

ತತಸ್ತಮಿಂದಿರಾ ಪ್ರಾಪ್ತಾ ರುದತೀ ವಿಷ್ಣುವಲ್ಲಭಾ ।
ಸಂಸ್ಥಿತಾ ಕಮಲಾ ತತ್ರ ಪತಿಂ ಕಮಲಲೋಚನಂ ॥
ಪತಿತಂ ತು ಪತಿಂ ವೀಕ್ಷ್ಯ ಲಕ್ಷ್ಮೀಃ ಪ್ರಾಹಾರ್ಣವಾತ್ಮಜಂ ॥ ೮೩ ॥

॥ ಲಕ್ಷ್ಮೀರುವಾಚ ॥

ಶೃಣುಷ್ವ ವಚನಂ ಭ್ರಾತಃ ಯೇನ ವಿಷ್ಣುರ್ಧೃತಸ್ತ್ವಯಾ ।
ಭಗಿನ್ಯಾ ನ ಚ ವೈಧವ್ಯಂ ದಾತುಂ ಯುಕ್ತಂ ಮಹಾಬಲ ॥ ೮೪ ॥

॥ ನಾರದ ಉವಾಚ ॥

ಶ್ರುತ್ವಾ ತು ವಚನಂ ತಸ್ಯಾ ಮುಮೋಚ ಜಗತಾಂ ಪತಿಂ ।
ಜಾಲಂಧರೋ ಮಹಾಬಾಹುಃ ಸ್ವಸ್ರೇ ಭಕ್ತ್ಯಾ ನನಾಮ ಚ ॥ ೮೫ ॥

ನನಂದೇ ಚರಣೌ ವಿಷ್ಣೋಃ ಸ್ವಸುಸ್ನೇಹಾತ್ತದಾಂಜಸಾ ।
ವಿಷ್ಣುರ್ಜಾಲಂಧರಂ ಪ್ರಾಹ ತುಷ್ಟೋಽಸ್ಮಿ ತವ ಕರ್ಮಣಾ ॥
ವರಂ ವರಯ ದೈತ್ಯೇಶ ಕಿಂ ಪ್ರಯಚ್ಛಾಮಿ ತೇ ವರಂ ॥ ೮೬ ॥

---

೮೩. ಆಗ ವಿಷ್ಣುವಿನ ಹೆಂಡತಿಯಾದ ಲಕ್ಷ್ಮಿಯು ಅಲ್ಲಿಗೆ ಅಳುತ್ತ ಬಂದು ಗಂಡನ ಬಳಿಯಲ್ಲಿ ಅಳುತ್ತಾ ನಿಂತುಕೊಂಡಳು. ತನ್ನ ಗಂಡನು ಕೆಳಗೆ ಬಿದ್ದಿರುವುದನ್ನು ನೋಡಿ ಲಕ್ಷ್ಮಿಯು ಈ ಜಲಂಧರನನ್ನು ಕುರಿತು ಇಂತೆದಳು.

೮೪. ಲಕ್ಷ್ಮಿಯು ಹೇಳಿದಳು– ಎಲೈ ಸಹೋದರನೇ ! ನನ್ನ ಮಾತನ್ನು ಕೇಳು. ನೀನು ವಿಷ್ಣುವನ್ನೇ ಜಯಿಸಿದೆ. ಸೆರೆಯನ್ನೂ ಹಿಡಿದಿದ್ದೀಯೆ. ಆದರೆ ನಿನ್ನ ಅಕ್ಕನ ಗಂಡನನ್ನು ಕೊಂದು ಆಕೆಗೆ ಮುಂಡೆತನ ಬರುವಂತೆ ಮಾಡಬೇಡ.

೮೫. ನಾರದನು ಹೇಳಿದನು– ಅಕ್ಕನ ಈ ಮಾತನ್ನು ಕೇಳಿದೊಡನೆಯೇ ! ಆ ಜಗತ್ಪತಿಯಾದ ವಿಷ್ಣುವನ್ನು ಬಿಟ್ಟುಬಿಟ್ಟನು. ಅನಂತರ ಆ ಜಲಂಧರನು ಅಕ್ಕನಾದ ಲಕ್ಷ್ಮಿಗೆ ಭಕ್ತಿಯಿಂದ ನಮಸ್ಕರಿಸಿದನು.

೮೬. ಆ ಮೇಲೆ ಅಕ್ಕನಲ್ಲಿರುವ ಸ್ನೇಹದಿಂದ ಆಕೆಯ ಗಂಡನಾದ ವಿಷ್ಣುವಿಗೆ ನಮಸ್ಕರಿಸಿದನು. ಆಗ ವಿಷ್ಣುವು ಜಲಂಧರನನ್ನು ಕುರಿತು ಎಲೈ ಜಲಂಧರನೇ ! ನಿನ್ನ ಕೆಲಸದಿಂದ ಬಹು ಸಂತೋಷವಾಗಿದೆ. ನಿನಗೆ ಬೇಕಾದ ವರವನ್ನು ಕೇಳಿಕೋ ಕೊಡುತ್ತೇನೆ. ಎಂದು ಹೇಳಿದನು.

|| ಜಾಲಂಧರ ಉವಾಚ ||

ಯದಿ ತ್ವಂ ಮಮ ತುಷ್ಟೋಽಸಿ ಶೌರ್ಯೇಣಾನೇನ ಕೇಶವ ।
ಸ್ಥಾತವ್ಯಂ ಮತ್ಪಿತುಸ್ಸ್ಥಾನೇ ತ್ವಯಾ ಕಮಲಯಾ ಸಹ || ೮೭ ||

|| ನಾರದ ಉವಾಚ ||

ತಥೇತ್ಯುಕ್ತ್ವಾ ಚ ಸಂಸ್ಮೃತ್ಯ ಗರುಡಂ ಧರಣೀಧರಃ ।
ಆರುಹ್ಯ ಚ ಜಗನ್ನಾಥಃ ಕ್ಷೀರಾಬ್ಧಿಂ ಪ್ರಿಯಯಾ ಯಯೌ || ೮೮ ||

ತದಾ ಪ್ರಭೃತಿ ಕೃಷ್ಣಸ್ಯ ವಾಸಃ ಶ್ವಶುರಮಂದಿರೇ ।
ಅಬ್ಧೌ ವಸತಿ ದೇವೇಶೋ ಲಕ್ಷ್ಮ್ಯಾಃ ಪ್ರಿಯಚಿಕೀರ್ಷಯಾ || ೮೯ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಜಾಲಂಧರೋ
ಪಾಖ್ಯಾನೇ ನಾರದ ಯುಧಿಷ್ಠಿರ ಸಂವಾದೇ
ಅಷ್ಟಮೋಽಧ್ಯಾಯಃ

---

೮೭. ಜಲಂಧರನು ಹೇಳಿದನು– ಎಲೈ ವಿಷ್ಣುವೇ ! ನನ್ನ ಶೌರ್ಯಕ್ಕೆ ನೀನು ಸಂತೋಷಪಟ್ಟಿದ್ದರೆ ನೀನು ಲಕ್ಷ್ಮಿಯೊಡನೆ ನಮ್ಮ ತಂದೆಯ ಮನೆಯಲ್ಲಿರಬೇಕು.

೮೮. ನಾರದನು ಹೇಳಿದನು– ಹಾಗೇ ಆಗಲೆಂದು ಆ ವಿಷ್ಣುವು ಹೇಳಿ ಗರುಡನನ್ನು ಸ್ಮರಿಸಿಕೊಂಡು ಅದರ ಮೇಲೆ ಕುಳಿತುಕೊಂಡು ಹೆಂಡತಿಯೊಡನೆ ಕ್ಷೀರಸಮುದ್ರಕ್ಕೆ ಹೋದನು.

೮೯. ಲಕ್ಷ್ಮಿಗೆ ಹಿತವನ್ನುಂಟುಮಾಡಲು ಅವಳ ತಮ್ಮನನ್ನು ಕೊಲ್ಲದೆ ತಾನೇ ಅವನಿಂದ ಸೋತು ಅವನ ಮಾತಿಗೆ ಕಟ್ಟುಬಿದ್ದು ಆಗಿನಿಂದಲೂ ಮಾವನ ಮನೆಯಲ್ಲಿಯೇ ಆ ವಿಷ್ಣುವು ವಾಸಮಾಡುತ್ತಿದ್ದಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಜಾಲಂಧರನ
ಉಪಾಖ್ಯಾನದ ನಾರದ ಯುಧಿಷ್ಠಿರ ಸಂವಾದದಲ್ಲಿ
ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ನವಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ದೇವಾನ್ನಿದ್ರಾವ್ಯ ಸಮರೇ ವಿಷ್ಣುಂ ಸ್ಥಾಪ್ಯಾತ್ಮಮಂದಿರೇ ।
ಜಾಲಂಧರೇಣಾಬ್ಧಿಜೇನ ಯತ್ಕೃತಂ ಬ್ರೂಹಿ ನಾರದ ॥ ೧ ॥

॥ ನಾರದ ಉವಾಚ ॥

ಶುಂಭಾದೀನಾಂ ತು ವೀರಾಣಾಂ ದತ್ವಾ ದಾನಂ ಪ್ರಸಾದಜಂ ।
ಜಾಲಂಧರೋ ಜಗಾಮಾಥ ಸ್ವರ್ಗಂ ಪ್ರಾಪ್ಯಾವಲೋಕಯತ್ ॥ ೨ ॥

ಹಿರಣ್ಯವರ್ಷೇಣ ಜನಾನ್ಪ್ರೋಷಯಂತೋ ದಿನೇ ದಿನೇ ।
ಫಲಂತಿ ತರವೋಜಸ್ರಂ ವಾಜಿಮೇಧಕ್ರತೋಃ ಫಲಂ ॥ ೩ ॥

---

## ಒಂಭತ್ತನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು– ಜಲಂಧರನು ದೇವತೆಗಳನ್ನು ಯುದ್ಧ ಭೂಮಿಯಿಂದ ಓಡಿಸಿ ವಿಷ್ಣುವನ್ನು ಸಮುದ್ರದಲ್ಲಿರುವಂತೆ ಮಾಡಿ ಅನಂತರ ಮುಂದಕ್ಕೆ ಅವನೇನು ಮಾಡಿದನೆಂಬುದನ್ನು ಹೇಳು.

೨. ನಾರದನು ಹೇಳಿದನು– ಅನಂತರ ಆ ಜಲಂಧರನು ಶುಂಭನೇ ಮುಂತಾದ ವೀರರಿಗೆ ತನ್ನ ಅನುಗ್ರಹ ಪೂರ್ವಕವಾದಬಹುಮಾನಗಳನ್ನು ಕೊಟ್ಟು ಅಲ್ಲಿಂದ ಹೊರಟು ಸ್ವರ್ಗಕ್ಕೆ ಹೋಗಿ ಅಲ್ಲಿನದೆಲ್ಲವನ್ನೂ ನೋಡಿದನು.

೩. ಅಲ್ಲಿರುವ ಮರಗಳು ಚಿನ್ನದ ಮಳೆಯಿಂದ ದಿನದಿನವೂ ಜನಗಳನ್ನು ಸಂತೋಷಪಡಿಸುತ್ತಾ ಅಲ್ಲಿ ಅಶ್ವಮೇಧಯಾಗದ ಫಲವನ್ನು ಅವರಿಗೆ ಕೊಡುತ್ತವೆ.

ಗಜವಸ್ತ್ರಸುವರ್ಣಾನಿ ಧೇನುಕನ್ಯಾ ತಿಲಾನಿ ಚ ।
ಪುಷ್ಪಕರ್ಪೂರತಾಂಬೂಲ ಕಸ್ತೂರೀ ಕುಂಕುಮಾನಿ ಚ　　　　॥ ೪ ॥

ಯೇ ಯಚ್ಛಂತಿ ಮಹಾತ್ಮಾನಃ ತೇ ಯಾಸ್ಯಂತ್ಯಮರಾವತೀಂ ।
ವರ್ಷಾಸು ಗೃಹದಾನೇನ ಶಿಶಿರೇऽಗ್ನಿಪ್ರದಾನತಃ　　　　॥ ೫ ॥

ವಾದಿತ್ರಾಣಿ ಚ ಸರ್ವಾಣಿ ವಾದಯಂತಿ ಶಿವಾಲಯೇ ।
ಪ್ರಪಾಂ ಕುರ್ವಂತಿ ಯೇ ಚೈತ್ರೇ ದಧ್ಯೋದನಸಮನ್ವಿತಾಂ　　　　॥ ೬ ॥

ಯತ್ರ ಹಿಂದೋಳಪರ್ಯಂಕಂ ಸ್ವಯಮಾಂದೋಳಯಂತಿ ಚ ।
ಸಾರಿಕಾಶುಕಹಂಸಾಶ್ಚ ಭ್ರಮದ್ಭ್ರಮರಕೋಕಿಲಾಃ　　　　॥ ೭ ॥

ಕುರ್ವಂತೋ ದೂತಕಾರ್ಯಾಣಿ ಯಚ್ಛಂತೇ ಪ್ರಿಯಸಂಗಮಂ ।
ರಂಭಾ ಯತ್ರ ಪುರೇ ರಾಮಾ ಮೇನಕಾ ಚ ತಿಲೋತ್ತಮಾ　　　　॥ ೮ ॥

ಸುಷುಮಾ ಸುಂದರೀ ಯತ್ರ ಘೃತಾಚೀ ಪುಂಜಿಕಸ್ಥಳೀ ।
ಸುಕೇಶೀ ಸುಮುಖೀ ರಾಮಾ ಮಂಜುಘೋಷಾ ಚ ಮಾಲಿನೀ　　　　॥ ೯ ॥

---

೪–೬. ಆನೆ, ಬಟ್ಟೆ, ಚಿನ್ನ, ಹಸು, ಕನ್ಯೆ, ಎಳ್ಳು, ಹೂ, ಕರ್ಪೂರ, ತಾಂಬೂಲ, ಕಸ್ತೂರಿ, ಕುಂಕುಮಕೇಸರಿ ಇವನ್ನು ಯಾರು ದಾನಮಾಡು ತ್ತಾರೆಯೋ ಆ ಮಹಾತ್ಮರು ಅಮರಾವತಿಗೆ ಹೋಗುತ್ತಾರೆ. ಮಳೆಗಾಲದಲ್ಲಿ ಗೃಹದಾನಮಾಡುವವರೂ, ಚಳಿಗಾಲದಲ್ಲಿ ಅಗ್ನಿದಾನಮಾಡುವವರೂ, ಶಿವನ ದೇವಸ್ಥಾನದಲ್ಲಿ ಎಲ್ಲ ಬಗೆಯಾದ ವಾದ್ಯಗಳನ್ನೂ ಬಾಜಿಸುವವರೂ, ಚೈತ್ರ ಮಾಸದಲ್ಲಿ ಮೊಸರನ್ನವನ್ನೂ, ಅರವಟ್ಟಿಗೆಗಳನ್ನೂ ಮಾಡಿಸುವವರೂ ಯಾವ ಸ್ಥಳಕ್ಕೆ ಹೋಗುತ್ತಾರೆಯೋ ಅಂತಹ ಸ್ವರ್ಗಕ್ಕೆ ಹೋದನು.

೭–೧೩. ಯಾವ ಜಾಗದಲ್ಲಿ ಅಪ್ಸರಸ್ತ್ರೀಯರು ತಾವಾಗಿಯೇ ಮಂಚ ವನ್ನು ತೂಗುತ್ತಾರೆಯೋ, ಸಾರಿಕೆ, ಗಿಳಿ, ಹಂಸ, ಭ್ರಮರ, ಕೋಗಿಲೆಗಳು ದೂತರ ಕೆಲಸವನ್ನು ಮಾಡುತ್ತ ಪ್ರಿಯರನ್ನು ಸೇರಿಸುತ್ತವೆಯೋ ಅಂತಹ ಸ್ವರ್ಗಕ್ಕೆ ಜಲಂಧರನು ಹೋದನು. ಯಾವ ಸ್ಥಳದಲ್ಲಿ ರಂಭೆ, ಮೇನಕೆ, ತಿಲೋತ್ತಮೆ, ಸುಷುಮೆ, ಘೃತಾಚೀ, ಪುಂಜಿಕಸ್ಥಳಿ, ಸುಕೇಶಿ, ಸುಮುಖಿ, ಮಂಜುಘೋಷೆ, ಮಾಲಿನಿ, ಮೃಗೋಪ್ಸವೆ, ಘನದಂಷ್ಟ್ರೆ, ಅನಿಲಪ್ರಭೆ,

ನ್ಯಗ್ರೋಧ್ವನಾ ಚ ಸುಖದಾ ಘನದಂಷ್ಟ್ರಾನಿಲಪ್ರಭಾ ।
ವಾಜಿಮೇಧಫಲಗ್ರಾಹಾ ರಾಜಸೂಯಂ ಫಲಂತಿ ಯಾಃ ॥ ೧೦ ॥

ಕೋಟಿಶೋ ಯತ್ರ ನಿಷ್ಪಾಪಾಃ ಕ್ರೀಡಂತ್ಯಪ್ಸರಸೋ ನೃಪ ।
ಏವಂ ಭೂರಿ ಸುಖೇ ಸ್ವರ್ಗೇ ಸ್ಥಾಪಯಾಮಾಸ ಸಿಂಧುಜಃ ॥ ೧೧ ॥

ಶುಭಂ ಪ್ರಾಣಸಮಂ ದೈತ್ಯಂ ನಿಶುಂಭಂ ಯುವರಾಜಕೇ ।
ಸ್ವಯಂ ಜಾಲಂಧರೇ ಪೀಠೇ ಸ್ವರ್ಗಾದಾಗತ್ಯ ಸಿಂಧುರಾಟ್ ॥ ೧೨ ॥

ವರ್ಷಾರ್ಬುದದ್ವಯಂ ರಾಜ್ಯಂ ಚಕಾರಾತ್ಮಬಲೇನ ಚ ॥ ೧೩ ॥

॥ ಯುಧಿಷ್ಠಿರ ಉವಾಚ ॥

ಯುಯುಧೇ ಸುರಸಂಗ್ರಾಮೇ ಸಸುರೈರಪರಾಜಿತಃ ।
ತತಃ ಕಿಮಕರೋದ್ರಾಜಾ ಸಿಂಧುಸೂನುಃ ಪ್ರತಾಪವಾನ್ ॥ ೧೪ ॥

ತನ್ಮಮಾಚಕ್ಷ್ವ ದೇವರ್ಷೇ ಶ್ರೋತುಕಾಮಸ್ಯ ವಿಸ್ತರಾತ್ ॥ ೧೫ ॥

---

ಮೊದಲಾದ ಅಪ್ಸರಸ್ತ್ರೀಯರಿರುವರೋ ಅಂತಹ ಸ್ವರ್ಗಕ್ಕೆ ಜಲಂಧರನು ಹೋದನು. ಅಶ್ವಮೇಧಯಾಗಕ್ಕೂ, ರಾಜಸೂಯಯಾಗಕ್ಕೂ ಫಲವನ್ನು ಕೊಡುವ ಪಾಪವನ್ನು ಹೊಂದದ ಅಪ್ಸರಸ್ತ್ರೀಯರು ಕೋಟಿಗಟ್ಟಲೆಯಾಗಿ ಎಲ್ಲಿ ಕ್ರೀಡಿಸುವರೋ ಅಂತಹ ಸ್ವರ್ಗಕ್ಕೆ ಜಲಂಧರನು ಹೋದನು. ಅಂತಹ ಉತ್ತಮವಾದ ಸುಖದಾಯಕವಾದ ಸ್ವರ್ಗದಲ್ಲಿ ಆ ಜಲಂಧರನು ಪ್ರಾಣಕ್ಕೆ ಸಮನಾದ ಶುಂಭದೈತ್ಯನನ್ನು ಪಟ್ಟಾಭಿಷೇಕಮಾಡಿ ನಿಶುಂಭನನ್ನು ಯುವರಾಜಪಟ್ಟದಲ್ಲಿ ನಿಲ್ಲಿಸಿದನು. ಅಲ್ಲಿಂದ ಹೊರಟು ತಾನು ಜಲಂಧರ ಪೀಠಕ್ಕೆ ಬಂದು ಎರಡು ಅರ್ಬುದ ವರ್ಷಗಳವರೆಗೂ ತನ್ನ ಪರಾಕ್ರಮದಿಂದ ರಾಜ್ಯವಾಳಿದನು.

೧೪–೧೫. ಯುಧಿಷ್ಠಿರನು ಹೇಳಿದನು– ಈ ರೀತಿ ದೇವತೆಗಳ ಯುದ್ಧದಲ್ಲಿ ಯುದ್ಧಮಾಡಿ ಆ ಜಲಂಧರನು ದೇವತೆಗಳಿಗೆ ಅಜೇಯನಾಗಿದ್ದು ರಾಜ್ಯವಾಳಿದ ನಷ್ಟೆ. ಆಗ ಏನೇನು ಮಾಡಿದನು? ಅದನ್ನು ನನಗೆ ವಿಸ್ತಾರವಾಗಿ ಹೇಳು. ಕೇಳಬೇಕೆಂಬ ಆಸೆಯಿಂದಿದ್ದೇನೆ.

|| ನಾರದ ಉವಾಚ ||

ಶೃಣು ರಾಜನ್ಯಥಾ ತಥ್ಯಂ ಕೃತಂ ಸಾಗರಸೂನುನಾ ।
ಸ ದೇವಾನ್ಸಮರೇ ಜಿತ್ವಾ ರಾಜ್ಯಂ ಚಕ್ರೇ ಹ್ಯಕಂಟಕಂ || ೧೬ ||

ಗಂಧರ್ವಾಶ್ಚಿತ್ರಸೇನಾದ್ಯಾ ಸೇವಂತೇ ಚಾಸುರೇಶ್ವರಂ ।
ಯಜ್ಞಭಾಗಾಂಶ್ಚ ಯೋ ಭುಂಕ್ತೇ ಸರ್ವೇಷಾಮುಸುರೇಶ್ವರಃ || ೧೭ ||

ಕ್ಷೀರಸಾಗರತೋ ದೇವೈಃ ಹೃತಂ ರತ್ನಾದಿಕಂ ಚ ಯತ್ ।
ತತ್ಸರ್ವಂ ಚ ತಥಾನ್ಯಚ್ಚ ನಿರ್ಜಿತ್ಯ ಹೃತವಾನ್ಬಲೀ || ೧೮ ||

ಸಮುದ್ರತನಯೋ ರಾಜ್ಯಂ ಭುವಿ ರಾಜನ್ಪ್ರಶಾಸತಿ ।
ನ ಕಶ್ಚಿನ್ಮ್ರಿಯತೇ ಮರ್ತ್ಯೋ ನರಕಂ ಕೋಪಿ ನ ವ್ರಜೇತ್ || ೧೯ ||

---

೧೬. ನಾರದನು ಹೇಳಿದನು– ಎಲೈ ಧರ್ಮಜನೇ! ಸರಿಯಾದ ವಿಷಯವನ್ನು ಹೇಳುತ್ತೇನೆ. ಕೇಳು. ಆ ಸಮುದ್ರರಾಜನ ಮಗನಾದ ಜಲಂಧರನು ಈರೀತಿ ದೇವತೆಗಳನ್ನು ಯುದ್ಧದಲ್ಲಿ ಜಯಿಸಿ ನಿರ್ಬಾಧಕವಾಗಿ ರಾಜ್ಯವನ್ನು ಆಳಿದನು.

೧೭. ಚಿತ್ರಸೇನನೇ ಮುಂತಾದ ಗಂಧರ್ವರು ಆ ದೈತ್ಯರಾಜನಾದ ಜಲಂಧರನನ್ನು ಸೇವಿಸುತ್ತಿರುವರು. ಎಲ್ಲಾ ದೇವತೆಗಳ ಯಜ್ಞಭಾಗವನ್ನೂ ಇವನೇ ತಿನ್ನುವನು.

೧೮. ದೇವತೆಗಳು ಕ್ಷೀರಸಮುದ್ರದಿಂದ ಕದ್ದುಕೊಂಡುಹೋದ ರತ್ನಗಳನ್ನೂ ಉಳಿದ ಇನ್ನೂ ಅನೇಕವಾದ ರತ್ನಗಳನ್ನೂ ಬಲಿಷ್ಠನಾದ ಈ ಜಲಂಧರನು ಜಯಿಸಿ ತಂದನು.

೧೯. ಈ ಜಲಂಧರನು ಭೂಮಿಯಲ್ಲಿ ರಾಜ್ಯಭಾರವಮಾಡುತ್ತಿರಲು ಒಬ್ಬ ಮನುಷ್ಯನೂ ಸಾಯುತ್ತಿರಲಿಲ್ಲ. ಒಬ್ಬನೂ ನರಕಕ್ಕೆ ಹೋಗುತ್ತಿರಲೂ ಇಲ್ಲ.

ನ ಕಲಿಃ ಪ್ರಣಯಾದನ್ಯೋ ನ ಭೋಗಾದಪರಃ ಕ್ಷಯಃ ।
ನ ವಂಧ್ಯಾ ದುರ್ಭಗಾ ನಾರೀ ನಾಲಂಕಾರೈರ್ವಿವರ್ಜಿತಾ ॥ ೨೦ ॥

ಕುರೂಪಾ ದುರ್ಗತಾ ದುಷ್ಟಾ ಯತ್ರ ಸಾ ನ ಚ ದೃಶ್ಯತೇ ।
ನ ತತ್ರ ವಿಧವಾ ನಾರೀ ನ ಕಶ್ಚಿನ್ನಿರ್ಧನೋ ಜನಃ ॥ ೨೧ ॥

ದಾತಾರಃ ಸಂತಿ ಸರ್ವತ್ರ ನ ಪ್ರತಿಗ್ರಾಹಿಣಃ ಕ್ವಚಿತ್ ।
ಪುಣ್ಯಾ ಜನಾಃ ಪ್ರಯಚ್ಛಂತಿ ದ್ವಿಜೇಭ್ಯೋ ಹ್ಯಾತ್ಮನೋ ಧನಂ ॥ ೨೨ ॥

ರೂಪಯೌವನಶಾಲಿನ್ಯಃ ಸೀಮಂತಿನ್ಯೋ ಗೃಹೇ ಗೃಹೇ ।
ಗೋಕ್ಷೀರಂ ದಧಿ ಸರ್ಪಿಶ್ಚ ಯತ್ರ ನಿರ್ಜರಸೋ ಜನಾಃ ॥ ೨೩ ॥

ಮಂಗಳಂ ತತ್ರ ಸರ್ವೇಷಾಂ ನ ಕಶ್ಚಿದ್ವಧಬಂಧನಂ ।
ಮರಣಂ ನ ಚ ಹಿಂಸಾಸ್ತಿ ನ ಕಶ್ಚಿತ್ಕೇನ ಬಾಧ್ಯತೇ ॥ ೨೪ ॥

---

೨೦. ಸ್ನೇಹದ ಜಗಳದಿಂದ ಬೇರೆಯಾದ ಜಗಳವಾಡುತ್ತಿರಲಿಲ್ಲ. ಭೋಗಿಸುವುದರಿಂದ ಪದಾರ್ಥಗಳು ಕ್ಷಯವಾಗಿ ಅದರಲ್ಲಿ ಆ ಕ್ಷಯವೆಂಬ ಮಾತಿದ್ದಿತೇ ಹೊರತು ರೋಗಾದಿಗಳ ಹೆಸರಿನಲ್ಲಿರಲಿಲ್ಲ. ಹೆಂಗಸು ಬಂಜೆಯಾಗದೆ ಮಕ್ಕಳೊಂದಿಗರಾಗಿ ಯೋಗ್ಯರಾಗಿರುತ್ತಿದ್ದರು. ಯಾವಾಗಲೂ ಆ ಹೆಂಗಸರು ಅಲಂಕಾರ ವಿಲ್ಲದೆ ಇರುತ್ತಿರಲೇ ಇಲ್ಲ.

೨೧. ಅವನ ರಾಜ್ಯದಲ್ಲಿ ಕುರೂಪಿಗಳಾದವರೂ, ದುಃಖಿತರೂ, ಬಡವರೂ, ದುಷ್ಟರೂ ಇರಲಿಲ್ಲ. ವಿಧವೆಯರು ಇರಲಿಲ್ಲ. ಬಡವರಾದ ಜನರೂ ಇರಲೇ ಇಲ್ಲ.

೨೨. ಎಲ್ಲಾ ಕಡೆಯಲ್ಲಿಯೂ ದಾನಮಾಡುವವರು ಕಂಡುಬರುತ್ತಿದ್ದರೇ ಹೊರತು ದಾನ ತೆಗೆದುಕೊಳ್ಳುವವರು ಕಂಡುಬರುತ್ತಿರಲಿಲ್ಲ. ಪುಣ್ಯವಂತರೂ ಧನಿಕರೂ ಆದವರು ತಮ್ಮ ಹಣವನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಿದ್ದರು.

೨೩. ಎಲ್ಲಾ ಮನೆಗಳಲ್ಲಿಯೂ ರೂಪು ಯೌವನದಿಂದ ತುಬಿದ ಹೆಂಗಸರೇ ಕಾಣುತ್ತಿದ್ದರು. ಹಸುವಿನ ಹಾಲು, ತುಪ್ಪ, ಮೊಸರು, ಇವನ್ನು ಊಟ ಮಾಡುತ್ತ ಅವನ ರಾಜ್ಯದ ಜನರು ಮುಪ್ಪನ್ನೇ ಕಾಣದವರಾಗಿದ್ದರು.

೨೪. ಅವನ ದೇಶದಲ್ಲಿ ಯಾವಾಗಲೂ ಮಂಗಳ ಕೆಲಸಗಳೇ ನಡೆಯುತ್ತಿದ್ದವು. ವಧೆಯಾಗಲಿ, ಬಂಧಿಸುವುದಾಗಲಿ ಇರಲಿಲ್ಲ. ಮರಣ ಹಿಂಸೆಗಳೂ ಇರಲಿಲ್ಲ. ಒಬ್ಬರನ್ನು ಮತ್ತೊಬ್ಬರು ಬಾಧಿಸುತ್ತಲೂ ಇರಲಿಲ್ಲ.

ಋಣೀ ನ ದೃಶ್ಯತೇ ರಾಜ್ಞ ಧನಿನಸ್ಸಂತಿ ಸರ್ವತಃ ।
ಸಂತುಷ್ಟಾಃ ಸರ್ವಸಸ್ಯಾಢ್ಯಾಃ ಪ್ರಜಾಸ್ಸರ್ವತ್ರ ಪಾರ್ಥಿವ　　　　॥ ೨೫ ॥

ಕೇಳೀಕ್ಷುದಂಡಪ್ರಭವಶ್ಚ ದುಗ್ಧ
ರಸೋತಿಸುಸ್ವಾದುತರೋ ಗೃಹೇ ನೃಣಾಂ ।
ಸುಸ್ರಾವ ನಾರೀನರಯೋರ್ಹಿತಂ ವಚೋ
ನ ಚಾಪಹರ್ತಾಽಧ್ವನಿ ಗಚ್ಛತಾಂ ಸದಾ　　　　॥ ೨೬ ॥

ಪತಂತ್ಯಖಂಡಾ ನಭಸೋ ಯತಸ್ತತೋ
ಧಾರಾಶ್ಚ ಕರ್ಮಾದಿವಿಮಿಶ್ರಸರ್ಪಿಷಃ ।
ಸಮ್ಮಿಶ್ರಿತಾ ಶರ್ಕರಯಾ ಪಯಸ್ರುತಿಃ
ಸಮುದ್ರಸೂನೋಃ ಸ್ಮರಣಾನ್ಮುಖೇ ನೃಣಾಂ　　　　॥ ೨೭ ॥

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಸೌರಾಜ್ಯ ವರ್ಣನಂ ನಾಮ ನವಮೋಽಧ್ಯಾಯಃ

---

೨೫. ಆ ರಾಜ್ಯದಲ್ಲಿ ಸಾಲಗಾರನಿರಲಿಲ್ಲ. ಎಲ್ಲರೂ ಧನವಂತರಾಗಿಯೇ ಇದ್ದರು. ಎಲ್ಲರೂ ಸಂತೋಷಗೊಂಡಿರುತ್ತಿದ್ದರು. ಎಲ್ಲ ಸಸ್ಯಗಳೂ ಸರಿಯಾಗಿ ಬೆಳೆಯುತ್ತಿದ್ದವು. ಈ ರೀತಿ ಎಲ್ಲಾ ಕಡೆಯಲ್ಲಿಯೂ ಎಲ್ಲಾ ವಿಷಯದಲ್ಲಿಯೂ ಪ್ರಜೆಗಳು ಸುಖದಿಂದ ಇರುತ್ತಿದ್ದರು.

೨೬-೨೭. ಒಂದೊಂದು ಮನೆಯಲ್ಲಿಯೂ ಜನರು ಕಾಮಸುಖವನ್ನು ಅನುಭವಿಸುತ್ತಿದ್ದರು. ಅದು ಬಹು ರುಚಿಯಾಗಿ ಹಾಲಿನಂತಿರುತ್ತಿದ್ದಿತು. ಹೆಂಗಸರು ಗಂಡಸರು ಎಲ್ಲರೂ ಪ್ರಿಯವಾದ ಹಿತವಾದ ಮಾತನ್ನು ಆಡುತ್ತಿದ್ದರು. ಮಾರ್ಗದಲ್ಲಿ ಕಳ್ಳಕಾಕರ ಭಯವಿರಲಿಲ್ಲ. ಜಲಂಧರನನ್ನು ಸ್ಮರಿಸಿದೊಡನೆಯೇ ಅವರವರ ಕರ್ಮಗಳಿಗನುಗುಣವಾಗಿ ಸ್ಮರಿಸಿದ ಸ್ಥಳದಲ್ಲಿಯೇ ಹಾಲು, ತುಪ್ಪ, ಸಕ್ಕರೆಗಳಿಂದ ಕೂಡಿದ ಮಳೆಯು ಅವರವರ ಬಾಯಿಗೆ ಬಂದು ಬೀಳುತ್ತಿದ್ದಿತು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಾಲಂಧರೋಪಾಖ್ಯಾನದಲ್ಲಿ ಒಳ್ಳೆಯ ರಾಜ್ಯಭಾರ ವರ್ಣನವೆಂಬ ಒಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದಶಮೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

**ಇಂದ್ರಾದಿಭಿಸ್ತದಾ ದೇವೈಃ ಕಿಂ ಕೃತಂ ದ್ವಿಜಸತ್ತಮ ।**
**ಜಾಲಂಧರೇಣ ವಿಜಿತೈಃ ಸ್ವರ್ಗರಾಜ್ಯೇ ಹೃತೇ ಸತಿ ॥ ೧ ॥**

॥ ನಾರದ ಉವಾಚ ॥

**ಅಥ ತ್ಯಕ್ತ್ವಾ ದಿವಂ ದೇವಾಃ ಪ್ರಾಪುಸ್ತೇ ದುರ್ದಶಾಂ ಚಿರಂ ।**
**ನ ಪೀಯೂಷಂ ನೈವ ಯಜ್ಞಾನ್ಯಯುಃ ಸ್ಥಾನಂ ಸ್ವಯಂ ಭುವಃ ॥ ೨ ॥**

**ದದೃಶುರ್ಬ್ರಾಹ್ಮಭವನೇ ಬ್ರಹ್ಮಾಣಂ ಪರಮೇಷ್ಠಿನಂ ।**
**ಪ್ರಾಣಾಯಾಮೇನ ಯುಂಜಾನಂ ಮನಸ್ಸ್ವಂ ಪರಮಾತ್ಮನಿ ॥ ೩ ॥**

---

### ಹತ್ತನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು–ಎಲೈ ನಾರದನೇ! ಜಲಂಧರನು ದೇವತೆಗಳನ್ನು ಗೆದ್ದು ಸ್ವರ್ಗರಾಜ್ಯವನ್ನು ಕಿತ್ತುಕೊಂಡಮೇಲೆ ಆ ಇಂದ್ರಾದಿ ದೇವತೆಗಳೇನು ಮಾಡಿದರು?

೨. ನಾರದನು ಹೇಳಿದನು–ಆ ದೇವತೆಗಳು ಸ್ವರ್ಗವನ್ನು ಬಿಟ್ಟನಂತರ ಬಹುಕಾಲ ಕಷ್ಟದೆಶೆಯನ್ನು ಹೊಂದಿದರು. ಅಮೃತಪಾನವನ್ನು ಮಾಡಲಿಲ್ಲ. ಯಜ್ಞದ ಹವಿಸ್ಸನ್ನು ತಿನ್ನಲಿಲ್ಲ. ಹೀಗೆ ಕಷ್ಟಪಟ್ಟು ಕಡೆಗೆ ಬ್ರಹ್ಮನ ಲೋಕಕ್ಕೆ ಹೋದರು.

೩. ಹೀಗೆ ಬ್ರಹ್ಮನ ಬಳಿಗೆ ಹೋಗಿ ಅವನ ಮನೆಯಲ್ಲಿ ಪ್ರಾಣಾಯಾಮ ಮಾಡುತ್ತ ತನ್ನ ಮನಸ್ಸನ್ನು ಪರಮಾತ್ಮನಲ್ಲಿ ಇಟ್ಟುಕೊಂಡಿರುವ ಪರಮ ಉಚ್ಚನಾದ ಬ್ರಹ್ಮನನ್ನು ನೋಡಿದರು

ತೇ ತುಷ್ಟುವುಸ್ಸುರಾಸ್ಸರ್ವೇ ವಾಗ್ಭಿರರ್ಥ್ಯಾಭಿರಾದೃತಾಃ ।
ತತಃ ಪ್ರಸನ್ನೋ ಭಗವಾನ್ ಕಿಂ ಕರೋಮೀತಿ ಚಾಬ್ರವೀತ್ ॥ ೪ ॥

ತತೋ ನಿವೇದಯಾಂಚಕ್ರುರ್ಬ್ರಹ್ಮಣೇ ವಿಬುಧಾಃ ಪುನಃ ।
ಜಾಲಂಧರಸ್ಯ ಸಕಲಂ ತಥಾ ನಿಜಪರಾಭವಂ ॥ ೫ ॥

ಕ್ಷಣಂ ಧ್ಯಾತ್ವಾ ಯಯೌ ಬ್ರಹ್ಮಾ ಕೈಲಾಸಂ ತ್ರಿದಶೈಸ್ಸಹ ।
ತಸ್ಯ ಶೈಲಸ್ಯ ಪಾರ್ಶ್ವೇ ತೇ ವೈಚಿತ್ರ್ಯೇಣ ಸಮಾಕುಲಾಃ ॥
ಸ್ಥಿತಾ ಸಂತುಷ್ಟುವುರ್ದೇವಾಃ ಬ್ರಹ್ಮಶಕ್ರಪುರೋಗಮಾಃ ॥ ೬ ॥

॥ ದೇವಾ ಊಚುಃ ॥

ನಮೋ ಭವಾಯ ಶರ್ವಾಯ ನೀಲಗ್ರೀವಾಯ ತೇ ನಮಃ ।
ನಮಃ ಸ್ಥೂಲಾಯ ಸೂಕ್ಷ್ಮಾಯ ಬಹುರೂಪಾಯ ತೇ ನಮಃ ॥ ೭ ॥

---

೪. ಆಗ ದೇವತೆಗಳೆಲ್ಲರೂ ಅರ್ಥದಿಂದ ಕೂಡಿರುವ ಸ್ತೋತ್ರಗಳಿಂದ ಆತನನ್ನು ಸ್ತುತಿಸಿದರು. ಅನಂತರ ಪ್ರಸನ್ನನಾದ ಭಗವಂತನಾದ ಬ್ರಹ್ಮನು ನಿಮಗೆ ಏನು ಮಾಡಬೇಕು? ಎಂದು ಕೇಳಿದನು.

೫. ಆಗ ಆ ದೇವತೆಗಳು ಜಲಂಧರನ ವಿಷಯವನ್ನೂ ತಮ್ಮ ಸೋಲನ್ನೂ ಆ ಬ್ರಹ್ಮನಿಗೆ ವಿಜ್ಞಾಪಿಸಿಕೊಂಡರು.

೬. ಆಗ ಬ್ರಹ್ಮನು ಕ್ಷಣಕಾಲ ಯೋಚಿಸಿ ಆ ದೇವತೆಗಳನ್ನೂ ಕರೆದುಕೊಂಡು ಕೈಲಾಸಕ್ಕೆ ಹೋದನು. ಆ ಪರ್ವತದ ಪಾರ್ಶ್ವದಲ್ಲಿ ನಿಂತು ಅಲ್ಲಿನ ಆಶ್ಚರ್ಯವನ್ನು ನೋಡುತ್ತ ನಿಂತುಕೊಂಡು ಅವರೆಲ್ಲರೂ ಶಿವನನ್ನು ಕುರಿತು ಸ್ತೋತ್ರಮಾಡಿದರು.

೭. ದೇವತೆಗಳು ಹೇಳಿದರು– ಎಲೈ ಭವನೇ! ನಿನಗೆ ನಮಸ್ಕಾರವು. ಶರ್ವನೇ! ನಿನಗೆ ನಮಸ್ಕಾರವು. ಕಪ್ಪಗಿರುವ ಕತ್ತುಳ್ಳವನೇ! ನಿನಗೆ ನಮಸ್ಕಾರವು. ಬಹು ದೊಡ್ಡವನಾಗಿರುವವನೇ! ನಿನಗೆ ನಮಸ್ಕಾರವು. ಸೂಕ್ಷ್ಮರೂಪದಿಂದ ಇರುವವನೇ! ನಿನಗೆ ನಮಸ್ಕಾರವು. ಅನೇಕ ರೂಪಗಳುಳ್ಳವನೇ! ನಿನಗೆ ನಮಸ್ಕಾರವು.

|| ನಾರದ ಉವಾಚ ||

ಇತಿ ಸರ್ವಮುಖೋ ಭೂತ್ವಾ ವಾಣೀಮಾಕರ್ಣ್ಯ ಶಂಕರಃ |
ಪ್ರೋವಾಚ ನಂದಿನಂ ದೇವಾನಾನಯಸ್ವೇತಿ ಸತ್ವರಂ || ೮ ||

ಶ್ರುತ್ವಾ ಶಂಭೋರ್ವಚೋ ದೇವಾ ಹ್ಯಾಹೂತಾ ನಂದಿನಾ ದ್ರುತಂ |
ಪ್ರವಿಶ್ಯಾಂತಃಪುರೇ ದೇವಾ ದದೃಶುರ್ವಿಸ್ಮಿತೇಕ್ಷಣಾಃ || ೯ ||

ತತ್ರಾಸನೇ ಸಮಾಸೀನಂ ಶಂಕರಂ ಲೋಕಶಂಕರಂ |
ಗಣಕೋಟಿಸಹಸ್ರೈಸ್ತು ಸೇವಿತಂ ಭಕ್ತಿಶಾಲಿಭಿಃ || ೧೦ ||

ನಗ್ನೈರ್ವಿರೂಪೈಃ ಕುಟಿಲೈಃ ಜಟಿಲೈರ್ಧೂಳಿಧೂಸರೈಃ |
ಪ್ರಣಿಪತ್ಯಾಗ್ರತಃ ಪ್ರಾಹ ಸಹ ದೇವೈಃ ಪಿತಾಮಹಃ || ೧೧ ||

|| ಬ್ರಹ್ಮೋವಾಚ ||

ಸುಖರಾಗೋ ಯಥಾऽಸ್ಯಾऽऽಸೀಚ್ಛಕ್ರಃ ಸೋಽಯಂ ವೃಥಾಗತಃ |
ಕೃಪಾಂ ಕುರು ಮಹಾದೇವ ಶರಣಾಗತವತ್ಸಲ || ೧೨ ||

---

೮. ನಾರದನು ಹೇಳಿದನು—ಆ ಶಂಕರನು ದೇವತೆಗಳ ಈ ಸ್ತೋತ್ರವನ್ನು ಕೇಳಿ ನಂದಿಯನ್ನು ಕುರಿತು ದೇವತೆಗಳನ್ನು ಜಾಗ್ರತೆಯಾಗಿ ಕರೆದುಕೊಂಡು ಬಾ ಎಂದು ಆಜ್ಞಾಪಿಸಿದನು.

೯–೧೧. ನಂದಿಯು ಪರಮೇಶ್ವರನ ಈ ಮಾತನ್ನು ಕೇಳಿ ಆ ದೇವತೆಗಳನ್ನು ಕರೆದನು. ಅದರಂತೆ ದೇವತೆಗಳು ಒಳಗೆ ಹೋಗಿ ನೋಡಿ ಆಶ್ಚರ್ಯಪಟ್ಟರು. ಅಲ್ಲಿ ಲೋಕಕ್ಕೆಲ್ಲಾ ಸುಖವನ್ನು ಕೊಡತಕ್ಕ ಶಂಕರನು ಆಸನದಲ್ಲಿ ಕುಳಿತಿದ್ದನು. ಬೆತ್ತಲೆಯುರುವ, ನಾನಾಬಗೆಯಾದ ಆಕಾರಗಳುಳ್ಳ, ಜಟೆಯನ್ನು ಧರಿಸಿರುವ, ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿರುವ, ಭಕ್ತಿಯಿಂದ ಕೂಡಿದ ಗಣಗಳು ಸಾವಿರಗಟ್ಟಲೆಯಲ್ಲಿಯೂ, ಕೋಟಿಗಟ್ಟಲೆಯಲ್ಲಿಯೂ ಆವರಿಸಿಕೊಂಡು ಸೇವಿಸುತ್ತಿರುವ, ಅಂತಹ ಸ್ವಾಮಿಯನ್ನು ಎದುರಿನಲ್ಲಿ ನೋಡಿ ಆ ದೇವತೆಗಳೊಡನೆ ನಮಸ್ಕರಿಸಿ ಬ್ರಹ್ಮನು ಇಂತೆಂದನು.

೧೨. ಬ್ರಹ್ಮನು ಹೇಳಿದನು– ಎಲೈ ಶಿವನೇ! ಈ ಇಂದ್ರನು ಯಾವಾಗಲೂ ಸುಖದಿಂದ ಉಲ್ಲಾಸವಾಗಿದ್ದವನು ಇಗ ಹೀನ ಸ್ಥಿತಿಯನ್ನು ಹೊಂದಿದ್ದಾನೆ. ಶರಣಾಗತರನ್ನು ಕಾಪಾಡುವ ಮಹಾಶಿವನೇ ! ಈಗ ನೀನು ಅವನ ಮೇಲೆ ಕೃಪೆಯಿಡು.

॥ ನಾರದ ಉವಾಚ ॥

ತತ ಉಚ್ಚೈರ್ವಿಭೋರ್ಹಾಸ್ಯಂ ಶ್ರುತ್ವಾ ಬ್ರಹ್ಮಾ ಪಿನಾಕಿನಃ ।
ಉವಾಚ ದೇವದೇವೇಶಂ ಪಶ್ಯಾವಸ್ಥಾಂ ದಿವೌಕಸಾಂ ॥ ೧೩ ॥

ತತಸ್ಸರ್ವೇಶ್ವರೋ ಜ್ಞಾತ್ವಾ ಬ್ರಹ್ಮಣೋ ಮನಸೇಪ್ಸಿತಂ ।
ಶಕ್ರಸ್ಯ ಮಾನಭಂಗಂ ಚ ದೇವಾರ್ಥೇ ಪರಮೇಶ್ವರಂ ।
ಪ್ರೇಮ್ಣಾ ಭವಾನ್ಯಾ ವಿಜ್ಞಪ್ತೋ ನೃಪ ಪ್ರಾಹ ವಚೋ ಹರಃ ॥ ೧೪ ॥

॥ ಹರ ಉವಾಚ ॥

ವಿಷ್ಣುನಾ ನ ಹತೋ ಯೋ ಹಿ ಸ ಕಥಂ ಹನ್ಯತೇ ಮಯಾ ।
ಪೂರ್ವಸೃಷ್ಟಾನ್ಯಾಯುಧಾನಿ ವಜ್ರಾದೀನಿ ಪಿತಾಮಹ ॥ ೧೫ ॥

ತೈಶ್ಯಸ್ತ್ರೈರ್ನೈವ ವಧ್ಯೋಽಸೌ ಬಲೀ ಜಾಲಂಧರೋಽಸುರಃ ।
ಹೇತಿಭಿಃ ಪೂರ್ವಸಂಸೃಷ್ಟೈಃ ಸ ಮಯಾಪಿ ನ ಹನ್ಯತೇ ॥
ದೇವಾಃ ಕುರ್ವಂತು ಶಸ್ತ್ರಂ ಹಿ ಮಮುಪ್ರಾಣಸಹಂ ದೃಢಂ ॥ ೧೬ ॥

---

೧೩. ನಾರದನು ಹೇಳಿದನು– ಈ ಮಾತನ್ನು ಕೇಳಿ ವಿಭುವಾದ ಶಂಕರನು ಗಟ್ಟಿಯಾಗಿ ನಕ್ಕನು. ಇದನ್ನು ನೋಡಿ ಬ್ರಹ್ಮನು ದೇವದೇವನೇ ! ಈ ದೇವತೆಗಳ ದುರವಸ್ಥೆಯನ್ನು ಸ್ವಲ್ಪ ಗಮನಿಸು ಎಂದನು.

೧೪. ಆಗ ಸರ್ವೇಶ್ವರನಾದ ಆ ಶಂಭುವು ಬ್ರಹ್ಮನ ಇಷ್ಟವನ್ನು ತಿಳಿದುಕೊಂಡನು. ಇಂದ್ರನಿಗಾದ ಅವಮಾನವನ್ನೂ ತಿಳಿದನು. ಮತ್ತು ಪಾರ್ವತಿಯು ದೇವತೆಗಳ ವಿಷಯದಲ್ಲಿ ಕನಿಕರಪಟ್ಟು ಈಶ್ವರನಲ್ಲಿರುವ ಪ್ರೀತಿಯಿಂದ ಅವರನ್ನು ಉದ್ಧರಿಸೆಂದು ಹೇಳಲು ಅದನ್ನು ಕೇಳಿ ಅನಂತರ ಹೀಗೆಂದನು.

೧೫–೧೬. ಹರನು ಹೇಳಿದನು– ವಿಷ್ಣುವಿನಿಂದಲೇ ಕೊಲ್ಲುವುದಕ್ಕೆ ಆಗದವನನ್ನು ನಾನು ಕೊಲ್ಲುವುದಕ್ಕೆ ಸಾಧ್ಯವೇ ? ವಜ್ರಾಯುಧಗಳೇ ಮುಂತಾದ ಆಯುಧಗಳು ಪೂರ್ವದಲ್ಲಿ ಮಾಡಲ್ಪಟ್ಟುವು. ಆ ಶಸ್ತ್ರಗಳಿಂದ ಬಲಿಷ್ಠನಾದ, ಆ ಜಲಂಧರನನ್ನು ಕೊಲ್ಲುವುದಕ್ಕಾಗುವುದಿಲ್ಲ. ಹಿಂದೆ ನಿರ್ಮಿತವಾದ ಆಯುಧಗಳಿಂದಲೇ ಆಗಲಿ ನಾನೂ ಕೊಲ್ಲಲಾರೆನು. ಆದ್ದರಿಂದ ದೇವತೆಗಳೆಲ್ಲರೂ ಸೇರಿ ನನ್ನ ಬಲವನ್ನು ತಡೆಯುವಂತಹ ಗಟ್ಟಿಯಾದ ಆಯುಧವನ್ನು ಮಾಡಲಿ.

|| ನಾರದ ಉವಾಚ ||

ಶಂಭೋರಿತ್ಯುತ್ತರಂ ಶ್ರುತ್ವಾ ಬ್ರಹ್ಮೋವಾಚಾಥ ಶಂಕರಂ || ೧೭ ||

|| ಬ್ರಹ್ಮೋವಾಚ ||

ಸ್ವಯಂ ಕುರು ಮಹಾಶಸ್ತ್ರಂ ತ್ವಂ ವೇತ್ಥ ಸ್ವಾತ್ಮನೋ ಬಲಂ || ೧೮ ||

|| ನಾರದ ಉವಾಚ ||

ಇತಿ ತಸ್ಯ ವಚಶ್ಶ್ರುತ್ವಾ ಪ್ರತ್ಯುವಾಚ ಮಹೇಶ್ವರಃ || ೧೯ ||

|| ಹರ ಉವಾಚ ||

ಬ್ರಹ್ಮನ್ವಿಮುಂಚ ತೇಜಸ್ಸ್ವಂ ಕ್ರೋಧಯುಕ್ತಂ ಸುರೈಸ್ಸಹ || ೨೦ ||

|| ನಾರದ ಉವಾಚ ||

ತತಸ್ತೇಜೋ ಮುಮೋಚಾಥ ಬ್ರಹ್ಮಾ ಬ್ರಹ್ಮಾಸ್ತ್ರಸೂಚಕಃ ।
ರುದ್ರಸ್ತ್ರಿಣೇತ್ರಜಂ ತೇಜಃ ತತೋ ನಿರ್ಮುಕ್ತವಾನ್ಸ್ವಯಂ || ೨೧ ||

---

೧೭. ನಾರದನು ಹೇಳಿದನು– ಶಂಭುವಿನ ಈ ಉತ್ತರವನ್ನು ಕೇಳಿ ಬ್ರಹ್ಮನು ಅವನನ್ನು ಕುರಿತು ಇಂತೆಂದನು.

೧೮. ಬ್ರಹ್ಮನು ಹೇಳಿದನು– ಎಲೈ ಶಂಕರನೇ ! ನಿನ್ನ ಬಲವು ನಿನಗೇ ಗೊತ್ತಿರುವುದರಿಂದ ನೀನೇ ಸ್ವಂತವಾಗಿ ಶಸ್ತ್ರವನ್ನು ಮಾಡಿಕೋ.

೧೯. ನಾರದನು ಹೇಳಿದನು–ಬ್ರಹ್ಮನ ಈ ಮಾತನ್ನು ಕೇಳಿ ಮಹೇಶ್ವರನು ಮತ್ತೆ ಇಂತೆಂದನು.

೨೦. ಹರನು ಹೇಳಿದನು– ಎಲೈ ಬ್ರಹ್ಮನೇ ! ನೀನು ದೇವತೆಗಳೊಡನೆ ಸೇರಿಕೊಂಡು ಮಹಾಕೋಪವನ್ನು ಹೊಂದಿ ನಿನ್ನ ತೇಜಸ್ಸನ್ನು ಹೊರಗೆ ಬಿಡು.

೨೧. ನಾರದನು ಹೇಳಿದನು– ಆಗ ಬ್ರಹ್ಮನು ಬ್ರಹ್ಮಾಸ್ತ್ರವನ್ನು ನಿರ್ಮಿಸುವಂತಹ ತೇಜಸ್ಸನ್ನು ಬಿಟ್ಟನು. ರುದ್ರನೂ ಕೂಡ ತನ್ನ ಮೂರನೆಯ ಕಣ್ಣಿನಿಂದ ತನ್ನ ತೇಜಸ್ಸನ್ನೂ ಹೊರಕ್ಕೆ ಬಿಟ್ಟನು.

ದೇವಾಶ್ಚ ಮುಮುಚುಸ್ಸರ್ವೇ ಸಕ್ರೋಧಂ ತೇಜಸಾಂ ಚಯಂ ।
ಅತ್ರಾಂತರೇ ಸ್ಮೃತಃ ಪ್ರಾಪ್ತೋ ಹರೇಣ ಮಧುಸೂದನಃ ॥
ಕಿಂ ಕರೋಮೀತಿ ತೇನೋಕ್ತಃ ಶಿವಃ ಪ್ರಾಹ ಜನಾರ್ದನಂ ॥ ೨೨ ॥

॥ ಹರ ಉವಾಚ ॥

ವಿಷ್ಣೋ ಜಾಲಂಧರಃ ಕಸ್ಮಾನ್ನ ಹತಃ ಸಂಗರೇ ತ್ವಯಾ ।
ಕಥಂ ಸುರಾನ್ಪರಿತ್ಯಜ್ಯ ಕ್ಷೀರಾಬ್ಧಿಂ ಶಯಿತುಂ ಗತಃ ॥ ೨೩ ॥

॥ ವಿಷ್ಣುರುವಾಚ ॥

ಯದಿ ತಂ ಹನ್ಮಿ ದೇವೇಶ ಶ್ರೀಃ ಕಥಂ ಮಮ ವಲ್ಲಭಾ ।
ತಸ್ಮಾತ್ತ್ವಂ ಪಾರ್ವತೀಕಾಂತ ಜಹಿ ಜಾಲಂಧರಂ ರಣೇ ॥ ೨೪ ॥

॥ ನಾರದ ಉವಾಚ ॥

ತೇಜಸ್ತ್ವಂ ಕ್ರೋಧಜಂ ಮುಂಚೇತ್ಯುಕ್ತಶ್ಚರ್ವೇಣ ಕೇಶವಃ ।
ಮುಮೋಚ ವೈಷ್ಣವಂ ತೇಜಃ ತತ್ಸರ್ವಂ ಸಮವರ್ಧತ ॥
ತೇಜಃ ಪ್ರವೃದ್ಧಂ ತದ್ದೃಷ್ಟ್ವಾ ವ್ಯಾಪಕಂ ಪ್ರಾಹ ಕೇಶವಂ ॥ ೨೫ ॥

---

೨೨. ದೇವತೆಗಳೂ ಕೂಡ ತಮ್ಮ ತಮ್ಮ ಕೋಪಗಳನ್ನು ಹೊಂದಿ ತೇಜಸ್ಸನ್ನು ಈಚೆಗೆ ಬಿಟ್ಟರು. ಇಷ್ಟರಲ್ಲಿ ಶಂಭುವು ವಿಷ್ಣುವನ್ನು ಸ್ಮರಿಸಲು ಆತನೂ ಬಂದನು. ಬಂದ ಆ ಜನಾರ್ದನನು ನಾನು ಏನು ಮಾಡಬೇಕೆಂದು ಶಿವನನ್ನು ಕೇಳಿದನು.

೬೩. ಹರನು ಹೇಳಿದನು– ಎಲೈ ವಿಷ್ಣುವೇ ! ಜಲಂಧರನನ್ನು ನೀನೇಕೆ ಕೊಲ್ಲಲಿಲ್ಲ ? ಸುರರನ್ನು ಬಿಟ್ಟು ನೀನೇಕೆ ಕ್ಷೀರಸಮುದ್ರದಲ್ಲಿ ಮಲಗಲು ಹೋದೆ ?

೨೪. ವಿಷ್ಣುವು ಹೇಳಿದನು– ಎಲೈ ಶಂಕರನೇ ! ನಾನು ಅವನನ್ನು ಕೊಂದರೆ ಅವನ ಅಕ್ಕನಾದ ಲಕ್ಷ್ಮಿಯು ನನ್ನಲ್ಲಿ ಹೇಗೆ ಪ್ರೀತಿಯಿಂದ ಇರುವಳು? ಆದ್ದರಿಂದಲೇ ನೀನೇ ಅವನನ್ನು ಯುದ್ಧದಲ್ಲಿ ಕೊಂದುಹಾಕು.

೨೫. ಎಲೈ ವಿಷ್ಣುವೇ ! ನೀನು ಕೋಪದಿಂದ ನಿನ್ನ ತೇಜಸ್ಸನ್ನು ಬಿಡು. ಎನ್ನಲು ಆ ವಿಷ್ಣುವು ಕೋಪದಿಂದ ಕೂಡಿ ತನ್ನ ತೇಜಸ್ಸನ್ನು ಬಿಟ್ಟನು. ಆ ವೈಷ್ಣವ ತೇಜಸ್ಸು ಬಹಳವಾಗಿದ್ದಿತು. ಈ ತೇಜಸ್ಸುಗಳೆಲ್ಲವೂ ಎಲ್ಲಾ ಕಡೆಯನ್ನೂ ವ್ಯಾಪಿಸಿರುವುದನ್ನು ನೋಡಿ ಶಂಕರನು ಕೇಶವನನ್ನು ಕುರಿತು ಇಂತೆಂದನು.

॥ ಶಂಕರ ಉವಾಚ ॥

ಏತೇನ ತೇಜಸಾ ಶೀಘ್ರಂ ಮಮಾಸ್ತ್ರಂ ಕರ್ತುಮರ್ಹಥ ॥ ೨೬ ॥

॥ ನಾರದ ಉವಾಚ ॥

ವಿಶ್ವಕರ್ಮಾದಯಸ್ತೇ ಚ ಶ್ರುತ್ವಾ ಶಂಕರಭಾಷಿತಂ ।
ನಿರೀಕ್ಷ್ಯ ಚ ತದಾನ್ಯೋನ್ಯಂ ಕಿಂ ಕುರ್ಮ ಇತಿ ಶಂಕಿತಾಃ ॥ ೨೭ ॥

ದೃಷ್ಟ್ವಾ ತೂಷ್ಣೀಂ ಸ್ಥಿತಾಂಸ್ತಾಂಶ್ಚ ಜ್ಞಾತ್ವಾ ತಾನ್ಮನಸಿ ಸ್ಥಿತಂ ।
ತದಾಹ ಭಗವಾನ್ಬ್ರಹ್ಮಾ ಅನಾಲೋಕ್ಯಂ ಹಿ ದೈವತೈಃ ॥ ೨೮ ॥

ಸೋಢುಂ ನ ಶಕ್ಯಾಸ್ತೇ ತೇಜೋ ಧರ್ತುಂ ಕೇನ ಚ ಶಕ್ಯತೇ ।
ತತಃ ಪ್ರಹಸ್ಯ ಭಗವಾನುತ್ಪತ್ಯೋಪರಿ ತೇಜಸಃ ॥ ೨೯ ॥

ವಾಮಾಂಘ್ರಿಪಾರ್ಷ್ಣಿನಾ ಶಂಭುರ್ನನರ್ತ ಭ್ರಮರೀವ ಯಃ ।
ಅಥ ಚಕ್ರಂ ಸಮುತ್ಪನ್ನಂ ಶಂಭೋರ್ನರ್ತನ ಮರ್ದನಾತ್ ॥ ೩೦ ॥

---

೨೬. ಶಂಕರನು ಹೇಳಿದನು- ಈ ತೇಜಸ್ಸಿನಿಂದ ಬೇಗನೆ ನನಗೆ ಒಂದು ಅಸ್ತ್ರವನ್ನು ಮಾಡಿಕೊಡಿ.

೨೭. ನಾರದನು ಹೇಳಿದನು—ವಿಶ್ವಕರ್ಮನೇ ಮುಂತಾದವರು ಶಂಕರನ ಈ ಮಾತನ್ನು ಕೇಳಿ ಆಗ ಒಬ್ಬರನ್ನು ಒಬ್ಬರು ನೋಡುತ್ತ ಏನುಮಾಡಬೇಕೆಂದು ಸಂದೇಹಪಡುತ್ತಿದ್ದರು.

೨೮–೩೦. ಅವರೆಲ್ಲರೂ ಸುಮ್ಮನಿರುವುದನ್ನು ನೋಡಿ ಅವರ ಮನಸ್ಸಿನಲ್ಲಿ ಇರುವುದನ್ನು ತಿಳಿದ ಬ್ರಹ್ಮನು ಶಂಕರನನ್ನು ಕುರಿತು ಎಲೈ ಶಂಕರನೇ ! ದೇವತೆಗಳು ಆ ತೇಜಸ್ಸನ್ನೇ ನೋಡಲಾರರು. ಅದನ್ನು ಹೇಗೆ ಅವರು ಸಹಿಸಿಯಾರು ? ಸಹಿಸುವುದಕ್ಕೆ ಅವರಿಂದ ಸಾಧ್ಯವಿಲ್ಲ. ಹೀಗಿರುವಲ್ಲಿ ಹಿಡಿಯಲು ಎಂತು ಶಕ್ತರಾದಾರು ? ಆಗ ಶಿವನು ನಕ್ಕು ನೆಗೆದು ಆ ತೇಜಸ್ಸಿನ ಮೇಲೆ ನಿಂತು ಎಡಗಾಲಿನ ಹಿಮ್ಮಡಿಯಿಂದ ಚಕ್ರಾಕಾರವಾಗಿ ಕುಣಿದನು. ಅಗ ಆ ಶಂಭುವಿನ ಕುಣಿತದ ತುಳಿತದಿಂದ ಚಕ್ರವು ಉಂಟಾಯಿತು.

ಅರಲಕ್ಷತ್ರಯೋಪೇತಮುಷ್ಠಿಕೋಟಿಸಮಾಕುಲಂ ।
ಶರ್ವಾಂಘ್ರಿಕರ್ಷಣಾತ್ತಸ್ಯ ತೇಜಸೋ ನಿಸ್ಸೃತಾಃ ಕಣಾಃ ॥ ೩೧ ॥

ವಿಶ್ವಕರ್ಮಾ ಚ ತೈರ್ವಜ್ರಂ ವಿಮಾನಾನಿ ಚ ನಿರ್ಮಮೇ ।
ತತಸ್ತೇ ನಿರ್ಜರಾ ಭೀತ್ಯಾ ದೃಷ್ಟ್ವಾ ಚಕ್ರಂ ಸುದರ್ಶನಂ ॥ ೩೨ ॥

ತ್ರಾಹಿ ತ್ರಾಹೀತಿ ದೇವೇಶಂ ಪ್ರತ್ಯೂಚುಸ್ತೇ ಸುರಾ ನೃಪ ॥
ಪೃಥ್ವೀಕಾಠಿಣ್ಯಮಾದಾಯ ಲೋಹಾನಾಮಪಿ ತೇಜಸಾಂ ॥ ೩೩ ॥

ಯದ್ವಿಶ್ವಕರ್ಮಣಾ ಕೀಲಂ ಕೃತಂ ಭಸ್ಮೀಕೃತಂ ಚ ತತ್ ।
ಸೃಷ್ಟೇನ ತೇನ ಚಕ್ರೇಣ ದಗ್ಧಃ ಕಾಲೋಽಪತತ್ ಕ್ಷಿತೌ ॥ ೩೪ ॥

ತತಸ್ತದ್ಬ್ರಹ್ಮಣೋ ಹಸ್ತೇ ದದೌ ಚಕ್ರಂ ಸ ಧೂರ್ಜಟಿಃ ।
ಚಕ್ರಾರ್ಚಿರ್ಭಿರ್ವಿಧೇಃ ಕೂರ್ಚಂ ದಗ್ಧಂ ದೃಷ್ಟ್ವಾಂಬಿಕಾಪತಿಃ ॥ ೩೫ ॥

---

೩೧. ಆ ಚಕ್ರವು ಮೂರುಲಕ್ಷ ಹಾರೆ ಕಾಲುಗಳುಳ್ಳದ್ದಾಗಿಯೂ, ಕೋಟಿ ಮೂಳೆಗಳ ಅಂಚುಗಳುಳ್ಳದ್ದಾಗಿಯೂ ಆಯಿತು. ಈಶ್ವರನು ಕಾಲುಗಳನ್ನು ತೆಗೆಯಲು ಅದರ ತೇಜಸ್ಸಿನಿಂದ ಕಿಡಿಗಳು ಹೊರಹೊಮ್ಮಿದುವು.

೩೨–೩೪. ವಿಶ್ವಕರ್ಮನು ಆ ಉಳಿದ ಕಣಗಳಿಂದ ವಿಮಾನಗಳನ್ನೂ, ವಜ್ರಾಯುಧವನ್ನೂ ಮಾಡಿದನು. ಆಗ ಆ ದೇವತೆಗಳು ಆ ಸುದರ್ಶನ ಚಕ್ರವನ್ನು ನೋಡಿ ಹೆದರಿ ಕಾಪಾಡು, ಕಾಪಾಡು ಎಂದು ಆ ದೇವದೇವನಾದ ಈಶ್ವರನನ್ನು ಕುರಿತು ಬೇಡಿಕೊಂಡರು. ಭೂಮಿಯ ಕಠಿಣತೆಯನ್ನೂ ಲೋಹಗಳ ತೇಜಸ್ಸನ್ನೂ ತೆಗೆದುಕೊಂಡು ವಿಶ್ವಕರ್ಮನು ಆ ಚಕ್ರಕ್ಕೆ ಒಂದು ಚೀಲವನ್ನು ಒರೆಯನ್ನು ಮಾಡಿ ಹಾಕಲು ಆ ಚೀಲವು ಕ್ಷಣಕಾಲದಲ್ಲಿಯೇ ಸುಟ್ಟು ಭೂಮಿಯಲ್ಲಿ ಬಿದ್ದಿತು.

೩೫–೩೬. ಅನಂತರ ಆ ಚಕ್ರವನ್ನು ಶಿವನು ಬ್ರಹ್ಮನ ಕೈಯಲ್ಲಿ ಕೊಡಲು ಆ ಚಕ್ರದ ತೇಜಸ್ಸಿನಿಂದ ಅವನ ಗಡ್ಡದ ಕೂದಲು ಉರಿಯುತ್ತಿರುವುದನ್ನು

ಹಸಿತ್ವಾ ಬ್ರಹ್ಮಣೋ ಹಸ್ತಾದ್ಗ್ರಹೀತ್ವಾ ಸತ್ವರರ ಶಿವಃ ।
ದಧೌ ಕಕ್ಷಾಪುಟೇ ಚಕ್ರಂ ನಿಧಾನಂ ನಿರ್ಧನೋ ಯಥಾ ॥ ೩೬ ॥

ತತೋ ನ ದೃಶ್ಯತೇ ಚಕ್ರಂ ಶಿವಕಕ್ಷಾಪುಟೇ ಸ್ಥಿತಂ ।
ಮಹಾಮೂರ್ಖಸ್ಯ ಯದ್ದತ್ತಂ ದಾನಂ ತಸ್ಯ ಫಲಂ ಯಥಾ ॥ ೩೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಸರ್ವದೇವತೇಜೋಮಯ ಚಕ್ರೋತ್ಪತ್ತಿರ್ನಾಮ ದಶಮೋಽಧ್ಯಾಯಃ

---

ನೋಡಿ ಶಿವನು ನಗುತ್ತಾ ಅವನ ಕೈಯ್ಯಿಂದ ಅದನ್ನು ಜಾಗ್ರತೆಯಾಗಿ ತೆಗೆದುಕೊಂಡು ತನ್ನ ಕಂಕುಳಲ್ಲಿ ಬಡವನು ತನಗೆ ಸಿಕ್ಕಿದ ನಿಧಿಯನ್ನು ಇರುಕಿಕೊಳ್ಳುವಂತೆ ಇರುಕಿಕೊಂಡನು.

೩೭. ಅನಂತರ ಆ ಚಕ್ರವು ಮಹಾಮೂರ್ಖನಿಗೆ ಕೊಟ್ಟದಾನವು ನಿಷ್ಫಲವಾಗಿ ಕಾಣದಂತೆ ಆಗುವ ಹಾಗೆ ಶಿವನ ಕಂಕುಳಲ್ಲಿ ಕಾಣಲೇ ಇಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರನ ಕಥೆಯಲ್ಲಿ ಸರ್ವದೇವತೇಜೋಮಯವಾದ ಚಕ್ರೋತ್ಪತ್ತಿ ಎಂಬ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಾದಶೋಽಧ್ಯಾಯಃ ॥



॥ ನಾರದ ಉವಾಚ ॥

ಅತ್ರಾಂತರೇ ಮಯಾ ಗತ್ವಾ ಕಥಿತಂ ಸಿಂಧುಸೂನವೇ ।
ತ್ವಾಂ ಹಂತುಂ ಸರ್ವವೀರೇಶ ಪ್ರತಿಜ್ಞಾ ಶಂಭುನಾ ಕೃತಾ ॥ ೧ ॥

ಶ್ರುತ್ವಾ ಸ ಮದ್ವಚೋ ರಾಜನ್ ತತಃ ಪಪ್ರಚ್ಛ ಸೋಽಸುರಃ ॥ ೨ ॥

॥ ಜಾಲಂಧರ ಉವಾಚ ॥

ಕಿಮಸ್ತಿ ಶೂಲಿನೋ ಗೇಹೇ ರತ್ನಜಾತಂ ಮಹಾಮತೇ ।
ತನ್ಮಮಾಚಕ್ಷ್ವ ಸಕಲಂ ನಾಸ್ತಿ ಯುದ್ಧಂ ನಿರಾಮಿಷಂ ॥ ೩ ॥

---

## ಹನ್ನೊಂದನೆಯ ಅಧ್ಯಾಯವು

೧-೨. ನಾರದನು ಹೇಳಿದನು–ಇಷ್ಟರೊಳಗೆ ನಾನು ಹೋಗಿ ಜಲಂಧರನಿಗೆ ಎಲೈ ವೀರಾಗ್ರಣಿಯೇ! ನಿನ್ನನ್ನು ಕೊಲ್ಲುವುದಕ್ಕೆ ಶಂಭುವು ಪ್ರತಿಜ್ಞೆ ಮಾಡಿರುವನು ಎಂದೆನು. ಈ ನನ್ನ ಮಾತನ್ನು ಕೇಳಿ ಆ ದೈತ್ಯನು ಹೀಗೆ ಕೇಳಿದನು.

೩. ಜಲಂಧರನು ಹೇಳಿದನು– ಎಲೈ ನಾರದನೇ! ಆ ಶೂಲಿಯ ಮನೆಯಲ್ಲಿ ಉತ್ಕೃಷ್ಟವಾದ ಪದಾರ್ಥವು ಯಾವುದಿರುವುದು ? ಅದೆಲ್ಲವನ್ನೂ ನನಗೆ ಹೇಳು. ಭೋಗ್ಯವಾದ ಪದಾರ್ಥಗಳು ಸಿಕ್ಕಿದರೆ ಯುದ್ಧಮಾಡಬಹುದು. ಕಾರಣವಿಲ್ಲದೆ ಯುದ್ಧಮಾಡಬಾರದು.

॥ ನಾರದ ಉವಾಚ ॥

ಭೂತಿಃ ಪುತ್ರಂ ವೃಷೋ ಜೀರ್ಣಃ ಫಣಿನೋಂಗೇ ಗಳೇ ವಿಷಂ ।
ಭಿಕ್ಷಾಪಾತ್ರಂ ಕರೇ ಪುತ್ರೌ ಗಜಾನನಷಡಾನನೌ ॥ ೪ ॥

ಇತ್ಯಾದಿ ವಿಭವಸ್ತಸ್ಯ ಯದನ್ಯತ್ತನ್ನಿಬೋಧ ಮೇ ।
ತನಯಾ ಗಿರಿರಾಜಸ್ಯ ವಿಶಾಲಾ ಹ್ಯನ್ಯತಸ್ತನೀ ॥ ೫ ॥

ದಗ್ಧಸ್ಮರೋಽಪಿ ಭಗವಾನ್ ಯಸ್ಯಾ ರೂಪೇಣ ಮೋಹಿತಃ ।
ಮಹೇಶೋ ಯದ್ವಿನೋದಾಯ ಕುರುತೇ ನಿತ್ಯಕೌತುಕಂ ॥ ೬ ॥

ನೃತ್ಯನ್ಗಾಯಂಶ್ಚ ತಾಂ ಶಂಭುಃ ಸ್ವಯಂ ಭವತಿ ಹಾಸಕಃ ।
ಸಾ ಪಾರ್ವತೀತಿ ವಿಖ್ಯಾತಾ ಸೌಂದರ್ಯಾವಧಿ ದೈವತಂ ॥ ೭ ॥

ವೃಂದಾ ವರಾಂಗನಾ ರಾಜನ್ ಇಮಾಂಶ್ಚಾಪ್ಸರಸಶ್ಶುಭಾಃ ।
ನ ಚಾಪ್ನುವಂತಿ ಪಾರ್ವತ್ಯಾಃ ಷೋಡಶೀಮಪಿ ತಾಂ ಕಳಾಂ ॥ ೮ ॥

---

೪. ನಾರದನು ಹೇಳಿದನು– ಬೂದಿ, ವಾಹನವಾದ ಮುದಿ ಎತ್ತು, ಅವಯುವಗಳಲ್ಲಿ ಹಾವುಗಳು, ಕತ್ತಿನಲ್ಲಿ ವಿಷ, ಕೈಯ್ಯಲ್ಲಿ ಭಿಕ್ಷಾಪಾತ್ರೆ, ಇಬ್ಬರು ಮಕ್ಕಳಲ್ಲಿ ಒಬ್ಬನು ಆನೆಯ ಮುಖದಂತೆಯೂ, ಮತ್ತೊಬ್ಬನು ಆರುಮುಖ ಉಳ್ಳವನಾಗಿಯೂ ವಿಕಾರವಾಗಿರುವರು.

೫-೭. ಇದೇ ಅವನ ಐಶ್ವರ್ಯಗಳು. ಆದರೆ ಮತ್ತೊಂದಿರುವುದು, ಹೇಳುವೆನು. ಕೇಳು. ಅವನಿಗೆ ಒಬ್ಬಳು ಹೆಂಡತಿಯಿರುವಳು. ಅವಳು ಹಿಮವಂತನ ಮಗಳು. ಅಗಲವಾದ ಕಣ್ಣುಳ್ಳವಳು. ದಪ್ಪವಾಗಿ ಮೇಲಕ್ಕೆದ್ದಿರುವ ಮೊಲೆಗಳುಳ್ಳವಳು. ಆ ಭಗವಂತನು ಮನ್ಮಥನನ್ನು ಸುಟ್ಟರೂ ಕೂಡ ಅವಳ ರೂಪದಿಂದ ಮೋಹಗೊಂಡಿರುವನು. ಮಹೇಶನು ಅವಳನ್ನು ಸಂತೋಷಪಡಿಸುವುದಕ್ಕೆ ನಿತ್ಯವೂ ಹಾಸ್ಯಾದಿಗಳನ್ನು ಮಾಡುತ್ತಿರುವನು. ಮತ್ತು ಕುಣಿಯುವನು. ಹಾಡುವನು. ತಾನೇ ಹಾಸ್ಯವನ್ನೂ ಮಾಡುವನು. ಅವಳ ಹೆಸರು ಪಾರ್ವತಿಯು. ಅವಳೇ ಸೌಂದರ್ಯಕ್ಕೆ ಕೊನೆಯು. ಮತ್ತು ಆ ಸೌಂದರ್ಯಕ್ಕೆ ದೇವರು.

೮. ಉತ್ತಮ ಸ್ತ್ರೀಯಾದ ವೃಂದೆಯಾಗಲಿ, ಈ ಅಪ್ಸರಸ್ತ್ರೀಯರಾಗಲಿ ಆ ಪಾರ್ವತಿಯ ಹದಿನಾರನೆಯ ಒಂದು ಭಾಗಕ್ಕೆ ಸರಿಹೋಗಲಾರರು.

ಇತ್ಯುಕ್ತ್ವಾಹಂ ಮಹೀಪಾಲ ಜಾಲಂಧರಮಮರ್ಷಣಂ ।
ಪಶ್ಯತಾಂ ಸರ್ವದೈತ್ಯಾನಾಮಂತರ್ಧಾನಂ ಗತಃ ಕ್ಷಣಾತ್ ॥ ೯ ॥

ಅಥ ಸಂಪ್ರೈಷಯದ್ದೂತಂ ಸಿಂಧುಜಃ ಸಿಂಹಿಕಾಸುತಂ ।
ಕ್ಷಣೇನಾಸಾದ್ಯ ಕೈಲಾಸಂ ದೇವಾವಾಸಮಪಶ್ಯತ ॥ ೧೦ ॥

ಅತ್ರಾಂತರೇಹರಿರ್ಭೀಮಮಾಸೃಜ್ಯ ತು ತದಾಹರಂ ।
ಜಗಾಮಾಲಕ್ಷಿತಸ್ತೂರ್ಣಂ ಕ್ಷೀರಾಬ್ಧಿಂ ಭೇದಸಂಜ್ಞಯಾ ॥ ೧೧ ॥

ದದರ್ಶ ರಾಹುರ್ಭವನಂ ಶಂಕರಾಸ್ಯಾತಿದೀಪ್ತಿಮತ್ ।
ಆತ್ಮಾನಮಾತ್ಮನಾ ವೀಕ್ಷ್ಯ ಕಿಮಿತ್ಯಾಹ ಸುಹರ್ಷಿತಃ ॥ ೧೨ ॥

---

೯. ಎಲೈ ಧರ್ಮರಾಜನೇ ! ನಾನು ಹೀಗೆಂದು ಹೇಳಿ ಅವನಿಗೆ ಹೊಟ್ಟೆಗಿಚ್ಚು ಉಂಟಾಗುವಂತೆ ಮಾಡಿ ದೈತ್ಯರೆಲ್ಲರೂ ನೋಡುತ್ತಿದ್ದಂತೆಯೇ ಕ್ಷಣ ಕಾಲದಲ್ಲಿ ಅವರೆದುರಿಗೆ ಹೊರಟುಹೋದೆನು.

೧೦. ಅನಂತರ ಜಲಂಧರನು ಸಿಂಹಿಕೆಯ ಮಗನಾದ ರಾಹುವನ್ನು ಶಿವನ ಬಳಿಗೆ ದೂತನನ್ನಾಗಿ ಕಳುಹಿಸಿದನು. ಆ ರಾಹುವು ಕ್ಷಣಕಾಲದಲ್ಲಿ ಕೈಲಾಸಕ್ಕೆ ಹೋಗಿ ಆ ಶಿವನ ಮನೆಯನ್ನು ನೋಡಿದನು.

೧೧. ಇಷ್ಟರೊಳಗೆ ಹರಿಯು ಭಯಂಕರನಾದ ಹರನನ್ನು ನೋಡಿ ಮಾತನಾಡಿಕೊಂಡು ಭೇದೋಪಾಯವನ್ನು ತಿಳಿಸಿ ಆ ದೂತನು ಕಾಣದಂತೆ ಹೊರಟು ಕ್ಷೀರಸಮುದ್ರವನ್ನು ಹೊಂದಿದನು.

೧೨. ಅಲ್ಲಿ ಆ ಶಂಕರನ ಮನೆಯನ್ನು ರಾಹುವು ನೋಡಿ ಅದರಲ್ಲಿ ತನಗೆ ತಾನೇ ಕಾಣುತ್ತಿದ್ದುದನ್ನು ನೋಡಿ ಸಂತೋಷಗೊಂಡು ಇದೇನೆಂದು ಯೋಚಿಸಿದನು. ಆ ಮನೆಯು ಅಷ್ಟು ನಿರ್ಮಲವಾಗಿದ್ದಿತು.

ಪ್ರವೇಷ್ಟುಕಾಮೋ ಬಲಿಭಿದ್ವಾರ್ರಿದ್ವಾಸ್ಥೈರ್ನಿಷೇಧಿತಃ ।
ಯತ್ನವಾನ್ ಸನ್ನಿಷಿದ್ಧೋಽಪಿ ತದಾ ತೇ ಪ್ರೋದ್ಯತಾಯುಧಾಃ ॥
ತನ್ನಿವಾರ್ಯ ಗಣಾನ್ನಂದೀ ವ್ಯಾಜಹಾರ ವಿಧುಂತುದಂ ॥ ೧೩ ॥

॥ ನಂದ್ಯುವಾಚ ॥

ಕಸ್ತ್ವಂ ಕಸ್ಮಾದಿಹಾಯಾತಃ ಕಿಂ ಕಾರ್ಯಂ ತವ ಬರ್ಬರ ।
ಬ್ರೂಹಿ ಕಾರ್ಯಂ ಗಣಾ ಯಾವತ್ತ್ವಾಂ ನ ಹನ್ಯುರ್ಭಯಾವಹಾಃ ॥ ೧೪ ॥

॥ ರಾಹುರುವಾಚ ॥

ದೂತೋ ಜಾಲಂಧರಸ್ಯಾಹಂ ತ್ವಂ ಮಾಂ ಶರ್ವಾಂತಿಕಂ ನಯ ।
ನ ವಾಚ್ಯಮಂತರೇ ದ್ವಾಃ ಸ್ಥಂ ಮಹಾರಾಜಪ್ರಯೋಜನಂ ॥ ೧೫ ॥

---

೧೩. ರಾಹುವು ಒಳಗೆ ಹೋಗಲು ಯತ್ನಿಸಿದನು. ಆಗ ದ್ವಾರಪಾಲಕರು ತಡೆದರು. ತಡೆದರೂ ಕೂಡ ಒಳಗೆ ಹೋಗಲು ಪ್ರಯತ್ನಪಟ್ಟಿದನ್ನು ನೋಡಿ ಅವರು ಕೊಲ್ಲಲು ಆಯುಧಗಳನ್ನೆತ್ತಿಕೊಂಡು ಬಂದರು. ಅವರನ್ನು ನಂದಿಯು ಸುಮ್ಮನಿರುವಂತೆ ತಡೆದು ರಾಹುವನ್ನು ಕುರಿತು ಇಂತೆಂದನು.

೧೪. ನಂದಿಯು ಹೇಳಿದನು-ಎಲೈ ಬರ್ಬರ (ಕೆಂಚಗಿರುವ ಕೂದಲುಳ್ಳವ) ನೇ ! ನೀನು ಯಾರು ? ಎಲ್ಲಿಂದ ಬಂದೆ ? ನಿನಗೆ ಇಲ್ಲೇನು ಕೆಲಸ ? ಆ ಕೆಲಸವನ್ನು ಬೇಗನೆ ಹೇಳು. ಈ ಭಯಂಕರವಾದ ಗಣಗಳು ನಿನ್ನನ್ನು ಕೊಂದು ಬಿಡುವುವು. ಅಷ್ಟರಲ್ಲಿ ಬೇಗನೆ ಹೇಳು.

೧೫. ರಾಹುವು ಹೇಳಿದನು– ನಾನು ಜಲಂಧರನ ದೂತನು. ನೀನು ನನ್ನನ್ನು ಈಶ್ವರನ ಬಳಿಗೆ ಕರೆದುಕೊಂಡು ಹೋಗು. ಮಹಾರಾಜನ ಪ್ರಯೋಜನ ಕರವಾದ ಕಾರ್ಯವನ್ನು ಮಧ್ಯದಲ್ಲಿ ಬಾಗಿಲು ಕಾಯುವವನ ಸಂಗಡ ಹೇಳ ಬಾರದು.

|| ನಾರದ ಉವಾಚ ||

ನಂದೀ ದೂತೋಕ್ತಮಾಕರ್ಣ್ಯ ನೀಲಲೋಹಿತಮಾಯಯೌ ।
ದಂಡವತ್ಪ್ರಣಿಪತ್ಯಾಗ್ರೇ ಸ್ಥಿತ್ವಾ ಶಂಕರಮಬ್ರವೀತ್ || ೧೬ ||

|| ನಂದ್ಯುವಾಚ ||

ಸೈಂಹಿಕೇಯೋ ಮಹಾರಾಜ ದ್ವಾರೇ ತಿಷ್ಠತಿ ಕಾರ್ಯತಃ ।
ಸ ಪ್ರಯಾತ್ವಥವಾಽಽಯಾತು ಭವಾನಾಜ್ಞಪ್ತುಮರ್ಹತಿ || ೧೭ ||

|| ನಾರದ ಉವಾಚ ||

ನಂದಿನೋಕ್ತಮಥಾಕರ್ಣ್ಯ ತ್ವರನ್ನಿವ ಮಹೇಶ್ವರಃ ।
ಗುಪ್ತ್ವಾಮಂತಃಪುರೇ ದೇವೀಂ ಪ್ರಸ್ಥಾಪ್ಯ ಚ ಸಖೀವೃತಾಂ || ೧೮ ||

ಪಶ್ಚಾ ದ್ದ್ವಾಸ್ಥಂ ಜಗಾದಾಥ ನಂದಿನ್ದೂತಂ ಪ್ರವೇಶಯ ।
ತತೋ ಹಸ್ತೇ ಪ್ರಗೃಹ್ಯಾಶು ದೂತಂ ನಂದೀ ಮಹಾಬಲಃ || ೧೯ ||

---

೧೬. ನಾರದನು ಹೇಳಿದನು– ದೂತನು ಹೇಳಿದ ಈ ಮಾತನ್ನು ಕೇಳಿ ನಂದಿಯು ಶಿವನ ಬಳಿಗೆ ಬಂದು ಆ ಶಿವನಿಗೆ ದಂಡನಮುಸ್ಕಾರಮಾಡಿದವನಾಗಿ ಇಂತೆಂದನು.

೧೭. ನಂದಿಯು ಹೇಳಿದನು– ಎಲೈ ಸ್ವಾಮಿಯೇ! ರಾಹುವು ಕಾರ್ಯಾರ್ಥಿಯಾಗಿ ಬಂದು ಬಾಗಿಲಲ್ಲಿ ನಿಂತಿದ್ದಾನೆ. ಅವನು ಬರಬೇಕೇ? ಅಥವಾ ಹೋಗಬೇಕೇ? ಅಪ್ಪಣೆಮಾಡು.

೧೮. ನಾರದನು ಹೇಳಿದನು– ನಂದಿಯು ಹೇಳಿದ ಮಾತನ್ನು ಮಹೇಶ್ವರನು ಕೇಳಿ ಅವಸರಪಟ್ಟವನಂತೆ ನಟಿಸಿ ಪಾರ್ವತಿಯನ್ನು ಅವಳ ಸಖಿಯರೊಡನೆ ಅಂತಃಪುರದಲ್ಲಿ ಗುಟ್ಟಾದ ಜಾಗದಲ್ಲಿರಿಸಿ ಅನಂತರ ಬಾಗಲು ಕಾಯುವ ನಂದಿಯನ್ನು ಕುರಿತು ಎಲೈ ನಂದಿಯೇ! ದೂತನನ್ನು ಕರೆದು ಕೊಂಡು ಬಾ, ಎಂದನು.

೧೯–೨೧. ಆಗ ಮಹಾಬಲಿಷ್ಠನಾದ ನಂದಿಯು ರಾಹುವನ್ನು ಕೈಹಿಡಿದು ಕರೆದುಕೊಂಡು ತಂದು ದೇವತೆಗಳ ಮಧ್ಯದಲ್ಲಿ ಕುಳಿತಿರುವ ಶಂಭುವನ್ನು

ಅನೇಕರೂಪಮಾಸ ದೇವಾನಾಂ ಮಧ್ಯೇ ಶಂಭುಮದರ್ಶಯತ್ ।
ತಂ ದದರ್ಶ ತದಾ ರಾಹುಃ ಜಟಿಲಂ ನೀಲಮಾತ್ಮನಿ ॥ ೨೦ ॥

ಪಂಚವಕ್ತ್ರಂ ದಶಭುಜಂ ನಾಗಯಜ್ಞೋಪವೀತಿನಂ ।
ದೇವೀವಿರಹಿತಂ ಮೂರ್ಧ್ನಿ ಚಂದ್ರಲೇಖಾವಿಭೂಷಿತಂ ॥ ೨೧ ॥

ಉಚ್ಛ್ವಾಸಶ್ವಾಸಾನ್ಮುಂಚನ್ತಂ ಪೃಥಗ್ಗಣನಿಷೇವಿತಂ ।
ಸರ್ವದೇವಗಣೋಪೇತಂ ಸೇವಿತಂ ಗಣಕೋಟಿಭಿಃ ॥ ೨೨ ॥

ಪ್ರಾಪ್ತಂ ಜ್ಞಾತ್ವಾ ತತೋ ದೂತಂ ಶಂಭುರಾಲೋಕ್ಯ ಚಾಗ್ರತಃ ।
ಪ್ರಾಹ ಬ್ರೂಹಿ ತದಾ ರಾಹುಃ ವಕ್ತುಂ ಸಮುಪಚಕ್ರಮೇ ॥ ೨೩ ॥

॥ ರಾಹುರುವಾಚ ॥

ದೇವ ಜಾಲಂಧರೇಣಾಹಂ ಪ್ರೇಷಿತಸ್ತವ ಸನ್ನಿಧೌ ।
ತಸ್ಯ ಶಿಷ್ಟಂ ವಚಶ್ಶ್ರುತ್ವಾ ಮನ್ಮುಖೇನ ದ್ರುತಂ ಕುರು ॥ ೨೪ ॥

---

ತೋರಿಸಿದನು. ಆಗ ರಾಹುವು ಜಟಾಧಾರಿಯಾದ, ಕಪ್ಪಗಿರುವ, ಐದು ಮುಖವುಳ್ಳ, ಹತ್ತು ಕೈಯುಳ್ಳ, ಹಾವೇ ಯಜ್ಞೋಪವೀತವಾಗಿಯುಳ್ಳ, ಪಕ್ಕದಲ್ಲಿ ದೇವಿಯು ಇಲ್ಲದಿರುವ, ತಲೆಯಲ್ಲಿ ಚಂದ್ರಲೇಖೆಯಿಂದ ಅಲಂಕೃತನಾದ ಶಂಭುವನ್ನು ನೋಡಿದನು.

೨೨. ಉಸಿರನ್ನು ಬಿಟ್ಟು ತೆಗೆದುಕೊಳ್ಳುತ್ತಿರುವ, ಗಣಗಳಿಂದ ಬೇರೆ ಬೇರೆಯಾಗಿ ಸೇವಿಸಲ್ಪಡುತ್ತಿರುವ, ದೇವಗಣರೆಲ್ಲರಿಂದಲೂ ಕೂಡಿರುವ, ಅನೇಕ ಗಣಗಳಿಂದ ಸೇವಿಸಲ್ಪಡುತ್ತಿರುವ ಆ ಶಂಭುವನ್ನು ನೋಡಿದನು.

೨೩. ಶಂಭುವು ಎದುರಿಗೆ ಬಂದ ದೂತನನ್ನು ನೋಡಿ "ಏತಕ್ಕೆ ಬಂದಿದ್ದೀಯೆ? ಹೇಳು" ಎನ್ನಲು ಆಗ ರಾಹುವು ಹೀಗೆಂದು ಹೇಳಲು ಮೊದಲುಮಾಡಿದನು.

೨೪. ರಾಹುವು ಹೇಳಿದನು– ಎಲೈ ಸ್ವಾಮಿಯೇ! ಜಲಂಧರನು ನನ್ನನ್ನು ನಿನ್ನ ಬಳಿಗೆ ಕಳುಹಿಸಿದನು. ನನ್ನ ಬಾಯಿನಿಂದ ಅವನ ಮಾತನ್ನು ಕೇಳಿ ಅದರಂತೆ ಬೇಗನೆ ಮಾಡು.

ಗಿರಿಶಸ್ತ್ವಂ ತಪೋನಿಷ್ಠೋ ನಿರ್ಗುಣೋ ಧರ್ಮವರ್ಜಿತಃ ।
ತವ ನಾಸ್ತಿ ಪಿತಾ ಮಾತಾ ವಸುಗೋತ್ರಾದಿವರ್ಜಿತಃ ॥ ೨೫ ॥

ಜಾಲಂಧರೋ ಮಹಾಬಾಹುರ್ಭೋಕ್ತಾಸೌ ಭುವನತ್ರಯಂ ।
ತಸ್ಯೈವ ವಶ್ಯಸ್ತ್ವಮಪಿ ತತಶ್ಶೋಕ್ತಂ ಸಮಾಚರ ।
ಪುರಾಣಪುರುಷಃ ಕಾಮೀ ವೃಷಾರೂಢಃ ಕಥಂ ಭವಾನ್ ॥ ೨೬ ॥

॥ ನಾರದ ಉವಾಚ ॥

ಏವಂ ವದತಿ ಸಂತಪ್ತೌ ಸುತೌ ಸ್ಕಂದವಿನಾಯಕೌ ।
ತಸ್ಮಿನ್ಕಾಲೇ ದೇವದೇವೋ ಯುತವಾನಂಗಮರ್ದನಂ ॥ ೨೭ ॥

ಚಕಾರ ಚ ಕರೈರ್ವ್ಯಸ್ತೈರ್ವಾಸುಕಿರ್ಭೂತಲೇಽಪತತ್ ।
ಹೇರಂಬವಾಹನಸ್ಯಾಖೋಃ ಪುಚ್ಛಂ ಗ್ರಸ್ತಮಥಾಹಿನಾ ॥ ೨೮ ॥

---

೨೫. ಎಲೈ ಸ್ವಾಮಿಯೇ ! ನೀನು ಯಾವಾಗಲೂ ಬೆಟ್ಟದಲ್ಲಿರುವವನು, ತಪಸ್ವಿಯು, ಗುಣಗಳಾವುವೂ ನಿನ್ನಲ್ಲಿ ಇಲ್ಲ. ಧರ್ಮವನ್ನು ಬಿಟ್ಟಿದ್ದೀಯೆ. ತಾಯಿ, ತಂದೆ, ಹಣ, ಗೋತ್ರಗಳೊಂದೂ ನಿನಗಿಲ್ಲ.

೨೬. ಮಹಾಬಾಹುವಾದ ಜಲಂಧರನು ಮೂರು ಲೋಕವನ್ನೂ ಅನುಭವಿಸುತ್ತಿರುವನು. ಅವಕ್ಕೆಲ್ಲಾ ಸ್ವಾಮಿಯು. ನೀನು ಅವುಗಳಲ್ಲಿ ಸೇರಿರುವುದರಿಂದ ಅವನಿಗೆ ಅಧೀನನು. ಆದ್ದರಿಂದ ಅವನು ಹೇಳಿದಂತೆ ಮಾಡು. ನೀನು ಮುದುಕ, ಕಾಮು ಲಂಪಟನಾಗಿ ಎತ್ತಿನಮೇಲೆ ಏಕೆ ಸುತ್ತುತ್ತಿರುತ್ತೀಯೆ?

೨೭-೩೦. ನಾರದನು ಹೇಳಿದನು– ದೂತನು ಹೀಗೆ ಹೇಳುತ್ತಿರುವುದನ್ನು ಕೇಳಿ ಶಿವನ ಮಕ್ಕಳಾದ ಕುಮಾರಸ್ವಾಮಿ, ವಿನಾಯಕರು ದುಃಖಗೊಂಡರು. ಶಿವನು ಮಾತನಾಡದೆ ಮೈಕೈಗಳನ್ನು ಹಿಸುಕಿಕೊಂಡನು. ಹೀಗೆ ಹಿಸುಕಿಕೊಳ್ಳುತ್ತಿರುವಾಗ ಮೈಗೆ ಕಟ್ಟಿದ್ದ ವಾಸುಕಿಯು ನೆಲದ ಮೇಲೆ ಬಿದ್ದನು. ಕೆಳಗೆ ಬಿದ್ದ ಸರ್ಪರಾಜನಾದ ವಾಸುಕಿಯು ವಿನಾಯಕನ ವಾಹನವಾದ ಇಲಿಯ ಬಾಲವನ್ನು

ಸ್ವಪತ್ರಂ ಗ್ರಸ್ತಮಾಲೋಕ್ಯ ಮುಂಚ ಮುಂಚೇತ್ಯುವಾಚ ಹ ।
ಅತ್ರಾಂತರೇ ಸ್ಕಂದವಾಹಂ ಕ್ಷುಬ್ಧಂ ವೀಕ್ಷ್ಯ ಮಹಾಸ್ವರಂ ॥ ೨೯ ॥

ತದ್ಭಯಾದ್ವಾಸುಕಿರ್ಗ್ರಸ್ತಮಾಖುಪುಚ್ಛಮಥೋದ್ಗಿರನ್ ।
ಅಥಾರುಹ್ಯ ಹರಸ್ಯಾಂಗಂ ಗಳಮಾವೇಷ್ಟ್ಯ ಸಂಸ್ಥಿತಃ ॥ ೩೦ ॥

ತಸ್ಯ ನಿಶ್ವಾಸಪವನೈರಥ ಜಾತೋ ಹುತಾಶನಃ ।
ತಸ್ಯೋಷ್ಮಣಾ ಚಂದ್ರಲೇಖಾ ಜಟಾಜೂಟಾಟವೀಸ್ಥಿತಾ ॥ ೩೧ ॥

ಸಾದ್ರ್ರತಾಂ ತು ತದಾ ಪ್ರಾಯಾತ್ಪ್ಲಾವಿತಂ ತದ್ವಪುರ್ಯಥಾ ।
ತಸ್ಯಾಹ್ಯಮೃತಧಾರಾಭಿರ್ಬ್ರಹ್ಮಮಸ್ತಕಮಾಲಿಕಾ ॥ ೩೨ ॥

ಹರಮೌಳಿಕಪಾಲಾನಾಮುಭೂತ್ಸಂಜೀವಿತಾ ತದಾ ।
ಪಪಾಠ ಪೂರ್ವಮಭ್ಯಸ್ತಂ ಸ್ವರಯೋಗ ಶ್ರುತಿಕ್ರಮಂ ॥ ೩೩ ॥

---

ನುಂಗಿತು. ತನ್ನ ವಾಹನವನ್ನು ವಾಸುಕಿಯು ನುಂಗುತ್ತಿರುವುದನ್ನು ನೋಡಿ ವಿನಾಯಕನು " ಬಿಡು ಬಿಡು " ಎಂದನು. ಇಷ್ಟರಲ್ಲಿಯೇ ಕುಮಾರಸ್ವಾಮಿಯ ವಾಹನವಾದ ನವಿಲು ಕೋಪಗೊಂಡು ಷಡ್ಜಸ್ವರದಿಂದ ಕೂಗಿತು. ಆ ಧ್ವನಿಯನ್ನು ಕೇಳಿ ವಾಸುಕಿಯು ತಾನು ನುಂಗುತ್ತಿದ್ದ ಆ ಇಲಿಯ ಬಾಲವನ್ನು ಉಗಿದುಬಿಟ್ಟು ಬೇಗನೆ ಶಿವನ ಮೈಮೇಲಕ್ಕೆ ಹತ್ತಿ ಕತ್ತನ್ನು ಸುತ್ತಿಕೊಂಡು ನಿಂತನು.

೩೧–೩೩. ಈಶ್ವರನು ಇದನ್ನು ಕೇಳಿ ಕೋಪದಿಂದ ನಿಟ್ಟುಸಿರುಬಿಡಲು ಆ ನಿಶ್ವಾಸದಿಂದ ಬೆಂಕಿಯು ಹುಟ್ಟಿತು. ಈ ಬೆಂಕಿಯ ಶಾಖಕ್ಕೆ ತಲೆಯಲ್ಲಿ ಜಟೆಯ ಗುಂಪಿನಲ್ಲಿದ್ದ ಚಂದ್ರರೇಖೆಯು ಕರಗಿ ಸೋರುತ್ತಿರಲು ಆ ಶಿವನ ಮೈಯೆಲ್ಲವೂ ನೆನೆದು ಹೋಯಿತು. ಆ ಅಮೃತದ ಧಾರೆಯಿಂದ ಶಿವನು ಧರಿಸಿದ್ದ ಬ್ರಹ್ಮನ ತಲೆಯ ಮಾಲಿಕೆಯೂ ಕಪಾಲಗಳೂ ನೆನೆದು ಅವು ಜೀವಿತವಾದುವು. ಹೀಗೆ ಜೀವಿತವಾಗಿ ತಾವು ಹಿಂದೆ ಕಲಿತಿದ್ದ ಸ್ವರಸಹಿತವಾದ ವೇದಗಳನ್ನು ಹೇಳತೊಡಗಿದುವು.

ಶ್ರುತ್ವಾಪರಸ್ಪರಾಧೀನಂ ವಿವದಂತಿ ಶಿರಾಂಸ್ಯಥ ।
ಅಹಮಾದಿರಹಂ ಪೂರ್ವಮಹಮೇವ ಪರಾತ್ಪರಃ　　|| ೩೪ ||

ಅಹಂ ಸ್ರಷ್ಟಾ ಅಹಂ ಪಾತೇತ್ಯುತ್ಸುಕಾನಿ ಪರಸ್ಪರಂ ।
ಶೋಚ್ಯನ್ಯೇತಾನಿ ನೋ ದತ್ತಂ ನೋ ಭುಕ್ತಂ ನ ಹುತಂ ಮಯಾ ||೩೫||

ಲೋಭಗ್ರಸ್ತೇನ ಮನಸಾ ನೋ ವಿತ್ತಂ ಬ್ರಾಹ್ಮಣೇರ್ಪಿತಂ ।
ಅಥೇಶ್ವರಜಟಾಜೂಟಾದಾವಿರಾಸೀದ್ಗಣೋ ಮಹಾನ್　　|| ೩೬ ||

ತ್ರಿ ಆನನ ಸ್ತ್ರಿವರಣ ಸ್ತ್ರಿಪುಚ್ಛಃ ಸಪ್ತಹಸ್ತವಾನ್ ।
ಸ ಚ ಕೀರ್ತಿಮುಖೋ ನಾಮ ಪಿಂಗಳೋ ಜಟಿಲೋ ಮಹಾನ್　|| ೩೭ ||

ತಂ ದೃಷ್ಟ್ವಾ ಚ ಕಪಾಲಾಲೀ ಭಯಾತ್ತಸ್ಥೌ ಮೃತೇವ ಸಾ ।
ಪುರತಃ ಪ್ರಾಹ ಸಗಣಸ್ತತಃ ಕೀರ್ತಿಮುಖಃ ಪ್ರಭುಂ　　|| ೩೮ ||

---

೩೪-೩೭. ಬ್ರಹ್ಮಕಪಾಲವು ಈ ರೀತಿ ತಾನು ಕಲಿತಿದ್ದುದನ್ನೆಲ್ಲಾ ಹೇಳುತ್ತಿರಲು ಉಳಿದ ತಲೆಗಳು ಒಂದಕ್ಕೊಂದು" ನಾನು ಆದಿಪುರುಷನು, ನಾನು ಪೂರ್ವಪುರುಷನು, ನಾನು ಪೂರ್ವವಸ್ತುವಿಗಿಂತಲೂ ಪೂರ್ವವಸ್ತುವು, ನಾನೇ ಸೃಷ್ಟಿಸುವವನು. ನಾನೇ ಕಾಪಾಡುವವನು" ಎಂಬುದಾಗಿ ಸಂತೋಷದಿಂದ ಒಂದಕ್ಕೊಂದು ವಾದಿಸುತ್ತಿದ್ದುವು. ನಾನು ದಾನಮಾಡಲಿಲ್ಲ. ತಿನ್ನಲೂ ಇಲ್ಲ. ಹೋಮಮಾಡಿ ಯಜ್ಞಯಾಗಾದಿಗಳನ್ನೂ ಮಾಡಲಿಲ್ಲ. ಮನಸ್ಸಿನಲ್ಲಿ ಆಸೆಯನ್ನಿಟ್ಟುಕೊಂಡು ಬ್ರಾಹ್ಮಣರಿಗೆ ಹಣವನ್ನು ದಾನಮಾಡಲೇ ಇಲ್ಲ, ಎಂಬುದಾಗಿ ದುಃಖಪಡುತ್ತಲೂ ಇದ್ದವು. ಆಗ ಆ ಈಶ್ವರನ ಜಟೆಯ ಮಧ್ಯದಿಂದ ಒಂದು ಗಣವು ಹುಟ್ಟಿತು. ಅದಕ್ಕೆ ಮೂರುಮುಖವೂ, ಮೂರು ಬಣ್ಣಗಳೂ, ಮೂರು ಬಾಲವೂ, ಏಳು ಕೈಗಳೂ ಇದ್ದುವು. ಅದರ ಹೆಸರು ಕೀರ್ತಿಮುಖನೆಂದು. ಹೆಚ್ಚಾಗಿ ಕೆಂಚಗಿರುವ ಜಟೆಗಳುಳ್ಳದ್ದಾಗಿದ್ದಿತು.

೩೮. ಈ ಗಣವನ್ನು ನೋಡಿ ಮಾತನಾಡುತ್ತಿದ್ದ ಕಪಾಲಗಳು ಸತ್ತಂತೆ ಸುಮ್ಮನಾದುವು. ಆಗ ಆ ಕೀರ್ತಿಮುಖನೆಂಬ ಗಣನು ಸ್ವಾಮಿಯನ್ನು ಕುರಿತು ಇಂತೆಂದನು.

ಪ್ರಣಿಪತ್ಯ ಶಿವಂ ದೇವಮುತ್ಯರ್ಥಂ ಕ್ಷುಧಿತಃ ಪ್ರಭೋ ।
ತದೋಕ್ತಶ್ಶಂಕರೇಣಾಸೌ ಭಕ್ಷಯ ತ್ವಂ ರಣೇ ಹತಾನ್ ॥ ೩೯ ॥

ಕ್ಷಣಂ ವಿಚಾರ್ಯ ಸ ಗಣಃ ಕ್ವಾಪ್ಯದೃಷ್ಟ್ವಾ ರಣಂ ತದಾ ।
ಬ್ರಹ್ಮಾಣಂ ಭಕ್ಷಿತುಂ ಪ್ರಾಪ್ತಃ ಶಂಕರೇಣ ನಿವಾರಿತಃ ॥ ೪೦ ॥

ತತಃ ಕೀರ್ತಿಮುಖೇನಾಥ ಸ್ವಾಂಗಂ ಸರ್ವಂ ಚ ಭಕ್ಷಿತಂ ।
ಬುಭುಕ್ಷಿತೇನ ಚಾತ್ಯಂತಂ ನಿಷಿದ್ಧೇನ ಚ ಸರ್ವತಃ ॥ ೪೧ ॥

ತತ್ಸಾಹಸಂ ತದಾ ದೃಷ್ಟ್ವಾ ಭಕ್ತಿಂ ಕೀರ್ತಿಮುಖಸ್ಯ ಚ ।
ತಮುವಾಚೇಶ್ವರಃ ಪ್ರೀತಃ ಪ್ರಾಸಾದೇ ತಿಷ್ಠ ಮೇ ಸದಾ ॥ ೪೨ ॥

ತ್ವಚ್ಚಿತ್ತರಹಿತೋ ಯಶ್ಚ ಭವಿಷ್ಯತಿ ಮಮಾಲಯೇ ।
ಸ ಪತಿಷ್ಯತಿ ಶೀಘ್ರಂ ಹೀತ್ಯುಕ್ತಸ್ಸೋಂತರ್ಹಿತೋಽಭವತ್ ॥ ೪೩ ॥

---

೩೯. ಆಗ ಕೀರ್ತಿಮುಖನು ಶಿವನಿಗೆ ನಮಸ್ಕರಿಸಿ ಸ್ವಾಮಿ! ನನಗೆ ಬಹು ಹಸಿವಾಗುತ್ತದೆ. ಎಂದನು. ಆಗ ಶಂಕರನು ನೀನು ಯುದ್ಧದಲ್ಲಿ ಕೊಂದವರನ್ನೆಲ್ಲಾ ತಿನ್ನು ಎಂದು ಹೇಳಿದನು.

೪೦. ಅಗ ಆ ಕೀರ್ತಿಮುಖನು ಯೋಚಿಸಿ, ಎಲ್ಲಿಯೂ ಯುದ್ಧವಾಗದೆ ಇದ್ದುದನ್ನು ತಿಳಿದು ಹಸಿವಿಗೆ ಬೇರೆ ಆಧಾರವಿಲ್ಲದಿರಲು ಬ್ರಹ್ಮನನ್ನೇ ತಿನ್ನುವುದಕ್ಕೆ ಹೋದನು. ಆಗ ಶಂಕರನು ಬೇಡವೆಂದು ತಡೆದನು.

೪೧. ಆಗ ಬಹು ಹಸಿವುಗೊಂಡಿದ್ದ ಕೀರ್ತಿಮುಖನು ತನ್ನ ಅಂಗಗಳನ್ನೇ ತಿನ್ನಲು ಮೊದಲುಮಾಡಿದನು. ಎಲ್ಲರೂ ಬೇಡ ಬೇಡವೆಂದರು.

೪೨. ಆಗ ಆ ಈಶ್ವರನು ಆ ಕೀರ್ತಿಮುಖನ ಸಾಹಸವನ್ನೂ ಭಕ್ತಿಯನ್ನೂ ನೋಡಿ ಸಂತೋಷಪಟ್ಟು ಎಲೈ ಕೀರ್ತಿಮುಖನೇ! ನನ್ನ ಮನೆಯಲ್ಲಿಯೇ ಯಾವಾಗಲೂ ಇರು ಎಂದನು.

೪೩. ನನ್ನ ಮನೆಯಲ್ಲಿ ನಿನ್ನನ್ನು ಭಜಿಸದಿರುವವನು ಬೇಗನೆ ನಾಶವಾಗುವನು. ಎಂದು ಹೇಳಲು ಅವನು ಹಾಗೆ ಆಗಲೆಂದು ಹೊರಟುಹೋದನು.

ಶಂಭೋರ್ಮೂರ್ಧ್ನಿ ತದಾ ದೇವಾ ವವೃಷುಃ ಪುಷ್ಪವೃಷ್ಟಿಭಿಃ |
ಏವಮುತ್ಯದ್ಭುತಂ ದೃಷ್ಟ್ವಾ ಸಭಾಯಾಂ ತು ತ್ರಿಶೂಲಿನಃ
ಸ್ವಭಾರ್ಗಾನುರಪಿ ದೇವೇಶಂ ಪುನಃ ಪ್ರೋವಾಚ ವಿಸ್ಮಿತಃ | || ೪೪ ||

|| ರಾಹುರುವಾಚ ||

ಸ್ಪೃಶಂತಿ ತ್ವಾಂ ಕಥಂ ಭಾವಾಃ ಸ್ವಾಧೀನಂ ಯೋಗಿನಂ ಬಲಾತ್ |
ಇಂದ್ರಿಯೈಃ ಪೂಜ್ಯಸೇ ತ್ವಂ ಹಿ ಪ್ರಾಪ್ಯೋಯಂ ವಿಷಯೈಃ ಕಥಂ|| ೪೫ ||

ಬ್ರಹ್ಮಾದಿಲೋಕಪಾಲಾನಾಂ ಪೂಜಾಂ ಗೃಹ್ಣಾಸಿ ಸರ್ವತಃ |
ನ ತ್ವಂ ಪಶ್ಯಸಿ ಕಂ ದೇವಂ ತ್ವಂ ಪೂಜಯಸಿ ಕಿಂಚ ನ || ೪೬ ||

ಈಶ್ವರೋಸಿ ಕಥಂ ಲೋಕೇ ಭಿಕ್ಷಾಭೋಜೀ ಪ್ರತಿಗ್ರಹೀ |
ಸಂಗೋಪಯಸಿ ಯೋಗೀಂದ್ರ ಗೌರೀಂ ರಮ್ಯಾಂ ಪ್ರಯಚ್ಛ ಮೇ|| ೪೭ ||

---

೪೪. ಆಗ ದೇವತೆಗಳು ಆ ಶಂಭುವಿನ ತಲೆಯಮೇಲೆ ಹೂಮಳೆಯನ್ನು ಕರೆದರು. ತ್ರಿಶೂಲಿಯ ಸಭೆಯಲ್ಲಿ ಈ ಅದ್ಭುತವನ್ನು ನೋಡಿದ ರಾಹುವು ಆಶ್ಚರ್ಯಗೊಂಡು ಮತ್ತೆ ದೇವದೇವನನ್ನು ಕುರಿತು ಇಂತೆಂದನು.

೪೫. ರಾಹುವು ಹೇಳಿದನು– ಎಲೈ ಸ್ವಾಮಿಯೇ ! ನೀನು ಯೋಗಿಯು, ನೀನೇ ಎಲ್ಲರನ್ನೂ ಎಲ್ಲವನ್ನೂ ನಡೆಸತಕ್ಕವನು. ಮತ್ತು ನಿಯಾಮಕನು. ನೀನು ಸ್ವತಂತ್ರನು. ಇಂತಹ ನಿನ್ನನ್ನು ಈಪ್ರಾಕೃತವಾದ ಕಾಮಕ್ರೋಧಗಳು ಹೇಗೆ ಮೇಲೆ ಬಿದ್ದು ತಮ್ಮ ಆಧಿಪತ್ಯವನ್ನು ತೋರಿಸುವುವು ? ಇಂದ್ರಿಯಗಳೂ ಕೂಡ ನಿನ್ನನ್ನು ಗೌರವಿಸಿ ಪೂಜಿಸುತ್ತವೆ. ಹೀಗಿರುವಲ್ಲಿ ಆ ಇಂದ್ರಿಯಗಳು ನಿನ್ನನ್ನು ಆವರಿಸಿಕೊಂಡು ಸ್ವಾಧೀನಮಾಡಿಕೊಳ್ಳುವುದು ಆಶ್ಚರ್ಯವು. ಇದು ಹೇಗೆ! ಎಂಬುದನ್ನು ತಿಳಿಸು.

೪೬. ನಿನ್ನನ್ನು ಬ್ರಹ್ಮಾದಿಗಳೂ ಲೋಕಪಾಲಕರೂ ಪೂಜಿಸುತ್ತಾರೆ. ನೀನು ಒಬ್ಬ ದೇವರನ್ನೂ ಏನನ್ನೂ ಕೇಳುವುದೇ ಇಲ್ಲ. ಮತ್ತು ಯಾವುದನ್ನೂ ಪೂಜಿಸುವುದೂ ಇಲ್ಲ.

೪೭. ಹೀಗಿದ್ದರೂ ಲೋಕಕ್ಕೆಲ್ಲಾ ಒಡೆಯನೂ ಕೇಳಿದುದನ್ನು ಕೊಡತಕ್ಕವನೂ ಆಗಿದ್ದೀಯೇ. ಅಲ್ಲದೆ ಭಿಕ್ಷೆಬೇಡಿ ಊಟಮಾಡುತ್ತೀಯೆ. ಎಲ್ಲೆಡೆಯಲ್ಲೂ ಕೊಟ್ಟ ದಾನಗಳನ್ನು ತೆಗೆದುಕೊಳ್ಳುತ್ತೀಯೆ. ನೀನು ಯೋಗಿಯು. ಹೀಗಿದ್ದರೂ ಆ ಸುಂದರಿಯಾದ ಗೌರಿಯನ್ನು ಎಲ್ಲಿ ಮುಚ್ಚಿಟ್ಟಿದ್ದೀಯೆ? ನನಗೆ ತಂದುಕೊಡು.

ಸ್ಕಂದಲಂಬೋದರಾಭ್ಯಾಂ ತ್ವಂ ಪುತ್ರಾಭ್ಯಾಂ ಸಹಿತೋಧುನಾ ।
ಭಿಕ್ಷಾಪಾತ್ರಂ ಗೃಹೀತ್ವಾ ತು ಭ್ರಮ ನಿತ್ಯಂ ಗೃಹೇ ಗೃಹೇ ॥ ೪೮ ॥

॥ ನಾರದ ಉವಾಚ ॥

ಏವಂ ಬಹುವಿಧಂ ತತ್ರ ರಾಹುರಾಹೇಶ್ವರಂ ಪ್ರತಿ ।
ಭಗವಾನಪಿ ತಚ್ಛ್ರುತ್ವಾ ನೋತ್ತರಂ ಕಿಂಚಿದಬ್ರವೀತ್ ।
ಅಥೇಶಂ ಮೌನಿನಂ ತ್ಯಕ್ತ್ವಾ ರಾಹುರ್ನಂದಿನಮಬ್ರವೀತ್ ॥ ೪೯ ॥

॥ ರಾಹುರುವಾಚ ॥

ತ್ವಂ ಮಂತ್ರೀ ಹ್ಯಸಿ ಸೇನಾನೀರ್ವಿಕಟಾನನಬಿಂಬಭೃಕ್ ।
ಏವಮಾಚರತೋ ಭ್ರಷ್ಟಂ ತ್ವಂ ಶಿಕ್ಷಯಿತುಮರ್ಹಸಿ ।
ನೋಚೇದ್ದ್ವೇಷೇಣೇಂದ್ರ ಇವ ಪತಿಷ್ಯತಿ ರಣೇ ಹತಃ ॥ ೫೦ ॥

---

೪೮. ಆಕೆಯನ್ನು ನನಗೆ ಒಪ್ಪಿಸಿ ಈ ಮಕ್ಕಳಾದ ಸ್ಕಂದ, ವಿನಾಯಕರನ್ನೂ ಜೊತೆಯಲ್ಲಿ ಕರೆದುಕೊಂಡು ಭಿಕ್ಷಾಪಾತ್ರೆಯನ್ನು ಹಿಡಿದುಕೊಂಡು ಮನೆ ಮನೆಗೂ ಸುತ್ತುತ್ತಿರು.

೪೯. ನಾರದನು ಹೇಳಿದನು– ಈ ರೀತಿಯಾಗಿ ರಾಹುವು ಆ ಈಶ್ವರನನ್ನು ಕುರಿತು ಬಹುವಾಗಿಹೇಳಿದನು. ಭಗವಂತನೂ ಕೂಡ ಅವನ ಮಾತಿಗೆ ಒಂದುತ್ತರವನ್ನೂ ಕೊಡಲಿಲ್ಲ. ಆಗ ಈಶ್ವರನು ಸುಮ್ಮನಿರುವುದನ್ನು ನೋಡಿ ರಾಹುವು ನಂದಿಯನ್ನು ಕುರಿತು ಇಂತೆಂದನು.

೫೦. ರಾಹುವು ಹೇಳಿದನು– ಎಲೈ ನಂದಿಯೇ ! ನೀನು ಶಿವನಿಗೆ ಮಂತ್ರಿಯಾಗಿದ್ದೀಯೆ. ಸೇನಾಪತಿಯಾಗಿಯೂ ಇದ್ದೀಯೆ. ಅಲ್ಲದೆ ಆ ವಿಲಕ್ಷಣವಾದ ಮುಖವುಳ್ಳವನಿಗೆ ಅಭಿಪ್ರಾಯವನ್ನು ಕೊಡುವುದರಲ್ಲಿ ಅವನಂತೆಯೇ ಅಚ್ಚಳಿಯದಂತಿದ್ದೀಯೆ. ಈ ರೀತಿಯಾಗಿ ಅಯೋಗ್ಯಕೆಲಸವನ್ನು ಮಾಡುತ್ತಿರುವ ಆ ಶಿವನಿಗೆ ಬುದ್ಧಿಯನ್ನು ಹೇಳು. ಹಾಗಿಲ್ಲದಿದ್ದರೆ ಇಂದ್ರನು ತಪ್ಪುಮಾಡಿ ಕೆಟ್ಟಂತೆ ನೀನೂ ಯುದ್ಧದಲ್ಲಿ ನಾಶವಾಗುತ್ತೀಯೆ. ಖಂಡಿತ.

|| ನಾರದ ಉವಾಚ ||

ಇತ್ಯಾಕರ್ಣ್ಯ ವಚಸ್ತಸ್ಯ ನಂದೀ ವಿಜ್ಞಾಪ್ಯಚೇಶ್ವರಂ ।
ಭ್ರೂಸಂಜ್ಞಯೈವ ಸ ತದಾ ಮತಮಾಜ್ಞಾಯ ಶೂಲಿನಃ || ೫೧ ||

ಸಂಪೂಜ್ಯ ಪ್ರೇಷಯಾಮಾಸ ರಾಹುಂ ನಂದೀ ಗಣಾಗ್ರಣೀಃ ।
ಅಥ ಜಾಲಂಧರಂ ಗತ್ವಾ ಕಥಯಾಮಾಸ ವಿಸ್ತರಾತ್ || ೫೨ ||

ಸ್ವಭರ್ಾನುಸ್ತಸ್ಯ ವೃತ್ತಾಂತಂ ಗೌರೀರೂಪಂ ಮನೋಹರಂ || ೫೩ ||

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಕೈಲಾಸಾದ್ರಾಹು ಪ್ರತ್ಯಾಗಮನಂ ನಾಮ ಏಕಾದಶೋಽಧ್ಯಾಯಃ

---

೫೧–೫೩. ನಾರದನು ಹೇಳಿದನು:– ನಂದಿಯು ರಾಹುವಿನ ಈ ಮಾತನ್ನು ಕೇಳಿ ಈಶ್ವರನಿಗೆ ಹೇಳಿದನು. ಈಶ್ವರನ ಹುಬ್ಬಿನ ಸನ್ನೆಯಿಂದಲೇ ಆ ಈಶ್ವರನ ಅಭಿಪ್ರಾಯವನ್ನು ತಿಳಿದು ನಂದಿಯು ಆ ರಾಹುವನ್ನು ಗೌರವಿಸಿ ಕಳುಹಿಸಿ ಕೊಟ್ಟನು. ಇತ್ತ ರಾಹುವು ಜಲಂಧರನ ಬಳಿಗೆ ಹೋಗಿ ಅಲ್ಲಿ ನಡೆದ ವಿಷಯ ಗಳನ್ನೂ ಮನೋಹರವಾದ ಗೌರಿಯ ಸೌಂದರ್ಯದ ವಿಷಯವನ್ನೂ ವಿಸ್ತಾರ ವಾಗಿ ತಿಳಿಸಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ರಾಹು ಪ್ರತ್ಯಾಗಮನ ವೆಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಾದಶೋಽಧ್ಯಾಯಃ ॥



॥ ನಾರದ ಉವಾಚ ॥

ಅಥ ಜಾಲಂಧರೋ ದೂತವಚಶ್ಶ್ರುತ್ವಾ ಪ್ರತಾಪವಾನ್ ।
ಸರ್ವಸೈನ್ಯಂ ಸಮಾಹೂಯ ಪ್ರಯಾಣಮಕರೋತ್ತದಾ ॥
ತತಸ್ತತಸ್ಸಮೇತಾನಾಂ ಸೈನ್ಯಾನಾಂ ಶ್ರೂಯತೇ ಧ್ವನಿಃ ॥ ೧ ॥

ಸಸ್ತ್ರೀನ್ಮಂದರಕಂದರೇಷು ಶಯಿತಾನುತ್ಥಾಪಯನ್ಕಿನ್ನರಾ
ನ್ಮೇರೋರ್ಮಂದಿರಕಂದರೇ ಪ್ರತಿರವಾನುತ್ಥಾಪಯನ್ವಾರಣಾನ್ ।
ಸಿಂಹಾನಾಂ ಚ ತತಿಂ ವ್ಯಮುಂಚತ ಪುರಃ ಪಂಥಾನಮೇವಂ ವಿಧ
ಸ್ತ್ರೈಲೋಕ್ಯಂ ಬಧಿರೀಚಕಾರ ಮಹತಃ ಸೈನ್ಯಸ್ಯ ಕೋಲಾಹಲಃ ॥ ೨ ॥

---

## ಹನ್ನೆರಡನೆಯ ಅಧ್ಯಾಯವು

೧. ನಾರದನು ಹೇಳಿದನು:- ಆಗ ಪ್ರತಾಪಶಾಲಿಯಾದ ಜಲಂಧರನು ದೂತನ ಮಾತನ್ನು ಕೇಳಿ ಎಲ್ಲಾ ಸೈನ್ಯವನ್ನೂ ಒಂದು ಸೇರಿಸಿ ಪ್ರಯಾಣವನ್ನು ಮಾಡಿದನು. ಅಲ್ಲಲ್ಲಿ ಗುಂಪುಕೂಡಿದ ಸೈನ್ಯವು ಧ್ವನಿಮಾಡುತ್ತಿದ್ದುದು ಕೇಳಿ ಬರುತ್ತಿದ್ದಿತು.

೨. ಹಾಗೆ ಸೇರಿದ ಆ ಜಲಂಧರನ ಸೈನ್ಯದ ಕಲಕಲ ಶಬ್ದವು ಮಂದರ ಪರ್ವತದ ಗುಹೆಗಳಲ್ಲಿ ಹೆಂಗಸರೊಡನೆ ಮಲಗಿರುವ ಕಿನ್ನರರನ್ನು ಎಬ್ಬಿಸಿತು. ಮೇರುವಿನ ಕಂದರಗಳಲ್ಲಿ ಪ್ರತಿಧ್ವನಿಯನ್ನುಂಟುಮಾಡುತ್ತ ಅಲ್ಲಿದ್ದ ಆನೆಗಳನ್ನು ಎಬ್ಬಿಸಿತು. ಸಿಂಹಗಳ ಗುಂಪನ್ನು ಮುಂದಕ್ಕೆ ದಾರಿಮಾಡಿ ಹೊರಡಿಸಿತು. ಈ ರೀತಿಯಾಗಿ ಮಾಡಿ ಮೂರುಲೋಕವನ್ನೂ ಕಿವುಡನ್ನಾಗಿಯೂ ಮಾಡಿತು.

ತತೋ ದುಂದುಭಿನಾದೋಽಭೂತ್ ಪೀಠೇ ಜಾಲಂಧರೇ ನೃಪ ।
ತನ್ನಿನಾದೇನ ಶೂರಾಣಾಂ ಪ್ರಿಯೇಣ ಮಹತಾ ತದಾ ॥ ೩ ॥

ಕಂಪಂತಿ ಗಿರಯಸ್ತುಂಗಾಃ ಪ್ರಾಸಾದಾ ವಿಚಲಂತಿ ಚ ।
ಸಪ್ತಸಾಗರಗರ್ಭೇಭ್ಯೋ ನಿಸ್ಸೃತಾ ದೈತ್ಯದಾನವಾಃ ॥ ೪ ॥

ಸನ್ನದ್ಧಾಶ್ಚಾತಿಗರ್ಜಂತಿ ನಾನಾವಾಹನಸಂಯುತಾಃ ।
ಹೇಷಾರವೋ ಮಹಾನಾಸೀತ್ ವಾಜಿನಾಂ ವಾಹ್ಯತಃ ಪುರಃ ॥ ೫ ॥

ರಥಾಂಗೇನಾಥ ಸಂಘೃಷ್ಟಾ ಧರಾ ಸಂಚಲಿತೇವ ಸಾ ।
ಚಾಲಿತೈರ್ಗಜಯೂಥೈಶ್ಚ ಪೃಥ್ವೀ ರುದ್ಧಾ ಸಕಾನನಾ ॥ ೬ ॥

ಜಾಲಂಧರೇರಿತೈರ್ಭೀಮೈರಯುತೈಃ ಸ್ಯಂದನಸ್ಥಿತೈಃ ।
ಅಶ್ವಾರ್ಬುದಸಹಸ್ರೇ ದ್ವೇ ಅರ್ಬುದಂ ದಂತಿನಾಮಪಿ ॥ ೭ ॥

---

೩-೪. ಆ ಮೇಲೆ ಆ ಜಲಂಧರ ಪೀಠದಲ್ಲಿ ದುಂದುಭಿಯನ್ನು ಬಡಿದರು. ಶೂರರಿಗೆ ಸಂತೋಷವನ್ನುಂಟುಮಾಡುವ ಆ ಧ್ವನಿಯಿಂದ ಎತ್ತರವಾದ ಪರ್ವತಗಳು ನಡುಗಿದುವು. ದೊಡ್ಡ ದೊಡ್ಡ ಮನೆಗಳು ಅಲ್ಲಾಡಿದುವು. ಏಳು ಸಮುದ್ರಗಳ ಮಧ್ಯೆ ಇದ್ದ ದೈತ್ಯದಾನವರೆಲ್ಲರೂ ಯುದ್ಧಕ್ಕೆ ಹೊರಟರು.

೫. ಯುದ್ಧದ ಉಡುಪನ್ನು ಹಾಕಿಕೊಂಡು ಯುದ್ಧಕ್ಕೆ ಸಿದ್ಧರಾಗಿ ವಾಹನಗಳ ಮೇಲೆ ಕುಳಿತಿರುವ ಆ ಸೈನಿಕರು ಬಲವಾಗಿ ಸಿಂಹನಾದ ಮಾಡುತ್ತ ಇದ್ದರು. ಆ ಸೈನಿಕರನ್ನು ಹೊತ್ತಿರುವ ಕುದುರೆಗಳ ಕೆನೆಯುವಿಕೆಯು ಬಹಳ ಹೆಚ್ಚಾಗಿದ್ದಿತು.

೬. ರಥದ ಆ ಚಕ್ರಗಳಿಂದ ತಿಕ್ಕಲ್ಪಡುತ್ತಿರುವ ಭೂಮಿಯು ಅಲ್ಲಾಡುತ್ತಿರುವಂತೆ ಕಂಡುಬರುತ್ತಿದ್ದಿತು. ಸಂಚರಿಸುತ್ತಿರುವ ಆನೆಗಳು ಕಾಡುಗಳಿಂದ ಕೂಡಿದ ಭೂಮಿಯನ್ನೆಲ್ಲಾ ಆವರಿಸಿದ್ದವು.

೭-೮. ಜಲಂಧರನ ಸೈನ್ಯದಲ್ಲಿ ಹೊರಡಿಸಿದ್ದ ರಥಗಳು ರಥಿಕರಮ ಹತ್ತು ಸಾವಿರವಿದ್ದುವು. ಕುದುರೆಯ ರಾಹುತರು ಎರಡು ಸಾವಿರ ಅರ್ಬುದವಿದ್ದರು.

ರರಾಜ ಸೈನ್ಯಂ ಲಕ್ಷೈಕಂ ರಥಾನಾಂ ಸಪತಾಕಿನಾಂ ।
ಪರಾರ್ಧಂ ನವತಿಃ ಕೋಟ್ಯೋ ದೃಶ್ಯಂತೇ ಮುಖ್ಯನಾಯಕಾಃ ॥
ನಿರ್ಜಗಾಮ ಮಹಾಸೈನ್ಯಂ ಛತ್ರೈಸ್ಸಂಛಾದ್ಯ ಭಾಸ್ಕರಂ ॥ ೮ ॥

ಅಸೀತ್ಪಿಂಜರಪಾಂಡುಪಂಕಜವನಂ ಶ್ವೇತಾರ್ಕಪತ್ರೈಃ ಕ್ವಚಿತ್
ಮಾಯೂರಾತಪವಾರಣೈಃ ಕ್ವಚಿದಭೂದುನ್ನೀಲನೀಲೋತ್ಪಲಂ ।
ಉನ್ಮೇಘಂ ಕ್ವಚಿದೂರ್ಧ್ವಧೂಲಿಪಟಲೈರ್ಯಸ್ಯ ಪ್ರಯಾಣೇಽಭವತ್
ಸದ್ವೀಚಿಕ್ವಚಿದಂಬರಂ ಸರ ಇವೋತ್ಸರ್ಪತ್ಪತಾಕಾಪದೈಃ ॥ ೯ ॥

ಗಜವಾಜಿಮಯೀ ಭೂಮಿರ್ಧ್ವಜಚ್ಛತ್ರಮಯಂ ನಭಃ ।
ದಿಕ್ಚಕ್ರಂ ಚಾಮರಮಯಂ ದೈತ್ಯಸೈನ್ಯೇ ಪ್ರಸರ್ಪತಿ ॥ ೧೦ ॥

---

ಆನೆಗಳ ಸೈನ್ಯವು ಒಂದು ಅರ್ಬುದವಿದ್ದಿತು. ಧ್ವಜಗಳನ್ನು ಕಟ್ಟಿ ಸಾಮಾನ್ಯ ಜನರು ಕುಳಿತಿದ್ದ ರಥಗಳ ಸೈನ್ಯವು ಒಂದು ಲಕ್ಷವಿದ್ದಿತು. ಒಟ್ಟು ಆ ಜಲಂಧರನ ಸೈನ್ಯವೆಲ್ಲವೂ ಪರಾರ್ಧವೂ ತೊಂಭತ್ತುಕೋಟಿಯೂ ಇದ್ದು ಪ್ರಕಾಶಿಸುತ್ತಿದ್ದಿತು. ಈ ರೀತಿಯಾದ ಸೈನ್ಯವು ತಾವು ಹಿಡಿದಿರುವ ಛತ್ರಿಗಳಿಂದ ಸೂರ್ಯನು ಕಾಣದಂತೆ ಮರೆಮಾಡಿ ಹೊರಟಿತು.

೯. ಆ ಜಲಂಧರನ ಸೈನ್ಯದಲ್ಲಿ ಬಿಳಿಛತ್ರಿಯನ್ನು ಕೆಲವರು ಹಿಡಿದಿದ್ದರು. ಅದನ್ನು ನೋಡಿದರೆ ಕೆಲವೆಡೆಯಲ್ಲಿ ಆಕಾಶವು ಕುಸುಮುಗಳಿಂದ ಕೂಡಿರುವ ಪುಂಡರೀಕ (ಬಿಳಿಕಮಲ) ಗಳಿಂದ ಕೂಡಿದಂತೆ ಕಾಣುತ್ತಿದ್ದಿತು. ಕೆಲವೆಡೆಯಲ್ಲಿ ನವಿಲಿನ ಗರಿಯ (ಹಸುರಾದ) ಛತ್ರಿಯನ್ನು ಹಿಡಿದಿದ್ದುದರಿಂದ ಆ ಅಂತರಿಕ್ಷವು ನೀಲೋತ್ಪಲ (ಕನ್ನೈದಲೆ) ದಿಂದ ಕೂಡಿದ್ದಂತೆ ಕಾಣುತ್ತಿದ್ದಿತು. ಪ್ರಯಾಣ ಮಾಡುತ್ತಿದ್ದಾಗ ಮೇಲಕ್ಕೆ ಎದ್ದ ಧೂಳುಗಳ ಗುಂಪು ಮೇಲುಗಡೆಯಲ್ಲಿ ಮೇಘಗಳು ಎದ್ದಿರುವಂತೆ ಕಾಣುತ್ತಿದ್ದಿತು. ಹೋಗುತ್ತಿರುವಾಗ ಅಲ್ಲಾಡುತ್ತಿದ್ದ ಬಾವುಟಗಳನ್ನು ನೋಡಿದರೆ ಆಕಾಶವು ಅಲೆಗಳಿಂದ ಕೂಡಿದ ಸರೋವರದಂತೆ ಕಾಣುತ್ತಿದ್ದಿತು.

೧೦. ಆ ಜಲಂಧರನ ಸೈನ್ಯವು ಹೋಗುತ್ತಿದ್ದರೆ ಭೂಮಿಯೆಲ್ಲವೂ ಆನೆ, ಕುದುರೆಗಳ ಮಯವಾದಂತೆಯೂ ಆಕಾಶವೆಲ್ಲವೂ ಧ್ವಜ ಛತ್ರಿಗಳ ಮಯವಾದಂತೆಯೂ, ದಿಕ್ಕುಗಳೆಲ್ಲವೂ ಚಾಮರಮಯವಾದಂತೆಯೂ ಕಾಣುತ್ತಿದ್ದಿತು.

ತತೋ ಜಾಲಂಧರೋ ದೈತ್ಯಃ ಪ್ರಯಾಣಾಯ ಸಮುತ್ಸುಕಃ ।
ಸ್ಕಂಧೇ ಚಾರೋಪಯಚ್ಛಕ್ತಿಂ ನಾನಾರತ್ನವಿಭೂಷಿತಾಂ || ೧೧ ||

ಆಜಗಾಮ ಮಹಾವಿಷ್ಣುಂ ಪ್ರಷ್ಟುಂ ಸಾಗರವಾಸಿನಂ ।
ಅಭಿವಾದ್ಯ ಜಗಾದಾಥ ಹರಿಂ ಜಾಲಂಧರಸ್ತ್ವಿದಂ || ೧೨ ||

|| ಜಾಲಂಧರ ಉವಾಚ ||

ಭೋಗಾರ್ಥಂ ಕಿಂ ಪ್ರಯಚ್ಛಾಮಿ ತುಭ್ಯಂ ಭಾವುಕ ಕಥ್ಯತಾಂ || ೧೩ ||

|| ನಾರದ ಉವಾಚ ||

ಶ್ರುತ್ವಾ ನಾರಾಯಣೋ ವಾಕ್ಯಮಬ್ಧಿಜಸ್ಯ ಮುದಾನ್ವಿತಃ ।
ಉವಾಚ ಕಿಂ ಕರೋಮೀತಿ ಪ್ರಿಯಂ ಸಿಂಧುಸುತೇಪ್ಸಿತಂ ||
ಇತ್ಯುಕ್ತಸ್ಸ ಪ್ರಹೃಷ್ಟೋಽಥ ಹರಿಂ ಪ್ರೋವಾಚ ಸತ್ವರಃ || ೧೪ ||

---

೧೧. ಆಗ ಪ್ರಯಾಣಕ್ಕೆ ಸಿದ್ಧನಾದ ಜಲಂಧರ ದೈತ್ಯನು ನಾನಾ ರತ್ನಗಳಿಂದ ಕೂಡಿದ ಶಕ್ತ್ಯಾಯುಧವನ್ನು ಹೆಗಲಮೇಲೆ ಇಟ್ಟುಕೊಂಡನು.

೧೨. ಆಗ ಜಲಂಧರನು ಕ್ಷೀರಸಮುದ್ರದಲ್ಲಿ ಮಲಗಿರುವ ವಿಷ್ಣುವಿಗೆ ಹೇಳಿ ಹೋಗಲು ಅವನ ಬಳಿಗೆ ಬಂದು ನಮಸ್ಕರಿಸಿ ಇಂತೆಂದನು.

೧೩. ಜಲಂಧರನು ಹೇಳಿದನು– ಎಲೈ ಭಾವನೇ ! ನಿನ್ನ ಭೋಗಕ್ಕೆ ಅಪೇಕ್ಷಿತವಾದುದೇನು ಬೇಕಾಗಿರುವುದು ? ನಾನು ನಿನಗೆ ಏನನ್ನು ಕೊಡಲಿ ? ಹೇಳು.

೧೪. ನಾರದನು ಹೇಳಿದನು– ಸಮುದ್ರನ ಮಗನಾದ ಜಲಂಧರನ ಈ ಮಾತನ್ನು ಕೇಳಿ ನಾರಾಯಣನು ಸಂತೋಷಪಟ್ಟು ಎಲೈ ಜಲಂಧರನೇ ! ನೀನು ಕೇಳಿದುದನ್ನು ನೋಡಿ ಬಹಳ ಸಂತೋಷವಾಯಿತು. ನನಗೆ ನೀನು ಕೇಳಿದುವನ್ನು ನೋಡಿ ಬಹಳ ಸಂತೋಷವಾಯಿತು. ನಿನಗೇನು ಬೇಕು ? ಕೇಳಿಕೋ. ಎಂದನು. ವಿಷ್ಣುವು ಹೀಗೆ ಹೇಳಿದುದನ್ನು ನೋಡಿ ಜಲಂಧರನು ಸಂತೋಷದಿಂದ ಇಂತೆಂದನು.

|| ಜಾಲಂಧರ ಉವಾಚ ||

ಯಾಮಿ ಯೋದ್ಧುಂ ರಣೇಹಂ ತ್ವಂ ಸುಖೀ ತಿಷ್ಠ ಚ ಸಾಗರೇ || ೧೫ ||

|| ನಾರದ ಉವಾಚ ||

ಲಕ್ಷ್ಮ್ಯಾ ದತ್ತಾಕ್ಷತಸ್ತತ್ರ ಕೇಶವೇನಾಥ ಪೂಜಿತಃ |
ಸ ನಿರ್ಗತ್ಯ ಹರೇಃ ಸ್ಥಾನಾತ್ ಸಮುದ್ರಂ ದ್ರಷ್ಟುಮಾಗತಃ || ೧೬ ||

ಸೋರ್ಣವಂ ಪ್ರಣಿಪತ್ಯಾಹ ತಾತ ಯಾಸ್ಯಾಮಿ ದೂರತಃ |
ನೀಲಕಂಠಂ ರಣೇ ಜೇತುಮನುಜ್ಞಾಂ ದಾತುಮರ್ಹಸಿ || ೧೭ ||

ಪುತ್ರಸ್ಯ ವಚನಂ ಶ್ರುತ್ವಾ ಯಿಯಾಸೋಶ್ಶಂಕರಂ ಪ್ರತಿ |
ಸಿಂಧುರಾಜೇನ ಸೋಪ್ಯುಕ್ತಃ ಪುತ್ರ ತಂ ತಾಪಸಂ ತ್ಯಜ || ೧೮ ||

---

೧೫. ಜಲಂಧರನು ಹೇಳಿದನು– ಎಲೈ ಭಾವನೇ ! ನಾನು ರಣರಂಗಕ್ಕೆ ಯುದ್ಧಮಾಡಲು ಹೋಗುತ್ತೇನೆ. ನೀನು ಸುಖವಾಗಿ ಈ ಕ್ಷೀರಸಾಗರದಲ್ಲಿ ಮಲಗಿರು.

೧೬. ನಾರದನು ಹೇಳಿದನು– ಆಗ ಜಲಂಧರನು ಹೊರಡಲು ಲಕ್ಷ್ಮಿಯು ಅಕ್ಷತೆಯನ್ನು ಹಾಕಿ ಆಶೀರ್ವದಿಸಿದಳು. ವಿಷ್ಣುವೂ ಕೂಡ ಆಶೀರ್ವದಿಸಿದನು. ಅನಂತರ ಅಲ್ಲಿಂದ ಹೊರಟು ಸಮುದ್ರರಾಜನನ್ನು ನೋಡಲು ಬಂದನು.

೧೭. ಅಲ್ಲಿಗೆ ಹೋಗಿ ಸಮುದ್ರರಾಜನಿಗೆ ನಮಸ್ಕರಿಸಿ, ತಾತ ! ನಾನು ದೂರದೇಶಕ್ಕೆ ಹೋಗುತ್ತೇನೆ. ಅಲ್ಲಿ ನೀಲಕಂಠನಾದ ಶಿವನನ್ನು ಜಯಿಸಬೇಕು. ಅಪ್ಪಣೆಯನ್ನು ಕೊಡು. ಎಂದನು.

೧೮. ಶಂಕರನನ್ನು ಜಯಿಸಲು ಮಗನು ಹೋಗುವುದನ್ನು ಕೇಳಿ ಸಮುದ್ರರಾಜನು ಎಲೈ ಮಗನೇ ! ಆ ತಪಸ್ವಿಯನ್ನು ಜಯಿಸಲು ಹೋಗಬೇಡ. ಸುಮ್ಮನಿರು.

ಭುಂಕ್ಷ್ವ ರಾಜ್ಯಂ ಮಯಾ ದತ್ತಂ ತಾಪಸಂ ತ್ಯಜ ದೂರತಃ ।
ಅತ್ಯದ್ಭುತಃ ಪ್ರತಾಪಸ್ತೇ ತ್ವತ್ತುಲ್ಯೋ ನಾಸ್ತಿ ಭೂಮಿಪಃ ॥ ೧೯ ॥

ಸ್ವರ್ಗಾದಧಿಕತಾಂ ನೀತಂ ತ್ವಯಾ ವತ್ಸ ಧರಾತಳಂ ।
ತವ ರಾಜ್ಯೇ ವಸುಮತೀ ವೈಕುಂಠ ಇವ ರಾಜತೇ ॥ ೨೦ ॥

ಯೋ ದೇವೋ ದುರ್ಜಯೋ ದೈತ್ಯೈರಾನೀತಸ್ಸಹ ಸಶ್ರಿಯಾ ।
ಮಮಾಂತಿಕೇ ವತ್ಸ ವಸ ಶಂಕರಂ ಭಿಕ್ಷುಕಂ ತ್ಯಜ ॥ ೨೧ ॥

ಏವಮುಕ್ತೋ ಹ್ಯರ್ಣವೇನ ಗಿರಿಜಾಂ ಪ್ರತಿ ರಾಗವಾನ್ ।
ಪಿತೃವಾಕ್ಯಮವಿಜ್ಞಾಯ ಆಗತ್ಯ ಸುಭಟಾನ್ ಸ್ವಕಾನ್ ॥
ಸಜ್ಜೀಭೂತಂ ತು ಯುದ್ಧಾಯ ಜಾಲಂಧರಮುವಾಚ ಹ ॥ ೨೨ ॥

---

೧೯. ನಾನು ಕೊಟ್ಟಿರುವ ರಾಜ್ಯವು ಸಾಕು. ಅದನ್ನೇ ಸುಖವಾಗಿ ಅನುಭವಿಸು. ಆ ತಪಸ್ವಿಯಾದ ಶಂಕರನನ್ನು ದೂರದಿಂದಲೇ ಬಿಟ್ಟುಬಿಡು. ನೀನು ಬಹಳ ಪ್ರತಾಪವುಳ್ಳವನು. ನಿನ್ನ ಪ್ರತಾಪವು ಅದ್ಭುತವಾದುದು. ನಿನಗೆ ಸಮಾನನಾದ ರಾಜನು ಮತ್ತೊಬ್ಬನಿಲ್ಲ. ಆದರೆ ಆ ತಪಸ್ವಿಯ ತಂಟೆಗೆ ಹೋಗಬೇಡ.

೨೦. ಎಲೈ ಮಗನೇ ! ನೀನು ಭೂಮಿಯನ್ನು ಸ್ವರ್ಗಕ್ಕಿಂತಲೂ ಹೆಚ್ಚಾದುದನ್ನಾಗಿ ಮಾಡಿರುತ್ತೀಯೆ. ನಿನ್ನ ರಾಜ್ಯದಲ್ಲಿ ಭೂಮಿಯು ವೈಕುಂಠದ ಹಾಗೆ ಇರುತ್ತ ಪ್ರಕಾಶಿಸುತ್ತಿದೆ.

೨೧. ದೈತ್ಯರಿಂದ ಜಯಿಸಲಾಗದವನಾದ ವಿಷ್ಣುವನ್ನು ಜಯಿಸಿ ಲಕ್ಷ್ಮಿಯೊಡನೆ ಇಲ್ಲಿಗೆ ಬರುವಂತೆ ಮಾಡಿದ್ದೀಯೆ. ನಿನ್ನ ಶೌರ್ಯವು ಅಧಿಕವಾಗಿದೆ. ನನ್ನ ಹತ್ತಿರದಲ್ಲಿಯೇ ಇದ್ದುಕೊಂಡಿರು. ಆ ಭಿಕ್ಷುಕನಾದ ಶಂಕರನ ಸಂಗಡ ನಿನಗೇನು ? ಅವನನ್ನು ಬಿಟ್ಟುಬಿಡು.

೨೨. ಸಮುದ್ರರಾಜನು ಹೀಗೆ ಹೇಳಿದರೂ ಕೂಡ ಆ ಪಾರ್ವತಿಯಲ್ಲಿ ಮನಸ್ಸುಳ್ಳ ಜಲಂಧರನು ತಂದೆಯ ಮಾತಿನ ಗುಟ್ಟನ್ನು ತಿಳಿಯದೆ ಬಂದು ತನ್ನ ಭಟರೆಲ್ಲರನ್ನೂ ಯುದ್ಧಕ್ಕೆ ಸಿದ್ಧಮಾಡಿದನು. ಆಗ ಜಲಂಧರನನ್ನು ಕುರಿತು ಹೆಂಡತಿಯಾದ ವೃಂದೆಯು ಇಂತೆಂದಳು.

|| ವೃಂದೋವಾಚ ||

ನಾಥ ಯಟುದ್ಧಂ ನ ಕರ್ತವ್ಯಂ ರಾಜೇಂದ್ರ ಕುತ್ಸಯೋಗಿನಾ |
ಮನೋ ನಿವರ್ತ್ಯ ಮಾಂ ಪಶ್ಯ ಪ್ರವೃತ್ತಂ ಪಾರ್ವತೀಂ ಪ್ರತಿ || ೨೩ ||

ಗೌರೀಂ ತ್ವಂ ವಾಂಛಸೇ ಕಸ್ಮಾತ್ಪಾರ್ವತೀ ಕಿಂ ಮಮಾಧಿಕಾ |
ತಪಸ್ವಿನೀ ನಿರಾಲಂಬಾ ಸಂಸಕ್ತಾ ಸ್ಥಾಣವೇ ಸದಾ || ೨೪ ||

ಸುತಾಸುರಾಗಿಣೀ ವಂಧ್ಯಾ ತಥಾ ಕೃತ್ರಿಮಪುತ್ರಿಕಾ |
ವೃಥಾ ಸ್ತುತಾ ನಾರದೇನ ತಾಂ ತ್ಯಜಸ್ವ ಭಜಸ್ವ ಮಾಂ || ೨೫ ||

|| ನಾರದ ಉವಾಚ ||

ಇತಿ ವೃಂದಾವಚಶ್ಶ್ರುತ್ವಾ ಪ್ರತ್ಯುವಾಚಾರ್ಣವಾತ್ಮಜಃ || ೨೬ ||

---

೨೩. ವೃಂದೆಯು ಹೇಳಿದಳು– ಎಲೈ ನಾಥನೇ ! ಆ ಅಯೋಗ್ಯನಾದ ಯೋಗಿಯೊಡನೆ ಯುದ್ಧಮಾಡಬೇಡ. ಆ ಪಾರ್ವತಿಯಲ್ಲಿಟ್ಟಿರುವ ಮನಸ್ಸನ್ನು ಹಿಂತಿರುಗಿಸು. ನನ್ನನ್ನು ನೋಡು.

೨೪. ಆ ಗೌರಿಯನ್ನು ಏತಕ್ಕೆ ನೀನು ಅಪೇಕ್ಷಿಸುತ್ತೀಯೆ ? ಆಕೆಯು ನನಗಿಂತಲೂ ಸುಂದರಿಯೆ ? ಅವಳು ತಪಸ್ಸುಮಾಡುವವಳು. ಅವಳಿಗೆ ಆಶ್ರಯವನ್ನು ಕೊಡುವಂತಹ ನೆಂಟರೇ ಇಲ್ಲ. ಅಲ್ಲದೆ ವಿಷಯದ ವಾಸನೆ ಯನ್ನೇ ಕಾಣದ ಒಣಮರದಂತಿರುವ ಸ್ಥಾಣು (ಶಿವ) ವಿನಲ್ಲಿ ಯಾವಾಗಲೂ ಸೇರಿಕೊಂಡಿರುವಳು.

೨೫. ಮಕ್ಕಳಾಗಬೇಕೆನ್ನುವಳು. ಆದರೆ ಬಂಜೆ. ತನ್ನ ಹೊಟ್ಟೆಯಲ್ಲಿ ಹುಟ್ಟದ. ಅವರಿವರ ಮಕ್ಕಳನ್ನು ತಂದು ತನ್ನ ಮಕ್ಕಳೆಂದು ಸಾಕುತ್ತಿರುವಳು. ನಾರದನಾದರೋ ವ್ಯರ್ಥವಾಗಿ ಆಕೆಯನ್ನು ಹೊಗಳಿದನು. ಅವಳನ್ನು ಬಿಟ್ಟು ಬಿಡು. ನನ್ನಲ್ಲಿ ರಮಿಸು.

೨೬. ನಾರದನು ಹೇಳಿದನು– ವೃಂದೆಯು ಈರೀತಿ ಹೇಳಿದ್ದನ್ನು ಕೇಳಿ ಸಮುದ್ರಪುತ್ರನಾದ ಜಲಂಧರನು ಇಂತೆಂದನು.

|| ಜಾಲಂಧರ ಉವಾಚ ||

ಅದೃಷ್ಟ್ವಾ ಪಾರ್ವತೀರೂಪಂ ಮಚ್ಚೇತೋ ನ ನಿವರ್ತತೇ ।
ವೃಂದೇ ತ್ವಯಾ ಜನಪದೋ ರಾಜಧಾನೀ ಪ್ರಪಾಲ್ಯತಾಂ ||
ಸ್ಮರ್ತವ್ಯೋಽಹಂ ಸದಾ ಚಂಡಿ ಯದಿ ಮಾಂ ಹಂತಿ ಶಂಕರಃ || ೨೭ ||

|| ನಾರದ ಉವಾಚ ||

ಇತಿ ಭರ್ತೃರ್ವಚಃ ಶ್ರುತ್ವಾ ವೃಂದಾ ಹಾಸಸಮನ್ವಿತಾ ।
ಜಗಾಮ ಶಿಬಿಕಾರೂಢಾ ಪೀಠಂ ಜಾಲಂಧರಂ ತದಾ || ೨೮ ||

ಅಥ ಪ್ರತಸ್ಥೇ ಕೈಲಾಸಂ ಸಿಂಧುಸೂನುರ್ಮಹಾಯಶಾಃ ।
ಮಹಾಪದ್ಮಸಹಸ್ರಾಣಾಂ ಷಷ್ಟ್ಯಾ ಸೈನ್ಯೇನ ಸಂವೃತಃ || ೨೯ ||

ಅತ್ರಾಂತರೇ ಪರಿತ್ಯಜ್ಯ ಕೈಲಾಸಂ ಶಂಕರೋ ಗತಃ ।
ಗಣಪುತ್ರಪ್ರಿಯಾಯುಕ್ತಃ ಕೈಲಾಸಂ ಮಾನಸೋತ್ತರಂ || ೩೦ ||

---

೨೭. ಜಲಂಧರನು ಹೇಳಿದನು– ಎಲೈ ವೃಂದೆಯೇ ! ಆ ಪಾರ್ವತಿಯ ಸೌಂದರ್ಯವನ್ನು ನೋಡಿದಲ್ಲದೆ ನನ್ನ ಮನಸ್ಸು ಹಿಂತಿರುಗುವುದಿಲ್ಲ. ನೀನು ನನ್ನ ದೇಶವನ್ನೂ ರಾಜಧಾನಿಯನ್ನೂ ಕಾಪಾಡಿಕೊಂಡಿರು. ಎಲೈ ಹಟಶೀಲಳೇ ! ಒಂದು ವೇಳೆ ನನ್ನನ್ನು ಶಂಕರನು ಕೊಂದರೆ ನನ್ನನ್ನು ಸ್ಮರಿಸುತ್ತಿರು.

೨೮. ನಾರದನು ಹೇಳಿದನು– ಗಂಡನು ಹೀಗೆ ಹೇಳಿದುದನ್ನು ಕೇಳಿ ವೃಂದೆಯು ನಗುತ್ತಾ ಪಲ್ಲಕ್ಕಿಯನ್ನು ಹತ್ತಿ ಮತ್ತೆ ಜಲಂಧರ ಪೀಠಕ್ಕೆ ಹಿಂತಿರುಗಿ ಹೋದಳು.

೨೯. ಸಿಂಧುರಾಜನ ಮಗನಾದ ಜಲಂಧರನು ಅರವತ್ತು ಸಾವಿರ ಮಹಾ ಪದ್ಮಗಳ ಸೈನ್ಯಗಳನ್ನೂ ಸೇರಿಸಿಕೊಂಡು ಕೈಲಾಸದ ಮೇಲೆ ಧಾಳಿಮಾಡಲು ಹೊರಟನು.

೩೦. ಇವನು ಬರುವಷ್ಟರೊಳಗೆ ಶಂಕರನು ಕೈಲಾಸವನ್ನು ಬಿಟ್ಟು ತನ್ನ ಹೆಂಡತಿ, ಮಕ್ಕಳು, ಗಣಗಳನ್ನು ಕರೆದುಕೊಂಡು ಮಾನಸಕ್ಕೆ ಉತ್ತರದಲ್ಲಿರುವ ಕೈಲಾಸ ಭಾಗಕ್ಕೆ ಹೋದನು. ಆ ಭಾಗಕ್ಕೆ ಮಾನಸೋತ್ತರ ಪರ್ವತವೆಂದು ಹೆಸರು.

ಜಾಲಂಧರಸ್ತತಃ ಪ್ರಾಪ್ತಃ ಕೈಲಾಸಂ ಪ್ರಥಮೇಽಹನಿ ।
ಸೇನಾಂ ಸಂಸ್ಥಾಪ್ಯ ಕೈಲಾಸೇ ವಿಲೋಕನಕುತೂಹಲೀ ॥ ೩೧ ॥

ದಿವ್ಯಕೇಸರಮಂದಾರರಜಃಪುಂಜಪರೀಸ್ಕೃತಾಃ ।
ಶೀತಾಂಬುಶೀಕರಾಸಾರೈಃ ಪ್ರಭುಗ್ನಾ ವಾಂತಿ ವಾಯವಃ ॥ ೩೨ ॥

ಯತ್ರ ಸಿದ್ಧಾಂಗನಾಪೀನಸ್ತನೋತ್ತುಂಗತರಂಗಿಣಃ ।
ಮಂದಾರಮಂಕರಂದಾಢ್ಯಾಃ ಸುಂದರಾ ವಾಂತಿ ವಾಯವಃ ॥ ೩೩ ॥

ಯತ್ರಾ ಶೋಕರುಚಿಸ್ನಿಗ್ಧ ಪಾದನ್ಯಾಸಂ ಚ ಯೋಷಿತಾಂ ।
ವಿಲೋಕ್ಯ ದಾನವೇಂದ್ರೋಽಭೂನ್ಮನೋರಥಸಮಾಕುಲಃ ॥ ೩೪ ॥

---

೩೧. ಇತ್ತ ಜಲಂಧರನು ಮೊದಲನೆಯ ದಿನವೇ ಕೈಲಾಸಕ್ಕೆ ಬಂದನು. ಅಲ್ಲಿ ಸೇನೆಯ ಶಿಬಿರವನ್ನು ಬಿಟ್ಟು ಅಲ್ಲಿ ಶಂಭುವಿರುವನೇ ? ಇಲ್ಲವೇ ? ನೋಡಬೇಕೆಂಬ ಆಸೆಯಿಂದ ಹೋದನು.

೩೨. ಅಲ್ಲಿ ಗಾಳಿಯು ಉತ್ತಮವಾದ ಕೇಸರಗಳನ್ನೂ ಮಂದಾರಪುಷ್ಪದ ಧೂಳಿಯನ್ನೂ ಹೊತ್ತುಕೊಂಡು ಶೀತವಾಗಿರುವ ನೀರಿನ ತುಂತುರುಗಳನ್ನು ಹೊತ್ತುಕೊಂಡು ನಮ್ರವಾಗಿ ಬೀಸುತ್ತಿದ್ದಿತು.

೩೩. ಅಲ್ಲಿ ಸಿದ್ಧಸ್ತ್ರೀಯರ ದಪ್ಪವಾದ ಸ್ತನಗಳಿಗೆ ತಗುಲಿ ತರಂಗ ತರಂಗ ವಾಗುತ್ತಾ ಮಂದಾರಪ್ರಷ್ಪದ ಮಕರಂದ (ಹೂವಿನರಸ) ದಿಂದ ಕೂಡಿದ ಮನೋಹರವಾದ ಗಾಳಿಯು ಬೀಸುತ್ತಿದ್ದಿತು.

೩೪. ಅಲ್ಲಿ ಹೆಂಗಸರು ಹೆಜ್ಜೆ ಇಡುವುದರಿಂದ ಅವು ಅಶೋಕದ ಬಣ್ಣವನ್ನು ಹೊಂದುತ್ತಿದ್ದುವು. ಎಂದರೆ ಕೆಂಪಾಗಿ ಮನೋಹರವಾಗಿರುತ್ತಿದ್ದವು. ಅಂತಹ ಜಾಗವನ್ನು ನೋಡಿ ಆ ದಾನವೇಂದ್ರನು ಬಹು ಉತ್ಸಾಹದಿಂದ ಕೂಡಿ ಕೊಂಡನು.

ದದರ್ಶ ಸ ತು ಕಾಂತಾರೇ ಪತಿತಾ ಮಾಲತೀ ಸ್ರಜಃ ।
ವಿದ್ಯಾಧರೀ ಕುಚಾಕ್ರಾಂತಕುಂಕುಮಾರುಣಷಟ್ಪದಾಃ ॥ ೩೫ ॥

ಯತ್ರ ದೇವಾಂಗನಾಗಾತ್ರಪರಿಷ್ವಂಗರಸಾಕುಲಾಃ ।
ಪ್ರಾಪ್ನುವಂತಿ ಸುರಾಃ ಪ್ರೀತಿಂ ಸ್ವಬಿಂಬಾಲೋಕಹರ್ಷಿತಾಃ ॥ ೩೬ ॥

ಯತ್ರ ಕಿನ್ನರಕಾಂತಾನಾಂ ಸುರತವ್ಯಂಜಿತಪ್ರಭಾಃ ।
ವಿಭಾಂತಿ ಸರ್ವತೋ ರಾಜನ್ ಮಂದಾರಾಶೋಕಪಲ್ಲವಾಃ ॥ ೩೭ ॥

ಯತ್ರ ಶಂಭುಗಣಾಕ್ರಾಂತ ನಾನಾಖೇಲಾಕುಲಾ ದ್ರುಮಾಃ ।
ಭಾಂತಿ ಮನ್ಮಥಭೂಪಾಲಯಶಸಾವಿಧೃತಾ ಇವ ॥ ೩೮ ॥

---

೩೫. ಅಲ್ಲಿರುವ ಕಾಡಿನಲ್ಲಿ ಬಹುವಾಗಿ ಜಾಜಿಯ ಹೂಮಾಲೆಗಳು ಬಿದ್ದಿದ್ದುವು. ಅವುಗಳನ್ನು ವಿದ್ಯಾಧರ ಹೆಂಗಸರು ಹಾಕಿಕೊಂಡಿದ್ದುದರಿಂದ ಅವರು ಸ್ತನದಲ್ಲಿ ಪೂಸಿಕೊಂಡಿದ್ದ ಕುಂಕುಮಕೇಸರಿಯು ಅವಕ್ಕೆ ಅಂಟಿಕೊಂಡು ಕೆಂಪಗಾಗಿದ್ದುವು. ಮತ್ತು ಭ್ರಮರಗಳು ಅವಕ್ಕೆ ಮುತ್ತಿಕೊಂಡಿದ್ದುವು.

೩೬. ಆ ಸ್ಥಳದಲ್ಲಿರುವ ದೇವತೆಗಳು ದೇವಾಂಗನೆಯನ್ನು ಆಲಿಂಗನೆ ಮಾಡಿಕೊಳ್ಳಲು ಹೋದಾಗ ಅವರಲ್ಲಿ ತಾವು ಕನ್ನಡಿಯಲ್ಲಿ ಬಿಂಬಿಸಿ ಕಾಣುವಂತೆ ಕಾಣುತ್ತಿರುವುದನ್ನು ಕಂಡು ಇನ್ನೂ ಹೆಚ್ಚಿನ ಆಸಕ್ತಿಯನ್ನು ಹೊಂದುತ್ತಿದ್ದರು.

೩೭. ಆ ಪರ್ವತದಲ್ಲಿ ಅಲ್ಲಲ್ಲೇ ಬಿದ್ದಿರುವ ಅಶೋಕಮರದ ಚಿಗುರುಗಳು ತಾವು ಅಲ್ಲಿ ವಿಹರಿಸುತ್ತಿದ್ದ ಕಿನ್ನರರಿಗೆ ಹಾಸಿಗೆಯಾಗಿದ್ದುಕೊಂಡು ಅವರ ಸುರತದ ಗುರುತನ್ನು ತಿಳಿಸುತ್ತಿದ್ದುವು.

೩೮. ಅಲ್ಲಿರುವ ಮರಗಳಲ್ಲಿ ಶಂಭುವಿನ ಗಣಗಳು ಬಹಳವಾಗಿ ಆಟ ವಾಡುತ್ತಿದ್ದುವು. ಅದನ್ನು ನೋಡಿದರೆ ಆ ಮರಗಳು ಮನ್ಮಥರಾಜನ ಯಶಸ್ಸಿನಿಂದ ಕೂಡಿ ಆಟವಾಡುತ್ತಿವೆಯೋ ಎಂಬಂತಿದ್ದುವು.

ಯತ್ರ ಚಂದನಕಸ್ತೂರೀಗಂಧೋನ್ಮತ್ತಾಳಿಸಂಚಯಾಃ |
ವಿಭಾಂತಿ ದಗ್ಧಕಂದರ್ಪನಿರ್ವಾಣಾಂಗಾರಸನ್ನಿಭಾಃ || ೩೯ ||

ಯತ್ರಾಂಗನಾನಾಂ ಸಕಲಂ ವಿಲೋಕ್ಯ
ಸೌರಭ್ಯಮುತ್ಕೃತ್ತಮಕಾಂತಿಮಿಶ್ರಂ |
ಮನ್ಯೇ ಪರಿಷ್ವಕ್ತಮನೋ ವಿನೋದಾ
ಕಸ್ತೂರಿಕಾ ಗಾಹತಿ ಕಾಳಿಮಾನಂ || ೪೦ ||

ಕ್ವಚಿತ್ರವರಗೈರಿಕಾಸಮುಸಮುಲ್ಲಸತ್ಪಂಕಜಂ
ಲವಂಗದಳಸನ್ನಿಭಾಲಸಲಸಚ್ಚಕೋರಂ ಕ್ವಚಿತ್ |
ಕ್ವಚಿದ್ಗಿರಿಸರಿತ್ತಟೀ ತರಣಿವತ್ಸ್ಫುರತ್ಕಂದಳಂ
ಜಲನ್ನಿಚುಲಮಂಜರೀ ವಿನಯನಮ್ರಭೃಂಗಂ ಕ್ವಚಿತ್ ||೪೧||

---

೩೯. ಆ ಸ್ಥಳದಲ್ಲಿದ್ದ ದುಂಬಿಗಳು ಚಂದನ, ಕಸ್ತೂರಿ, ಗಂಧ ಇವುಗಳಲ್ಲಿ ಆಸಕ್ತವಾಗಿರುವುದನ್ನು ನೋಡಿದರೆ ಸುಟ್ಟುಹೋದ ಮನ್ಮಥನ ಇದ್ದಿಲಿನಂತೆ ಕಾಣುತ್ತಿದ್ದವು.

೪೦. ಆ ಕೈಲಾಸದಲ್ಲಿರುವ ಸ್ತ್ರೀಯರ ಉತ್ತಮವಾದ ಸೌಂದರ್ಯವನ್ನೂ ಅವರಲ್ಲಿರುವ ಸುವಾಸನೆಯನ್ನೂ ನೋಡಿ ಅವರು ವಿನೋದಕ್ಕೆಂದು ಇಟ್ಟು ಕೊಂಡಿದ್ದ ಕಸ್ತೂರಿಯು ಖೇದದಿಂದ ಕಪ್ಪುಬಣ್ಣವನ್ನು ಹೊಂದಿತು. ಎಂದು ನನಗೆ ತೋರುತ್ತದೆ.

೪೧. ಆ ಕೈಲಾಸದಲ್ಲಿ ಒಂದು ಕಡೆಯಲ್ಲಿ ಮಣಿಶಿಲೆಯಂತೆ ಬಣ್ಣವನ್ನು ಹೊಂದಿರುವ ಕಮಲಗಳು ಪ್ರಕಾಶಿಸುತ್ತಿದ್ದುವು. ಮತ್ತೊಂದು ಕಡೆಯಲ್ಲಿ ಲವಂಗದ ಹೂವಿಗೆ ಸಮವಾಗಿ ಪ್ರಕಾಶಿಸುವ ಚಕೋರಪಕ್ಷಿಗಳು ವಿಹರಿಸುತ್ತ ಇದ್ದವು. ಮತ್ತೊಂದೆಡೆಯಲ್ಲಿ ಪರ್ವತದಿಂದ ಹರಿದುಬರುತ್ತಿರುವ ಸಣ್ಣ ಝುರಿಗಳಲ್ಲಿ ಓಡಾಡುವ ದೋಣಿಗಳಂತೆ ಚಿಗುರುಗಳು ಪ್ರಕಾಶಿಸುತ್ತಿದ್ದವು. ಮಗದೊಂದೆಡೆಯಲ್ಲಿ ಅಲ್ಲಾಡುತ್ತಿರುವ ಹೊಂಗೆಯ ಹೂ ಗೊಂಚಲಿನಲ್ಲಿ ಸೇರಿ ಕೊಂಡಿದ್ದ ದುಂಬಿಗಳಿಂದ ಬಗ್ಗಿರುವ ಮರಗಳು ವಿನಯದಿಂದಕೂಡಿ ಬಗ್ಗಿ ಇರುವುವೋ ಎಂಬಂತೆ ಕಂಡುಬರುತ್ತಿದ್ದವು.

**ಕ್ವಚಿದ್ವಲಿತಕೋಕಿಲಾಕಲಿತನೂತ್ನ ಚೂತಾಂಕುರಂ**
**ಕುರಂಗಕುಲಸೇವಿತಂ ಪ್ರಬಲಶಾಲಿಮೂಲಂ ಕ್ವಚಿತ್ ।**
**ಕ್ವಚಿತ್ಪ್ರವರಸುಂದರ್ಯೈಃ ಸುರವಧೂಪದೈಃ ಪಾವನಂ**
**ವನಂ ನಯತಿ ವಿಕ್ರಿಯಾಮಿಹ ಮನೋ ಮುನೀನಾಮಪಿ　　　　॥ ೪೨ ॥**

**ಏವಂ ಗುಣಸಮಾಯುಕ್ತಂ ವಿಲೋಕ್ಯ ಹರಮಂದಿರಂ ।**
**ವಿಚಿತ್ರಂ ಚಾಪಿ ಕೈಲಾಸಂ ಸರ್ವರತ್ನಸಮಾಶ್ರಯಂ ॥**
**ಅತ್ಯಂತಂ ವಿಸ್ಮಿತೋ ದೈತ್ಯಃ ಪ್ರೋವಾಚ ಭೃಗುನಂದನಂ　　　　॥ ೪೩ ॥**

**॥ ಜಾಲಂಧರ ಉವಾಚ ॥**

**ಕಸ್ಮಾತ್ತ್ವಂ ತಾಪಸಂ ತಾತ ಪ್ರವದಂತಿ ಭವಾದೃಶಾಃ ।**
**ತಾದೃಶೀ ಯಸ್ಯ ಸಾ ಭಾರ್ಯಾ ಹರ್ಮ್ಯಂ ಗೃಹಂ ಮನೋಹರಂ　　　　॥ ೪೪ ॥**

---

೪೨. ಒಂದೆಡೆಯಲ್ಲಿ ಕೋಗಿಲೆಗಳು ಕತ್ತನ್ನು ಡೊಂಕುಮಾಡಿಕೊಂಡು ಹೊಸದಾದ ಮಾವಿನಚಿಗುರನ್ನು ತಿನ್ನುತ್ತಿದ್ದುವು. ಮತ್ತೊಂದೆಡೆಯಲ್ಲಿ ಜಿಂಕೆಗಳು ಸೊಂಪಾದ ಭತ್ತದ ಹಸುರು ದಿಂಡನ್ನು ತಿನ್ನುತ್ತಿದ್ದುವು. ಇನ್ನೊಂದು ಕಡೆಯಲ್ಲಿ ಸುಂದರಿಯರಾದ ದೇವತಾ ಸ್ತ್ರೀಯರು ಓಡಾಡಿ ಪಾದಗಳಿಂದ ಆ ಜಾಗವನ್ನು ಪವಿತ್ರವನ್ನಾಗಿ ಮಾಡುತ್ತಿದ್ದರು. ಇಂತಹ ಆ ಕೈಲಾಸವನವು ಮುನಿಗಳ ಮನಸ್ಸನ್ನೂ ಕೂಡ ವಿಕಾರಹೊಂದುವಂತೆ ಮಾಡುತ್ತಿದ್ದಿತು.

೪೩. ಆ ಜಲಂಧರನು ಈರೀತಿ ಸುಂದರವಾದ ಹರನ ಮನೆಯನ್ನೂ ನೋಡಿದನು. ಎಲ್ಲಾ ರತ್ನಗಳಿಗೂ ಆಶ್ರಯವಾದ ವಿಚಿತ್ರವಾಗಿರುವ ಕೈಲಾಸ ಪರ್ವತವನ್ನೂ ನೋಡಿದನು. ಇದರಿಂದ ಬಹುವಾಗಿ ಆಶ್ಚರ್ಯಪಟ್ಟು ಶುಕ್ರನನ್ನು ಕುರಿತು ಇಂತೆಂದನು.

೪೪. ಜಲಂಧರನು ಹೇಳಿದನು– ಎಲೈ ಶುಕ್ರಾಚಾರ್ಯನೇ ! ಈ ರೀತಿ ಯಾದ ಉತ್ತಮಳಾದ ಸುಂದರಿಯಾದ ಹೆಂಡತಿಯು ಆ ಶಿವನಿಗಿರುವಳು. ಅವನ ಮನೆಯು ವರ್ಣಿಸಲು ಅಸಾಧ್ಯವಾಗಿ ಈರೀತಿ ಮನೋಹರವಾಗಿರುವುದು. ಹೀಗಿರುವುದನ್ನು ಆ ಶಿವನು ಹೊಂದಿದ್ದರೂ ಕೂಡ ನಿಮ್ಮಂತಹವರು ಆ ಶಿವನನ್ನು "ತಪಸ್ವಿ" ಎಂದು ಹೇಳಲು ಕಾರಣವೇನು ?

|| ನಾರದ ಉವಾಚ ||

ತತ್ರಾದೃಷ್ಟ್ವಾ ವದಚ್ಛಂಭುಂ ಹರಃ ಕುತ್ರ ಗತಃ ಕವೇ ।
ಕಥಂ ಮಮ ಭಯಾಚ್ಚೇತಿ ಪೃಷ್ಟಃ ಪ್ರೋವಾಚ ಭಾರ್ಗವಃ || ೪೫ ||

|| ಶುಕ್ರ ಉವಾಚ ||

ದೇವ ಶಂಭುರ್ಮಹಾಶೈಲಮಗಮ್ಯಂ ಮಾನಸೋತ್ತರಂ ।
ಯಯೌ ತತ್ರ ಮಹಾದೇವೋ ಗಂತುಂ ಚಾನ್ಯೈರ್ನ ಶಕ್ಯತೇ || ೪೬ ||

|| ನಾರದ ಉವಾಚ ||

ಇತಿ ಕಾವ್ಯವಚಶ್ಶ್ರುತ್ವಾ ಪ್ರಾಹ ದೈತ್ಯೋ ಮಹಾಬಲಃ || ೪೭ ||

|| ಜಾಲಂಧರ ಉವಾಚ ||

ಅಹಂ ಜೇಷ್ಯಾಮಿ ದೇವೇಶಂ ತ್ವಂ ಪುರಂ ಗಚ್ಛ ಭಾರ್ಗವ || ೪೮ ||

---

೪೫. ನಾರದನು ಹೇಳಿದನು– ಆಗ ಆ ಜಲಂಧರನು ಆ ಶಂಭುವನ್ನು ಅಲ್ಲಿ ಕಾಣದೆ, ಎಲೈ ಶುಕ್ರನೇ ! ಆ ಹರನು ಎಲ್ಲಿ ಹೋದನು ? ನನ್ನ ಹೆದರಿಕೆಯಿಂದ ಏನಾದರೂ ಹೋಗಿರುವನೊ ? ಎಂದೆನಲು ಆಗ ಶುಕ್ರನು ಇಂತೆಂದನು.

೪೬. ಶುಕ್ರನು ಹೇಳಿದನು– ಎಲೈ ದೊರೆಯೇ ! ಆ ಶಂಭುವು ಮತ್ತೊಬ್ಬರು ಹೋಗುವುದಕ್ಕೆ ಅಸಾಧ್ಯವಾಗಿರುವ ಮಾನಸೋತ್ತರವೆಂಬ ಬೆಟ್ಟಕ್ಕೆ ಹೋಗಿರುವನು. ಅಲ್ಲಿಗೆ ಮಿಕ್ಕವರು ಹೋಗಲಾಗುವುದಿಲ್ಲ.

೪೭. ನಾರದನು ಹೇಳಿದನು– ಹೀಗೆ ಶುಕ್ರನು ಹೇಳಿದುದನ್ನು ಕೇಳಿ ಆ ಪರಾಕ್ರಮಿಯಾದ ಜಲಂಧರನು ಇಂತೆಂದನು.

೪೮. ಜಲಂಧರನು ಹೇಳಿದನು– ಎಲೈ ಶುಕ್ರಾಚಾರ್ಯನೇ ! ನಾನು ಆ ದೇವೇಶನಾದ ಶಿವನನ್ನು ಜಯಿಸುತ್ತೇನೆ. ನೀನು ಮುಂದೆ ಹೋಗಿ ದಾರಿಯನ್ನು ತೋರಿಸು.

|| ನಾರದ ಉವಾಚ ||

ಇತ್ಯುಕ್ತ್ವಾ ಪ್ರಯಯೌ ತತ್ರ ಯತ್ರಾಸ್ತೇ ಶಂಕರಸ್ಸ್ವಯಂ |
ಅಪಶ್ಯತ್ತಂ ಗಿರಿವರಂ ಸಿಂಧುಜೋ ಮಾನಸೋತ್ತರಂ || ೪೯ ||

ತಸ್ಯ ಷಷ್ಟಿಸಹಸ್ರಾಣಿ ಯೋಜನಾನಾಂ ಸಮುಚ್ಛ್ರಯಃ |
ಸ ಶೈಲೋ ಮಾನಸೋ ರಾಜನ್ ದೈತ್ಯಸೈನ್ಯಸಮಾವೃತಃ || ೫೦ ||

ಬಹವೋ ದೈತ್ಯರಾಜಾನಃ ಶೈಲಮಾರುರುಹುದ್ರ್ರುತಂ |
ಛತ್ರಾಂಧಕಾರಂ ಪರ್ಯಾಸೀದ್ವಾದ್ಯನಾದೇನ ವೇಪಥುಃ || ೫೧ ||

ಸೈನ್ಯಕೋಲಾಹಲಸ್ತೇಷಾಂ ಪೂರಯಾಮಾಸ ರೋದಸೀ |
ಅಥೈವಮಾಗತಂ ದೃಷ್ಟ್ವಾ ದೈತ್ಯಸೈನ್ಯಂ ಮಹತ್ತದಾ || ೫೨ ||

ಅತ್ಯುಚ್ಛ್ರಿತಸ್ಯ ಗಿರೇಶ್ಶೃಂಗೇ ಸ್ಥಾಪ್ಯ ಗೌರೀಂ ಸಖೀವೃತಾಂ |
ಭಗವಾಂಶ್ಚ ಗಣೈಸ್ಸರ್ವೈಃ ಸನ್ನದ್ಧೈರ್ಯುದ್ಧದುರ್ಮದೈಃ || ೫೩ ||

---

೪೯. ನಾರದನು ಹೇಳಿದನು– ಹೀಗೆಂದು ಹೇಳಿ ಆ ಜಲಂಧರನು ಶಂಕರನಿದ್ದಲ್ಲಿಗೆ ಹೋದನು. ಹೋಗಿ ಮಾನಸೋತ್ತರವೆಂಬ ಪರ್ವತವನ್ನು ಆತನು ಕಂಡನು.

೫೦. ಆ ಪರ್ವತವು ಅರವತ್ತು ಸಾವಿರ ಯೋಜನಗಳ ಎತ್ತರವಿದ್ದಿತು. ಅಂತಹ ಮಾನಸೋತ್ತರಪರ್ವತವನ್ನು ದೈತ್ಯರ ಸೇನೆಯು ಮುತ್ತಿಗೆ ಹಾಕಿತು.

೫೧. ಬವು ಜನ ದೈತ್ಯರಾಜರು ಆ ಬೆಟ್ಟವನ್ನು ಬೇಗನೆ ಹತ್ತಿದರು. ಆದೈತ್ಯರ ಛತ್ರಿಯ ನೆರಳಿನಿಂದ ಅಲ್ಲಿ ಕತ್ತಲೆಯಾಯಿತು. ಆ ದೈತ್ಯರ ವಾದ್ಯದ ಧ್ವನಿಯಿಂದ ನಡುಕ ಉಂಟಾಯಿತು.

೫೨. ಆ ದೈತ್ಯ ಸೈನ್ಯದ ಕೋಲಾಹಲವು ಭೂವ್ಯಾಕಾಶಗಳನ್ನು ತುಂಬಿತು. ಶಿವನು ಬಹುವಾಗಿ ಬಂದ ಈ ದೈತ್ಯರ ಸೈನ್ಯವನ್ನು ನೋಡಿದನು.

೫೩–೫೫. ಆಗ ಶಂಭುವು ಮಾನಸೋತ್ತರಪರ್ವತದ ಬಹು ಎತ್ತರವಾದ ಒಂದು ಶಿಖರದಲ್ಲಿ ಗೌರಿಯನ್ನು ಸಖಿಯರ ಜೊತೆ ಮಾಡಿಬಿಟ್ಟನು. ಇತ್ತ

ತ್ರಿಂಶನ್ಮಹಾಬ್ಜಸಾಹಸ್ರೈಃ ಪ್ರಮಥಾನಾಂ ವೃತಶ್ಶಿವಃ ।
ಉವಾಚ ನಂದಿನಂ ಶಂಭುರ್ಗಣಾನಾಮಧಿಪ ತ್ವಯಾ ॥ ೫೪ ॥

ಪ್ರಹರ್ತವ್ಯೋ ಮಹಾದೈತ್ಯೋ ವೀರೋ ಜಾಲಂಧರೋ ರಣೇ ।
ಮಹಾಕಾಲಾದಿಭಿಶ್ಶೂರೈರ್ಯಾಹಿ ತ್ವಂ ಪರಿವಾರಿತಃ ॥ ೫೫ ॥

ಕ್ವಚಿದಪಿಚ ಕಾರ್ಯಾರಂಭೇ ಕಲ್ಪಃ ಕಲ್ಯಾಣಭಾಜನಂ ಭವತಿ ।
ನ ತು ಪುನರಧಿಕವಿಷಾದಾನ್ಮಂದೀಕೃತಪೌರುಷಃ ಪುರುಷಃ ॥ ೫೬ ॥

ತಾವದಾಜೌ ತ್ವಯಾ ತಸ್ಮಾದ್ಯೋದ್ಧವ್ಯಮಿತಿ ಪೌರುಷಾತ್ ।
ಯಾವದ್ಯುದ್ಧೇನಾರಿಜಯೋ ಮಮ ವೀರ ಭವಿಷ್ಯತಿ ॥ ೫೭ ॥

॥ ನಾರದ ಉವಾಚ ॥

ಇತಿ ಶಂಭೋರ್ವಚಶ್ಶ್ರುತ್ವಾ ಸ ಚ ಸಾರಥಿಮಬ್ರವೀತ್ ॥ ೫೮ ॥

---

ಯುದ್ಧಕ್ಕೆ ಸಿದ್ಧರಾದ ಮೂವತ್ತುಸಾವಿರ ಮಹಾಪದ್ಮಗಳ ಸಂಖ್ಯೆಯುಳ್ಳ ಪ್ರಮಥಗಣಗಳೊಂದಿಗೆ ತಾನೂ ನಿಂತುಕೊಂಡನು. ಆಗ ಶಂಭುವು ನಂದಿಯನ್ನು ಕುರಿತು ಎಲೈ ನಂದಿಯೇ! ನೀನೇ ಗಣಗಳಿಗೆಲ್ಲಾ ಅಧಿಪನು. (ಸೇನಾಧಿಪತಿಯು) ನೀನೇ ಆ ದೈತ್ಯನೂ ಶೂರನೂ ಆದ ಜಲಂಧರನನ್ನು ಕೊಲ್ಲಬೇಕು. ಶೂರನಾದ ಮಹಾಕಾಳನೇ ಮುಂತಾದವರನ್ನು ಜೊತೆಯಲ್ಲಿ ಕರೆದುಕೊಂಡು ಹೋಗು.

೫೬. ಶಕ್ತನಾದವನು ಯಾವ ಕೆಲಸಕ್ಕೆ ಮೊದಲುಮಾಡಿದರೂ ಜಯಶಾಲಿಯಾಗಿ ಯಶಸ್ಸನ್ನು ಹೊಂದುತ್ತಾನೆ. ಮನಸ್ಸಿಗೆ ಹೆಚ್ಚು ದುಃಖವನ್ನು ಹೊಂದಿ ಪೌರುಷವನ್ನು ಕಳೆದುಕೊಂಡು ಮನಷ್ಯನು ಯಶಸ್ಸನ್ನೂ ಜಯವನ್ನೂ ಹೊಂದಲಾರನು.

೫೭. ಎಲೈ ವೀರನೇ ! ನನಗೆ ಯುದ್ಧದಲ್ಲಿ ಜಯವು ಲಭಿಸುವವರೆಗೂ ನೀನು ಬಹು ಪರಾಕ್ರಮದಿಂದ ರಣರಂಗದಲ್ಲಿ ಯುದ್ಧಮಾಡಬೇಕು.

೫೮. ನಾರದನು ಹೇಳಿದನು– ಶಂಭುವು ಹೀಗೆ ಹೇಳಿದುದನ್ನು ನಂದಿಯು ಕೇಳಿ ಸಾರಥಿಯನ್ನು ಕುರಿತು ಇಂತೆಂದನು.

॥ ನಂದ್ಯುವಾಚ ॥

ಕಾಕತುಂಡ ರಥಂ ಮೇದ್ಯ ಸಮಾನಯ ಮಹಾಮತೇ ॥ ೫೯ ॥

॥ ನಾರದ ಉವಾಚ ॥

ನಂದಿನೋ ವಚನಂ ಶ್ರುತ್ವಾ ಸೋಽಪಿ ಸ್ಯಂದನಮಾಹರತ್ ।
ದ್ವಾತ್ರಿಂಶದಶ್ವಸಂಯುಕ್ತಂ ಚಕ್ರಷೋಡಶಸಂಯುತಂ ॥ ೬೦ ॥

ಷಷ್ಟಿಧ್ವಜಸಮೋಪೇತಂ ದ್ವಾತ್ರಿಂಶದ್ಯೋಜನಾಯುತಂ ।
ಸರ್ವಶಸ್ತ್ರೈಶ್ಚ ಸಂಪೂರ್ಣಂ ಪ್ರಾಪ್ತಂ ಸಾಂಗ್ರಾಮಿಕಂ ರಥಂ ॥ ೬೧ ॥

ನಂದಿನಶ್ಚಕ್ರರಕ್ಷಾರ್ಥಂ ಪುತ್ರೌ ಸ್ಕಂದ ವಿನಾಯಕೌ ।
ಸಮಾದಿಷ್ಟೌ ಶಂಕರೇಣ ಸನ್ನದ್ಧೌ ತೌ ಸವಾಹನೌ ॥ ೬೨ ॥

ಗಣೈಃ ಪರಿವೃತೋ ನಂದೀ ವಾಗ್ಭಿಃ ಸಂಪೂಜ್ಯ ಚೇಶ್ವರಂ ।
ನಂದೀ ರಥಂ ಸಮಾರುಹ್ಯ ನಿರ್ಯಯೌ ದಾನವಾನ್ಪ್ರತಿ ॥ ೬೩ ॥

---

೫೯. ನಂದಿಯು ಹೇಳಿದನು– ಎಲೈ ಕಾಕತುಂಡನೇ ! ನನ್ನ ರಥವನ್ನು ಬೇಗನೆ ಇಲ್ಲಿಗೆ ಸಿದ್ಧಮಾಡಿ ತೆಗೆದುಕೊಂಡು ಬಾ.

೬೦. ನಾರದನು ಹೇಳಿದನು– ನಂದಿಯ ಈ ಮಾತನ್ನು ಕೇಳಿ ಆ ಕಾಕತುಂಡನು ರಥವನ್ನು ತಂದನು. ಆ ರಥಗಳಿಗೆ ಮೂವತ್ತೆರಡು ಕುದುರೆಗಳನ್ನು ಕಟ್ಟಿದ್ದರು. ಮತ್ತು ಹದಿನಾರು ಚಕ್ರಗಳೂ ಇದ್ದವು.

೬೧. ಅದಕ್ಕೆ ಅರವತ್ತು ಧ್ವಜಗಳನ್ನು ಕಟ್ಟಿದ್ದರು. ಅದು ಮೂವತ್ತೆರಡು ಯೋಜನಗಳ ಅಗಲವಿದ್ದಿತು. ಎಲ್ಲಾ ಶಸ್ತ್ರಗಳನ್ನೂ ತುಂಬಿದ್ದರು. ಇಂತಹ ಯುದ್ಧರಥವನ್ನು ತಂದರು.

೬೨. ಆಗ ಶಂಕರನು ಆ ನಂದಿಯ ರಥದ ಚಕ್ರಗಳನ್ನು ಎರಡು ಕಡೆಯಲ್ಲಿಯೂ ಕಾಪಾಡಲು ತನ್ನ ಮಕ್ಕಳಾದ ಸ್ಕಂದ ವಿನಾಯಕರನ್ನು ನಿಯಮಿಸಿದನು. ಅವರಿಬ್ಬರೂ ಸಿದ್ಧರಾಗಿ ವಾಹನಗಳನ್ನು ಹತ್ತಿಕೊಂಡು ಬಂದರು.

೬೩. ಗಣಗಳೆಲ್ಲರೂ ತನಗೆ ಸಹಾಯಕರಾಗಿ ಬರಲು ನಂದಿಯು ಶಂಕರನನ್ನು ಒಳ್ಳೆಯ ಮಾತುಗಳಿಂದ ಗೌರವಿಸಿ ರಥವನ್ನು ಹತ್ತಿ ದಾನವರ ಮೇಲೆ ಯುದ್ಧಕ್ಕೆ ಹೊರಟನು.

ವಿರಾಜತೇ ತಸ್ಯ ಮೂರ್ಧ್ನಿ ಛತ್ರಂ ದ್ವಾದಶಯೋಜನಂ ।
ಯಾವತ್ಸ ನಿರ್ಯಯೌ ನಂದೀ ತಾವತ್ತೇ ದಾನವಾಃ ಪುರಃ ॥ ೬೪ ॥

ಶೈಲೋಪರಿ ಸಮಾರೂಢಾ ದಾನವಾ ಘೋರ ದರ್ಶನಾಃ ।
ಗಣಾನಾಮಾಯುಧೈಸ್ತೀಕ್ಷ್ಣೈರ್ನಿಹತಾಃ ಪತಿತಾ ಭುವಿ ॥ ೬೫ ॥

ಹನ್ಯಮಾನಾ ಗಣೈರ್ದೈತ್ಯಾಸ್ತತ್ಯಜುರ್ದೂರತೋ ಗಿರಿಂ ।
ತತೋ ಭೂಮಿಗತಾಂ ಸ್ತಸ್ಮಾದವರುಹ್ಯ ಶಿಲೋಚ್ಚಯಾತ್ ॥ ೬೬ ॥

ಜಘ್ನುಃ ದೈತ್ಯಾಂ ಶ್ಛಿಲೈಃ ಶಸ್ತ್ರೈರ್ಗಣಾ ರಾಜನ್ ಮಹಾಬಲಾನ್ ।
ಅಸುರೈರಾವೃತಂ ದೃಷ್ಟ್ವಾ ರುರುಧುಃ ದೈತ್ಯ ಸೈನಿಕಾಃ ॥ ೬೭ ॥

ತತಃ ಸಮಭವದ್ಯುದ್ಧಂ ಗಣಾನಾಂ ದಾನವೈಃ ಸಹ ।
ಶರವರ್ಷಮಭೂತ್ತುಗ್ರಂ ದಾನವಾನಾಂ ದಿವೌಕಸಾಂ ॥ ೬೮ ॥

ತತಃ ಸಮಸ್ತಾನ್ಮಾತಂಗಾನ್ ಜಘ್ನುಃ ಶಿಖಿಮುಖಾ ರಣೇ ।
ರಥಾನ್ ಹಯಾನ್ ಪದಾತೀಂಶ್ಚ ಕಾಕತುಂಡಾ ಮಹಾಬಲಾಃ ॥ ೬೯ ॥

---

೬೪. ಆಗ ಆ ನಂದಿಯ ತಲೆಯಮೇಲೆ ಹನ್ನೆರಡು ಯೋಜನದಗಲದ ಛತ್ರಿಯನ್ನು ಹಿಡಿದರು. ಅವನು ಹೊರಡುತ್ತಿದ್ದಂತೆಯೇ ಯುದ್ಧಕಾಂಕ್ಷಿಗಳಾದ ದಾನವರು ಎದುರಿಗೆ ಬಂದರು.

೬೫. ಅಷ್ಟರಲ್ಲಿ ಆ ಬೆಟ್ಟದ ಮೇಲಕ್ಕೆ ಕ್ರೂರರಾದ ದಾನವರು ಹತ್ತಿ ಬಂದರು. ಗಣಗಳು ಆಯುಧಗಳಿಂದ ಅವರನ್ನು ಹೊಡೆದು ನೆಲಕ್ಕುರುಳಿಸಿದರು.

೬೬–೬೯. ಗಣಗಳು ಈ ರೀತಿಯಾಗಿ ದೈತ್ಯರನ್ನು ಹೊಡೆಯುತ್ತಾ ಬರಲು ಆ ದೈತ್ಯರು ಹೆದರಿ ಬೆಟ್ಟವನ್ನು ಇಳಿದು ಸಮಭೂಮಿಯಲ್ಲಿ ನಿಂತರು- ಅಲ್ಲಿಯೂ ಕೂಡಾ ಈ ಗಣಗಳು ಹೀಗೆ ಹೊಡೆಯುತ್ತಿರುವುದನ್ನೂ ಅವರ ಸಿಂಹ ಧ್ವನಿಯನ್ನೂ ಕೇಳಿ ದೈತ್ಯ ಸೈನಿಕರೆಲ್ಲರೂ ಬಂದು ಮೇಲೆ ಬಿದ್ದರು. ಆಗ ಗಣಗಳಿಗೂ ದಾನವರಿಗೂ ದೊಡ್ಡ ಯುದ್ಧವು ನಡೆಯಿತು. ದೇವತೆಗಳೂ ಬಂದು ಸೇರಿದುದರಿಂದ ಅವರಿಗೂ ರಾಕ್ಷಸರಿಗೂ ಬಾಣದ ಯುದ್ಧವು ಉಗ್ರವಾಗಿ ನಡೆಯಿತು. ಆಗ ಯುದ್ಧದಲ್ಲಿ ಶಿಖಿಮುಖರೆಲ್ಲರೂ ಆನೆಗಳೆಲ್ಲವನ್ನೂ ಹೊಡೆದರು. ಕಾಕತುಂಡರು ರಥಗಳನ್ನೂ ಕುದುರೆಗಳನ್ನೂ ಕಾಲಾಳುಗಳನ್ನೂ ಧ್ವಂಸ ಮಾಡಿದರು.

ಹತಾನಾಂ ದೈತ್ಯ ಸಂಘಾನಾಂ ಸಂಗರೇ ಭೃಶಮಾಯಿನಾಂ ।
ಶಿರೋಭಿರ್ಗಗನಂ ವ್ಯಾಪ್ತಂ ಪ್ರಹಸದ್ಭಿರ್ಭಯಾವಹೈಃ ॥ ೨೦ ॥

ಮುಕ್ತಕೇಶಾರುಣನಖೈರ್ಭೀಮದಂಷ್ಟ್ರಾವಿಲೋಚನೈಃ ।
ಸ್ಕಂಧೈಃ ಕಬಂಧಜಂಘೋರುಕಟಿಪೃಷ್ಠನಿಕೃಂತನೈಃ ॥
ಚಿತಾ ಸರ್ವತ್ರ ವಸುಧಾ ಕಂಬಧೈರುಧಿರಾರುಣೈಃ ॥ ೨೧ ॥

ತತೋ ನಿರಾವಸ್ಸುಮಹಾನ್ ಬಭೂವ
ದೈತ್ಯೇಶ್ವರಾಣಾಂ ಧ್ವಜನೀಷು ಧಾವತಾಂ ।
ಶಂಭೋರ್ಗಣೈಃ ಪಾತಿತಸೈನಿಕಾನಾನಾಂ
ಯಥಾರ್ಣವಾನಾಂ ನದತಾಂ ಯುಗಕ್ಷಯೇ ॥ ೨೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ದೈತ್ಯಸೈನ್ಯ ಪರಾಜಯೋ ನಾಮ ದ್ವಾದಶೋಽಧ್ಯಾಯಃ

---

೨೦. ಯುದ್ಧದಲ್ಲಿ ಮಾಯಾವಿಗಳಾಗಿ ಯುದ್ಧಮಾಡುತ್ತಾ ಸತ್ತ ದೈತ್ಯರ ತಲೆಗಳು ನಗುತ್ತಾ ಭಯಂಕರವಾಗಿ ಅಂತರಿಕ್ಷಕ್ಕೆ ಹಾರುತ್ತಿದ್ದುವು. ಇದರಿಂದ ಆಕಾಶವು ತುಂಬಿಹೋಯಿತು.

೨೧. ತಲೆಯನ್ನು ಕೆದರಿಕೊಂಡಿರುವುದರಿಂದಲೂ ಭಯಂಕರವಾದ ದಾಡೆ, ಕಣ್ಣು, ಕತ್ತುಗಳಿಂದಲೂ, ಅಲ್ಲಲ್ಲಿಯೇ ಏಟುಬಿದ್ದು ಕತ್ತರಿಸಿ ಹೋಗಿರುವ ತೊಡೆ, ಸೊಂಟ, ಬೆನ್ನುಗಳುಳ್ಳ ಮುಂಡಗಳಿಂದಲೂ ಭೂಮಿಯೆಲ್ಲವೂ ಕೂಡಿಕೊಂಡಿದ್ದಿತು.

೨೨. ಶಂಭುವಿನ ಗಣಗಳು ಈ ರೀತಿಯಾಗಿ ಸೈನ್ಯಗಳನ್ನು ಕೊಂದು ಕೆಡವುತ್ತಿರಲು ಆ ದೈತ್ಯಸೈನ್ಯದಲ್ಲಿ ಕಳೆದುಳಿದವರು ಓಡಿಹೋಗುತ್ತಿದ್ದರು. ಆಗ ಯುಗಾಂತಕಾಲದಲ್ಲಿ ಸಮುದ್ರವು ಮೊರೆಯುವ ಧ್ವನಿಯಂತೆ ಅವರ ಧ್ವನಿಯು ಕೇಳಿ ಬರುತ್ತಿದ್ದಿತು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ದೈತ್ಯ ಸೈನ್ಯ ಪರಾಜಯು ಎಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಯೋದಶೋಽಧ್ಯಾಯಃ ॥



### ॥ ನಾರದ ಉವಾಚ ॥

**ದೈತ್ಯಸೈನ್ಯಂ ಹತಂ ದೃಷ್ಟ್ವಾ ಗಣೈರ್ನಂದಿಪುರೋಗಮೈಃ ।**
**ಕ್ರುದ್ಧಾಃ ಕುಂಭಾದಯೋ ದೈತ್ಯಾಃ ಸಮಾಜಗ್ಮುರ್ಗಣಾನ್ಪ್ರತಿ ॥ ೧ ॥**

**ತತಃ ಶುಂಭೋ ಮಹಾದೈತ್ಯೋ ನಂದಿನಂ ಪ್ರತ್ಯಯುಧ್ಯತ ।**
**ಮಹಾಕಾಲಂ ನಿಶುಂಭೋಥ ಕಾಲೋ ಲೋಕೇಶ್ವರಂ ರಣೇ ॥ ೨ ॥**

**ಪುಷ್ಪದಂತಂ ಶೈಲರೋಮಾ ಮಾಲ್ಯವಂತಂ ಮಹಾಬಲಃ ।**
**ಕೋಲಾಹಲೋ ರಣೇ ರಾಜನ್ ಪ್ರಾಪ್ತೋ ಮಾಯಾ ಬಲೇನ ಚ ॥ ೩ ॥**

---

### ಹದಿಮೂರನೆಯ ಅಧ್ಯಾಯವು

೧. ನಾರದನು ಹೇಳಿದನು– ನಂದಿಯೇ ಮೊದಲಾದ ಗಣಗಳು ದೈತ್ಯ ಸೈನ್ಯವನ್ನು ಹೀಗೆ ಕೊಲ್ಲುತ್ತಿರುವುದನ್ನು ನೋಡಿ ಕುಂಭನೇ ಮುಂತಾದ ದೈತ್ಯರು ಕೋಪಗೊಂಡು ಯುದ್ಧಕ್ಕೆ ಬಂದರು.

೨-೩. ಶುಂಭನೆಂಬ ಮಹಾದೈತ್ಯನು ನಂದಿಯೊಡನೆಯೂ, ನಿಶುಂಭನು ಮಹಾಕಾಲನನ್ನೂ, ಕಾಲನು ಲೋಕೇಶ್ವರನನ್ನೂ, ಶೈಲರೋಮನು ಪುಷ್ಪದಂತನನ್ನೂ, ಮಹಾಬಲನು ಮಾಲ್ಯವಂತನನ್ನೂ ಎದುರಿಸಿದರು. ಶಸ್ತ್ರಾಸ್ತ್ರಯುದ್ಧದಿಂದಲೂ ಮಾಯಾಬಲದಿಂದಲೂ ಯುದ್ಧವು ನಡೆಯುತ್ತಾ ಮಹಾಕೋಲಾಹಲವಾಗುತ್ತಿದ್ದಿತು.

ಚಂಡಿರ್ಭಯಾನಕಂ ನಾಮ ರಾಹುಸ್ಕಂದಮಧಾವತ ।
ಕೂಶ್ಮಾಂಡಂ ಸರ್ಪರೋಮಾ ಚ ಘರ್ಘರೋ ಮಾದನಂ ತಥಾ ॥ ೪ ॥

ಶುಭ್ರಂ ಕೇತುಮುಖೋ ಹಂತುಂ ಯಯೌ ಜಂಭೋ ವಿನಾಯಕಂ ।
ಹಾಸಂ ಪಾತಾಳಕೇತುಶ್ಚ ಭೃಂಗೀಶಂ ರೋಮಕಂಟಕಃ ॥ ೫ ॥

ಯುಯುಧುಃ ಕೋಟಿಶೋ ರುದ್ರಗಣಾಃ ದೈತ್ಯಾಃ ಪರಸ್ಪರಂ ।
ಪಶ್ಯತೋರುಭಯೋಸ್ತತ್ರ ಸ್ವಾಮಿನೋರಿತಿ ತೇ ಯುಧಿ ॥ ೬ ॥

ದೃಢ ಪ್ರಹಾರಿಣೋ ಜಘ್ನುರ್ಗಣಾ ದೈತ್ಯಾಃ ಶರೈರಥ ।
ನಂದೀ ಮುಮೋಚ ತಾನ್ಬಾಣಾನ್ಮಹಾಸಾರೋ ಯಥಾ ನಗೇ ॥ ೭ ॥

ತತಃ ಸಂಪೂರಯಾಮಾಸ ಮುಖಂ ಶುಂಭಸ್ಯ ಪತ್ರಿಭಿಃ ।
ಯಥಾ ಪರ್ಣಚಯೈರ್ವಾತೋ ಮಂದರಸ್ಯೇವ ಕಂದರಂ ॥ ೮ ॥

---

೪–೫. ಚಂಡಿಯು ಭಯಾನಕನೆಂಬ ದೈತ್ಯನನ್ನೂ, ರಾಹುವು ಸ್ಕಂದನನ್ನೂ, ಸರ್ಪರೋಮನು ಕೂಶ್ಮಾಂಡನನ್ನೂ, ಘರ್ಘರನು ಮಾದನನನ್ನೂ, ಕೇತುಮುಖನು ಶುಭ್ರನನ್ನೂ, ಜಂಭನು ವಿನಾಯಕನನ್ನೂ, ಪಾತಾಳಕೇತುವು ಹಾಸನನ್ನೂ, ರೋಮಕಂಟಕನು ಭೃಂಗೀಶನನ್ನೂ ಎದುರಿಸಿ ಯುದ್ಧಮಾಡುತ್ತಿದ್ದರು.

೬. ಕೋಟಿಗಟ್ಟಲೆಯಾಗಿರುವ ರುದ್ರಗಣಗಳೂ ದೈತ್ಯಗಣಗಳೂ ತಮ್ಮ ತಮ್ಮ ಸ್ವಾಮಿಗಳ ಎದುರಿಗೆ ಉಗ್ರವಾದ ಯುದ್ಧವನ್ನು ಮಾಡಿದರು.

೭. ದೈತ್ಯಗಣಗಳೆಲ್ಲರೂ ಬಲವಾಗಿ ಏಟು ಬೀಳುವಂತೆ ಬಾಣಗಳಿಂದ ಹೊಡೆದರು. ಇತ್ತ ನಂದಿಯು ಮಹಾಮೇಘವು ಬೆಟ್ಟದಲ್ಲಿ ಮಳೆಯನ್ನು ಸುರಿಸುವಂತೆ ಬಾಣಗಳನ್ನು ಬಿಟ್ಟನು.

೮. ಬಿರುಗಾಳಿಯು ಮಂದರಪರ್ವತದ ಗುಹೆಗೆ ಎಲೆಗಳನ್ನು ತುಂಬುವಂತೆ ಆ ನಂದಿಯು ಶುಂಭನ ಮುಖಕ್ಕೆ ಬಾಣಗಳನ್ನು ಬಿಟ್ಟು ತುಂಬಿದನು.

ಶುಂಭೋಥ ಕಾರ್ಮುಕಂ ತ್ಯಕ್ತ್ವಾ ರಥಾತ್ತಂ ಪ್ರತ್ಯಧಾವತ ।
ಉತ್ಪಾಟ್ಯ ಚ ಗಿರಿಂ ತೇನ ಜಘಾನ ಹೃದಿ ನಂದಿನಂ ॥ ೯ ॥

ನಂದಿನೋ ಹೃದಯಂ ಭಿತ್ವಾ ಚೂರ್ಣಯಿತ್ವಾ ರಥಂ ರಣೇ ।
ಪಪಾತ ಭೂಮೌ ಸ ಗಿರಿರ್ವಜ್ರಂ ಪ್ರಾಪ್ಯ ಗಿರಿಂ ಯಥಾ ॥ ೧೦ ॥

ಮೂರ್ಛಾಂ ಪ್ರಾಪ್ಯ ಕ್ಷಣಾತ್ಸಂಜ್ಞಾಂ ವೇಗವಾನ್ನಪಲಾಯಿತಃ ।
ಮಹಾಕಾಲೋ ನಿಶುಂಭೇನ ಮುದ್ಗರೇಣ ಹತೋ ಹೃದಿ ॥ ೧೧ ॥

ಆಗತ್ಯ ದೈತ್ಯಂ ಗದಯಾ ಜಘಾನ ಮುಕುಟೋಪರಿ ।
ತಂ ಪ್ರಹಾರಮಚಿಂತ್ಯಾಥ ನಿಶುಂಭೋಪಿ ಮಹಾಬಲಃ ॥ ೧೨ ॥

ತಂ ಗೃಹೀತ್ವಾ ಚರಣಯೋಃ ಮಹಾಕಾಲಂ ಮಹಾಬಲಂ ।
ಭ್ರಾಮಯಿತ್ವಾ ಕರತಲಾಚ್ಚಿಕ್ಷೇಪ ಚ ನನಾದ ಚ ॥ ೧೩ ॥

---

೯. ಆಗ ಶುಂಭನು ಧನುಸ್ಸನ್ನು ಕೆಳಗಿಟ್ಟು ಒಂದು ಪರ್ವತವನ್ನು ಕಿತ್ತು ಕೊಂಡು ತಂದು ಆ ನಂದಿಯ ಮೇಲೆ ಬಿದ್ದು ಅವನ ಎದೆಗೆ ಹೊಡೆದನು.

೧೦. ಆ ಪರ್ವತವು ನಂದಿಯ ಎದೆಯನ್ನು ಸೀಳಿ ಅವನ ರಥವನ್ನು ಪುಡಿ ಪುಡಿ ಮಾಡಿ ಹಿಂದೆ ವಜ್ರಾಯುಧವು ಗಿರಿಗಳ ಮೇಲೆ ಬಿದ್ದು ಅವನ್ನು ಪುಡಿ ಮಾಡಿ ಬಿದ್ದಂತೆ ನೆಲದ ಮೇಲೆ ಬಿದ್ದಿತು.

೧೧. ನಂದಿಯು ಮೂರ್ಛೆಯನ್ನು ಹೊಂದಿ ಒಂದು ಕ್ಷಣದಮೇಲೆ ಜ್ಞಾನವನ್ನು ಹೊಂದಿ ಜಾಗ್ರತೆಯಾಗಿ ಓಡಿಹೋದನು. ಇತ್ತ ನಿಶುಂಭನು ಮಹಾಕಾಲನಿಗೆ ಒನಕೆಯಿಂದ ಎದೆಗೆ ಹೊಡೆದನು.

೧೨. ಮಹಾಕಾಲನು ಈ ಏಟನ್ನು ಸಹಿಸಿಕೊಂಡು ಗದೆಯಿಂದ ಆ ನಿಶುಂಭನ ತಲೆಯಮೇಲೆ ಹೊಡೆದನು. ಆ ನಿಶುಂಭನು ಮಹಾಬಲಿಷ್ಠನಾದುದರಿಂದ ಆ ಏಟನ್ನು ಲೆಕ್ಕಿಸಲಿಲ್ಲ.

೧೩. ಆ ನಿಶುಂಭನು ಅಲ್ಲೀದ ಬಂದು ಆ ಬಲಿಷ್ಠನಾದ ಮಹಾಕಾಲನ ಕಾಲುಗಳನ್ನು ಹಿಡಿದುಕೊಂಡು ಗರ್ರನೆ ತಿರುಗಿಸಿ ದೂರಕ್ಕೆಸೆದು ಸಿಂಹನಾದವನ್ನು ಮಾಡಿದನು.

ಸ ತದ್ವಕ್ತ್ರಾನಿಲಂ ಪೀತ್ವಾ ನನಾದ ರುಧಿರಾರುಣಃ ।
ಪುಷ್ಪದಂತಃ ಶೈಲರೋಮ್ಣಾ ನಿಹತೋ ಮುಷ್ಟಿನಾ ಮುಖೇ ॥ ೧೪ ॥

ಗದಯಾ ಶೈಲರೋಮಾಣಂ ಹತ್ವಾ ಭೂಮೌ ನ್ಯಪಾತಯತ್ ।
ತಂ ದೃಷ್ಟ್ವಾ ಪತಿತಂ ಭೂಮೌ ಗಿರಿಕೇತುರ್ಮಹಾಬಲಃ ॥ ೧೫ ॥

ಪುಷ್ಪದಂತಂ ಮಹಾಭೀಮಂ ಮುದ್ಗರೇಣ ವ್ಯಪೋಥಯತ್ ।
ಪುಷ್ಪದಂತೋಥ ಖಡ್ಗೇನ ಗಿರಿಕೇತೋಶ್ಶಿರೋಚ್ಛಿನತ್ ॥ ೧೬ ॥

ಗೃಹೀತ್ವಾ ಚರ್ಮಖಡ್ಗಂ ಚ ಗಿರಿಕೇತುರಧಾವತ ।
ಶಿರಸ್ತಂ ಪ್ರಾಹ ಕಿಂ ಯಾಸಿ ಮಾಂ ತ್ಯಕ್ತ್ವಾ ಸಮರಾರ್ಥಿನಂ ॥ ೧೭ ॥

ಶಿರೋ ಹೀನೇ ಚ ಕಾಯೇಸ್ಮಿನ್ ಕಿಂ ತು ಧಾವನ್ನ ಲಜ್ಜಸೇ ।
ಇತ್ಯುಕ್ತೇ ಶಿರಸಾ ತೇನ ಕಬಂಧೇನ ತು ಪಾದಯೋಃ ॥ ೧೮ ॥

---

೧೪–೧೭. ಆ ಮಹಾಕಾಳನು ಆ ನಿಶುಂಭನ ನಿಟ್ಟುಸಿರಿನ ಗಾಳಿಯನ್ನು ಸೇವಿಸಿ ಚೇತರಿಸಿಕೊಂಡು ರಕ್ತದಿಂದ ಮೈಯೆಲ್ಲಾ ನೆನೆದಿದ್ದರೂ ಗರ್ಜಿಸಿದನು. ಶೈಲರೋಮನು ಪುಷ್ಪದಂತನಿಗೆ ಮುಷ್ಟಿಯಿಂದ ಮುಖದ ಮೇಲೆ ಹೊಡೆದನು. ಅನಂತರ ಪುಷ್ಪದಂತನು ಗದೆಯಿಂದ ಶೈಲರೋಮನನ್ನು ಹೊಡೆದು ಭೂಮಿಯಲ್ಲಿ ಕೆಡಹಿದನು. ಆ ಶೈಲರೋಮನು ಕೆಳಗೆ ಬಿದ್ದುದನ್ನು ನೋಡಿ ಮಹಾಬಲಿಷ್ಠನಾದ ಗಿರಿಕೇತುವು ಭಯಂಕರನಾದ ಪುಷ್ಪದಂತನನ್ನು ಮುದ್ಗರದಿಂದ ಚುಚ್ಚಿದನು. ಅನಂತರ ಪುಷ್ಪದಂತನು ಕತ್ತಿಯಿಂದ ಗಿರಿಕೇತುವಿನ ತಲೆಯನ್ನು ಕತ್ತರಿಸಿದನು. ಅನಂತರ ಚರ್ಮಖಡ್ಗಗಳನ್ನು ತೆಗೆದುಕೊಂಡು ಗಿರಿಕೇತುವು ಪುಷ್ಪದಂತನ ಮೇಲೆ ನುಗ್ಗಿದನು. ಮತ್ತು ಕತ್ತರಿಸಿದ ಆ ಗಿರಿಕೇತುವಿನ ಶಿರವು ಎಲೈ ಪುಷ್ಪದಂತನೇ ! ನಾನು ಸಮರವನ್ನು ಕೇಳುತ್ತಿರುವಾಗ ನನ್ನನ್ನು ಬಿಟ್ಟು ಎಲ್ಲಿ ಹೋಗುತ್ತೀಯೆ ? ಎಂದಿತು.

೧೮–೧೯. ತಲೆಯಿಲ್ಲದಿರುವ ಈ ಶರೀರವು ನಿನ್ನ ಮೇಲೆ ಯುದ್ಧಕ್ಕೆ ಬರುತ್ತಿದ್ದರೂ ಲಜ್ಜೆಪಡದೆ ಹೋಗುತ್ತಿರುವೆಯಲ್ಲ ? ಎಂದು ಶಿರಸ್ಸು ಹೇಳುತ್ತ ಇರುವಂತೆಯೇ ಆ ಮುಂಡವು ಪುಷ್ಪದಂತನ ಕಾಲುಗಳನ್ನು ಹಿಡಿದುಕೊಂಡಿತು.

ವಿಧೃತಃ ಪುಷ್ಪದಂತಶ್ಚ ಕುಕ್ಷೌ ತೀಕ್ಷ್ಣಾಸಿನಾಚ್ಛಿನತ್ ।
ನಿಶ್ಚಕ್ರಾಮಾಸುರಃ ಕುಕ್ಷೇಃ ಶತಶೀರ್ಷೋ ಮಹಾಬಲಃ ॥ ೧೯ ॥

ದ್ವಿಶತಾಕ್ಷಿಸಮಾಯುಕ್ತಃ ಶತದ್ವಯಭುಜಾಕುಲಃ ।
ಭ್ರಮತ್ತಸ್ಯ ಶಿರೋ ರಾಜನ್ ಕಬಂಧೋಪಾಂತಮಾಗಮತ್ ॥ ೨೦ ॥

ತಚ್ಛಿರಃ ಪ್ರಾಪ್ತಮಾಲೋಕ್ಯ ಪುಷ್ಪದಂತೋಸಿನಾಚ್ಛಿನತ್ ।
ತತೋ ಭೂಕಂಪನೋ ನಾಮ ಜ್ವರೋ ದೈತ್ಯಭಯಾವಹಃ ॥ ೨೧ ॥

ಪುಷ್ಪದಂತಸ್ತದಾ ತತ್ರ ದ್ವಾಭ್ಯಾಂ ರಾಜನ್ವಿಘಟ್ಟಿತಃ ।
ಜ್ವರೇಣ ತೇನ ಚ ಕ್ಲಿಷ್ಟೋ ದುಸ್ಸಹೇನಾತಿವೇಗಿನಾ ॥ ೨೨ ॥

ತ್ಯಕ್ತ್ವಾ ಶಿವಗಣಃ ಸಂಖ್ಯಾಂ ಕಂಪಮಾನೋ ಗಿರಿಂ ಯಯೌ ।
ಕೋಲಾಹಲೋ ಮಹಾಧನ್ವೀ ಮಾಲ್ಯವಂತಂ ಶರೈಸ್ತ್ರಿಭಿಃ ॥ ೨೩ ॥

---

ಒಡನೆಯೇ ಪುಷ್ಪದಂತನು ಹರಿತವಾದ ಕತ್ತಿಯನ್ನು ತೆಗೆದುಕೊಂಡು ಆ ಮುಂಡದ ಹೊಟ್ಟೆಯ ಮೇಲೆ ಹೊಡೆಯಲು ಒಡನೆಯೇ ಆ ಹೊಟ್ಟೆಯಿಂದ ಮಹಾಬಲಿಷ್ಠನಾದ ನೂರು ತಲೆಯುಳ್ಳ ರಾಕ್ಷಸನು ಹುಟ್ಟಿ ಬಂದನು.

೨೦. ಆ ಶತಶೀರ್ಷನಿಗೆ ಇನ್ನೂರು ಕಣ್ಣುಗಳೂ ಇನ್ನೂರು ಭುಜಗಳೂ ಇದ್ದುವು. ಇಷ್ಟರೊಳಗೆ ಗಿರಿಕೇತುವಿನ ತಲೆಯು ಉರುಳಿಕೊಂಡು ಆ ಮುಂಡದ ಬಳಿಗೆ ಬಂದಿತು.

೨೧. ಆ ತಲೆಯು ಅಲ್ಲಿಗೆ ಬಂದುದನ್ನು ನೋಡಿ ಪುಷ್ಪದಂತನೂ ಆ ತಲೆಯ ಮೇಲೆ ಕತ್ತಿಯಿಂದ ಹೊಡೆದನು. ಕೂಡಲೇ ಆ ತಲೆಯಿಂದ ಭೂಕಂಪ ಎಂಬ ದೈತ್ಯರಿಗೂ ಭಯಂಕರನಾದ ಜ್ವರನು ಹುಟ್ಟಿದನು.

೨೨. ಆಗ ಪುಷ್ಪದಂತನು ಭೂಕಂಪನೆಂಬ ಜ್ವರನಿಂದಲೂ ದ್ವಿಶೀರ್ಷನಿಂದಲೂ ತೊಂದರೆಪಡಿಸಲ್ಪಟ್ಟನು. ಮತ್ತು ಜ್ವರನು ಬಹು ವೇಗದಿಂದ ತೊಂದರೆಕೊಟ್ಟನು.

೨೩–೨೪. ಆಗ ಶಿವಗಣವು ಯುದ್ಧವನ್ನು ಬಿಟ್ಟು ನಡುಗುತ್ತಾ ಮಾನಸೋತ್ತರಪರ್ವತಕ್ಕೆ ಹೋಯಿತು. ಇತ್ತ ಕೋಲಾಹಲನು ಧನುಸ್ಸನ್ನು ಹಿಡಿದು ಮಾಲ್ಯವಂತನಿಗೆ ಮೂರು ಬಾಣಗಳನ್ನು ಬಿಟ್ಟು ಭುಜಗಳನ್ನೂ ಹಣೆಯನ್ನೂ

ವಿವ್ಯಾಧ ಸ್ಕಂಧಯೋರ್ಭಾಲೇ ಮಾಲ್ಯವಾಂಶ್ಚ ತತೋ ಸುರಂ ।
ಬಾಣಾಹತೋ ಮಾಲ್ಯವತಾ ಶರೈರ್ನಾನಾವಿಧೈಃ ಶಿತೈಃ || ೨೪ ||

ಕೋಲಾಹಲಃ ಪ್ರಹೃತವಾನ್ ದರ್ಶಯನ್ನಾತ್ಮಲಾಘವಂ ।
ಸೋಽಪಿ ಹೇತಿವ್ಯಥಾಂ ತ್ಯಕ್ತ್ವಾ ಮಾಲ್ಯವಾಂಶ್ಚ ಗಣಾಗ್ರಣೀಃ || ೨೫ ||

ಗಿರಿಂ ಗೃಹೀತ್ವಾ ತೇನಾಜೌ ಕೋಲಾಹಲಮಥಾಹನತ್ ।
ನಿಶ್ಚಕ್ರಾಮ ಜ್ವರಸ್ತಸ್ಮಾತ್ ಜ್ವಲನೋ ನಾಮ ಭೀಷಣಃ || ೨೬ ||

ತ್ರಿಶೀರ್ಷೋ ನವಹಸ್ತಶ್ಚ ನವಪಾದೋತಿಪಿಂಗಳಃ ।
ಸ ಜ್ವರೋ ಮೋಹಯಾಮಾಸ ಮಾಲ್ಯವಂತಂ ಸ್ವತೇಜಸಾ || ೨೭ ||

ಮಾಲ್ಯವಾನ್ಸಮರಂ ತ್ಯಕ್ತ್ವಾ ಪರಾಕ್ರಾಂತೋ ಗಿರಿಂ ಯಯೌ ।
ಚಂಡಿರ್ಭಯಾನಕೇನಾಜೌ ಪಾಶೇನ ಹೃದಯೇ ಹತಃ || ೨೮ ||

---

ನೋಯಿಸಿದನು. ಅನಂತರ ಮಾಲ್ಯವಂತನು ಆ ರಾಕ್ಷಸನನ್ನು ಹೊಡೆದನು. ಮಾಲ್ಯವಂತನ ನಾನಾವಿಧವಾದ ಬಾಣದ ಪೆಟ್ಟಿನಿಂದ ನೊಂದ ಕೋಲಾಹಲನು ತನ್ನ ಕೈ ಚಳಕವನ್ನು ತೋರಿಸುತ್ತಾ ಅವನನ್ನು ಹೊಡೆದನು. ಆ ಕೋಲಾಹಲನ ಆ ಏಟನ್ನು ಲಕ್ಷಿಸದೆ ಗಣಶ್ರೇಷ್ಠನಾದ ಮಾಲ್ಯವಂತನು ಒಂದು ಬೆಟ್ಟವನ್ನು ತಂದು ಕೋಲಾಹಲನನ್ನು ಹೊಡೆದನು. ಹೀಗೆ ಹೊಡೆದೊಡನೆಯೇ ಒಂದು ಜ್ವರವು ಅವನಿಂದ ಭಯಂಕರವಾಗಿ ಹೊರಹೊಮ್ಮಿತು. ಅದಕ್ಕೆ ಮೂರು ತಲೆಯೂ ಒಂಭತ್ತು ಕೈಗಳೂ ಒಂಭತ್ತು ಕಾಲುಗಳೂ ಇದ್ದುವು. ಅದು ಹೊಂಬಣ್ಣವಾಗಿದ್ದಿತು. ಆ ಜ್ವರವು ಮಾಲ್ಯವಂತನನ್ನು ತನ್ನ ಶಕ್ತಿಯಿಂದ ಜ್ಞಾನತಪ್ಪಿಸಿತು.

೨೮. ಆಗ ಮಾಲ್ಯವಂತನೂ ಯುದ್ಧರಂಗವನ್ನು ಬಿಟ್ಟು ಓಡಿಹೋಗಿ ಮಾನಸೋತ್ತರ ಪರ್ವತವನ್ನು ಸೇರಿದನು. ಇತ್ತ ಭಯಾನಕನು ಚಂಡಿಯನ್ನು ಪಾಶದಿಂದ ಎದೆಯ ಮೇಲೆ ಹೊಡೆದನು.

ಹಯೋ ವಿನಿರ್ಗತಸ್ತಸ್ಮಾತ್ಕ್ಷಿಪ್ತಸ್ಸೋಽಪಿ ಚ ಸಾಗರೇ ।
ಕಾರ್ತಿಕೇಯೋ ರಣೇ ರಾಹುಂ ಸಿತೈರ್ಬಾಣೈಸ್ಸಮಾಹನತ್ ॥ ೨೯ ॥

ಆಚ್ಛಾದ್ಯ ಶರಜಾಲೈಶ್ಚ ಶೀಘ್ರಂ ಶಕ್ತಿಂ ಮುಮೋಚ ಹ ।
ಆಪತಂತೀಂ ಮಹಾಶಕ್ತಿಂ ಜ್ವಲಂತೀಮಿವ ತೇಜಸಾ ॥ ೩೦ ॥

ದೃಷ್ಟ್ವಾ ರಾಹುಃ ಸಮುತ್ಪ್ಲುತ್ಯ ಕರಾಭ್ಯಾಂ ಜಗೃಹೇ ದ್ರುತಂ ।
ಸ ತಾಂ ಶಕ್ತಿಂ ಗೃಹೀತ್ವಾ ತು ವಿನದ್ಯೋಚ್ಚೈಃ ಪುನಃ ಪುನಃ ॥ ೩೧ ॥

ಸ್ವಭಾಗಸುಸ್ಥಿರಸೋಽನೋಽಪಿ ತಸ್ಯ ಶಕ್ತ್ಯಾ ಜಘಾನ ತಂ ।
ವಕ್ಷಸ್ಯಭ್ಯಹನಚ್ಛಕ್ತ್ಯಾ ತದ್ಧೃತ್ತೋ ನಿರ್ಗತಾ ಸರಿತ್ ॥ ೩೨ ॥

ತಯಾ ಸಂಪ್ಲಾವಿತಃ ಪುತ್ರೋ ಮಹಾದೇವಸ್ಯ ಸಂಯುಗೇ ।
ಕಥಂಚಿಂತ್ವಾ ನದೀ ರುದ್ಧ್ವಾ ಸ ಮಯೂರೋ ಗಿರಿಂ ಯಯೌ ॥ ೩೩ ॥

---

೨೯—೩೩. ಆಗ ಚಂಡಿಯ ಹೊಟ್ಟೆಯಿಂದ ಒಂದು ಕುದುರೆಯು ಹೊರಟು ಅದು ಆ ಭಯಾನಕನನ್ನು ಸಮುದ್ರಕ್ಕೆ ಎಸೆಯಿತು. ಕುಮಾರಸ್ವಾಮಿಯು ರಣದಲ್ಲಿ ರಾಹುವನ್ನು ಕ್ರೂರವಾದ ಬಾಣಗಳಿಂದ ಹೊಡೆದನು. ಬಾಣಗಳನ್ನು ಬಿಟ್ಟು ಅವನನ್ನು ಮುಚ್ಚಿ ಒಡನೆಯೇ ಶಕ್ತ್ಯಾಯುಧವನ್ನು ಅವನ ಮೇಲೆ ಬಿಟ್ಟನು. ಕ್ರೌರ್ಯದಿಂದ ಜ್ವಲಿಸುತ್ತಾ ಬರುತ್ತಿರುವ ಆ ಶಕ್ತ್ಯಾಯುಧವನ್ನು ರಾಹುವು ನೋಡಿ ನೆಗೆದು ಹೋಗಿ ಅದನ್ನು ಕೈಗಳಿಂದ ಹಿಡಿದುಕೊಂಡನು. ಆ ರಾಹುವು ಆ ಶಕ್ತಿಯನ್ನು ಹಿಡಿದುಕೊಂಡು ಗಟ್ಟಿಯಾಗಿ ಗರ್ಜಿಸುತ್ತಾ ತಲೆ ಇಲ್ಲದಿದ್ದರೂ ಆ ರಾಹುವು ಆ ಸ್ಕಂದನನ್ನು ಅದೇ ಶಕ್ತಿಯಿಂದ ಹೊಡೆದನು. ಮತ್ತೆ ಈ ಕುಮಾರಸ್ವಾಮಿಯು ಶಕ್ತ್ಯಾಯುಧದಿಂದ ರಾಹುವನ್ನು ಹೊಡೆಯಲು ಆ ರಾಹುವಿನ ಹೊಟ್ಟೆಯಿಂದ ಒಂದು ನದಿಯು ಹೊರಟಿತು. ಆ ನದಿಯು ಈತನನ್ನು ಸುತ್ತಿಕೊಂಡು ತಡೆದು ನೆನಸುತ್ತಿರಲು ಕುಮಾರನು ಬಹು ಕಷ್ಟಪಟ್ಟು ಅದರಿಂದ ಪಾರಾಗಿ ತನ್ನ ವಾಹನವಾದ ಮಯೂರದೊಡನೆ ಮಾನಸೋತ್ತರ ಪರ್ವತಕ್ಕೆ ಹೊರಟುಹೋದನು.

ಶ್ರುತ್ವಾರ್ಣವಜೋ ಜ್ವರತಃ ಕಟಕ ಕದಂಬಸ್ಯ ಕರ್ಕಶಂ ವಿರುತಂ ।
ಸುಸ್ವರವಚನವಿದಗ್ಧಮಪಿ ಕೋಕಿಲಾ ಪತಿಂ ನ ಸಸ್ಮಾರ ॥ ೩೪ ॥

ಶರೈಃ ಕಿರಂತಂ ದಹನ ಮಸಿನಾ ಬರ್ಬರೋವಧೀತ್ ।
ಕೂಶ್ಮಾಂಡೋ ನಿಹತೋ ಮೂರ್ಧ್ನಿ ಸರ್ಪರೋಮ್ಣಾಥಮುಷ್ಟಿನಾ ॥೩೫॥

ಪಾತಾಳ ಕೇತುನಾ ಹಾಸೋ ಮುದ್ಗರೇಣ ಸಮಾಹತಃ ।
ತಸ್ಯ ದೇಹಾದ್ವಿನಿಷ್ಕ್ರಮ್ಯ ಹಸ್ತೀ ಮುದ್ಗರಮಾಭುಸಕ್ ॥ ೩೬ ॥

ಶುಂಡಾಯಾಂ ಮುಷ್ಟಿಘಾತೇನ ಹತಃ ಪಾತಾಳಕೇತುನಾ ।
ಆಯುಧೈರ್ಜರ್ಜರಂ ಚಕ್ರೇ ಭೃಂಗೀಶಂ ರೋಮಕಂಟಕಂ ॥ ೩೭ ॥

---

೩೪. ಜಲಂಧರನು ಜ್ವರನಿಂದ ತನ್ನ ಶಿಬಿರದಲ್ಲಿ ಹೊರ ಹೊಮ್ಮುತ್ತಿರುವ ಕಠಿಣಧ್ವನಿಯನ್ನು ಕೇಳಿದರೂ (ಸಿಂಹ ಗರ್ಜನೆಯನ್ನು ಕೇಳುತ್ತಿದ್ದರೂ) ಸಸ್ವರವಾಗಿ ಮಾತನಾಡುತ್ತಿರುವ ಶುಕ್ರಾಚಾರ್ಯರನ್ನು ಸ್ಮರಿಸಲಿಲ್ಲ. (ಜ್ವರವನ್ನು ಎಂದರೆ ವಿಕಾರಹೊಂದಿರುವ ಜಲಂಧರನು ಆ ಪರ್ವತದ ತಪ್ಪಲಿನ ಬಕವೇ ಮುಂತಾದ ಪಕ್ಷಿಗಳ ಕಠಿಣವಾದ ಧ್ವನಿಯನ್ನು ಕೇಳುತ್ತಿದ್ದರೂ ಅದರಲ್ಲಿಯೇ ಸುಖಗೊಂಡವನಾಗಿ ಒಳ್ಳೇ ಧ್ವನಿಯನ್ನು ಮಾಡುವ ಕೋಗಿಲೆಯನ್ನು ಮನಸ್ಸಿನಿಂದಲೂ ಸ್ಮರಿಸಲಿಲ್ಲ. ) ಜಲಂಧರನು ಕಾಮಕ್ರೋಧಕ್ಕೊಳಗಾಗಿ ಮಾತನಾಡುತ್ತಾ ಮಂತ್ರಾಲೋಚನೆಯನ್ನು ಕೇಳಿದನೇ ಹೊರತು ಒಳ್ಳೆಯ ಹಿತಕರವಾಗಿ ಮಾತನಾಡುವವರನ್ನು ಮನಸ್ಸಿನಲ್ಲಿಯೂ ಸ್ಮರಿಸಲಿಲ್ಲ.

೩೫. ಬಾಣಗಳಿಂದ ಹೊಡೆಯುತ್ತಿದ್ದ ದಹನನನ್ನು ಬರ್ಬರನು ಕತ್ತಿಯಿಂದ ಹೊಡೆದನು. ಸರ್ಪರೋಮನು ಕೂಷ್ಮಾಂಡನಿಗೆ ಮುಷ್ಟಿಯಿಂದ ಹೊಡೆದನು.

೩೬. ಪಾತಾಳ ಕೇತುವು ಹಾಸನನ್ನು ಒನಕೆಯಿಂದ ಹೊಡೆದನು. ಆಗ ಅವನ ದೇಹದಿಂದ ಒಂದು ಆನೆಯು ಹೊರಟು ಆ ಒನಕೆಯನ್ನು ನುಂಗಿತು.

೩೭. ಆಗ ಪಾತಾಳ ಕೇತುವು ಆ ಆನೆಯ ಸೊಂಡಿಲಿನ ಮೇಲೆ ಹೊಡೆದನು. ರೋಮಕಂಟಕನು ಭೃಂಗೀಶನನ್ನು ಆಯುಧಗಳಿಂದ ಬಹುವಾಗಿ ನೋಯಿಸಿದನು.

ಭೃಂಗೀಶೋಽಪಿರಣಾದ್ಭೀತಸ್ತ್ವರನ್ನೇವ ಗಿರಿಂ ಯಯೌ ।
ಸಶಸ್ತ್ರಂ ಧೂಮ್ರವರ್ಣಂ ಚ ಶುಭ್ರಂ ಕೇತುಮುಖೋಽಪತತ್ ॥ ೩೮ ॥

ಗಣಂ ಗಳಿತವಾನ್ ದೈತ್ಯೋ ಮಹಾಕಾಯಂ ಮಹಾನನಃ ।
ಹಾಹಾಕಾರೋ ಮಹಾನಾಸೀತ್ ಗಳಿತೇ ಕೇತುನಾ ಗಣೇ ॥ ೩೯ ॥

ಜಂಭಸ್ಯ ನಿಶಿತೈರ್ಬಾಣೈಃ ಭಿನ್ನಾಂಗೋಽಥ ವಿನಾಯಕಃ ।
ಶುಂಡಾದಂಡಂ ಪರಶುನಾ ತಸ್ಯ ಚಿಚ್ಛೇದ ದಂತಿನಃ ॥ ೪೦ ॥

ಜಂಭಾಸುರೋ ಜಘಾನಾಥ ಶಕ್ತ್ಯಾಲಂಬೋದರೋದರಂ ।
ಮೂಷಕೋಽಪಿ ಶರೈರ್ಭಿನ್ನಃ ಪ್ರವಿವೇಶ ಗುಹಾಮುಖಂ ।
ವಿನಾಯಕಃ ಪ್ರಹಾರಾರ್ತೋ ವಿಲಲಾಪಾತುರೋ ರಣೇ ॥ ೪೧ ॥

---

೩೮. ಆಗ ಭೃಂಗೀಶನು ಹೆದರಿ ಯುದ್ಧರಂಗದಿಂದ ಓಡಿ ಜಾಗ್ರತೆಯಾಗಿ ಮಾನಸೋತ್ತರ ಪರ್ವತವನ್ನು ಹೊಂದಿದನು. ಸಶಸ್ತ್ರನನ್ನೂ ಧೂಮ್ರವರ್ಣನನ್ನೂ ಶುಭ್ರನನ್ನೂ ಕೇತುಮುಖನು ಯುದ್ಧದಲ್ಲಿ ಎದುರಿಸಿದನು.

೩೯. ಮಹಾಕಾಯನನ್ನು ಕೇತುವು ದೊಡ್ಡದಾಗಿ ಬಾಯಿತೆಗೆದುಕೊಂಡು ನುಂಗಿದನು. ಆ ರೀತಿ ನುಂಗಲು ಸೈನ್ಯದಲ್ಲಿ ಹಾಹಾಕಾರವೆದ್ದಿತು.

೪೦. ಜಂಭನು ಹರಿತವಾದ ಬಾಣಗಳಿಂದ ವಿನಾಯಕನನ್ನು ಹೊಡೆದು ಅವನ ಸೊಂಡಿಲನ್ನು ಕೊಡಲಿಯಿಂದ ಕಡಿದನು.

೪೧. ಜಂಭಾಸುರನು ಶಕ್ತ್ಯಾಯುಧದಿಂದ ವಿನಾಯಕನನ್ನು ಹೊಟ್ಟೆಯ ಮೇಲೆ ಹೊಡೆದನು. ಅವನ ವಾಹನವಾದ ಇಲಿಯನ್ನೂ ಬಾಣಗಳಿಂದ ಹೊಡೆದನು. ಅದು ಆ ಏಟನ್ನೂ ತಡೆಯಲಾರದೆ ಅಲ್ಲಿದ್ದ ಒಂದು ಬಿಲವನ್ನು ಹೊಕ್ಕಿತು. ಇತ್ತ ವಿನಾಯಕನೂ ಏಟನಿಂದ ನೊಂದು ಆ ಯುದ್ಧರಂಗದಲ್ಲಿ ಅತ್ತನು.

|| ಗಣೇಶ ಉವಾಚ ||

ಹಾ ಮಾತಸ್ತಾತ ಹಾ ಭ್ರಾತರ್ಹಾ ಮೂಷಕ ಮಮ ಪ್ರಿಯ || ೪೨ ||

|| ನಾರದ ಉವಾಚ ||

ಗಣೇಶ ಕ್ರಂದಿತಂ ಶ್ರುತ್ವಾ ಭಗವಾನಾಗತಸ್ತದಾ ।
ಸಮೇತ್ಯ ಕೂಟಾದನ್ಯಸ್ಮಾತ್ಪಾರ್ವತ್ಯೋಕ್ತಃ ಶಿವಸ್ತದಾ || ೪೩ ||

|| ಪಾರ್ವತ್ಯುವಾಚ ||

ಹೇರಂಬೋ ವಧ್ಯತೇ ದೈತ್ಯೈಃ ಸ್ಕಂದೋಪಿ ವಿನಿಪಾತಿತಃ ।
ಶಿವ ಕಿಂ ಕ್ರೀಡಸೇ ಶೈಲೇ ರಕ್ಷ ಪುತ್ರೌ ಗಣಾನಪಿ ||
ಸದಾ ಶೂಲಾದಿ ಶಸ್ತ್ರಾಣಾಂ ಧೃತಾನಾಮದ್ಯ ವೈ ಕ್ಷಣಃ || ೪೪ ||

|| ನಾರದ ಉವಾಚ ||

ಅಥ ಗೌರ್ಯಾ ವಚಶ್ಶ್ರುತ್ವಾ ವೀರಭದ್ರಂ ಶಿವೋಬ್ರವೀತ್ ।
ವೃಷಃ ಸಜ್ಜೀಯತಾಂ ಶೀಘ್ರಮಿತ್ಯುಕ್ತಃ ಸ ತಥಾಕರೋತ್ || ೪೫ ||

---

೪೨. ಗಣೇಶನು ಹೇಳಿದನು– ಅಯ್ಯೋ ಅಮ್ಮಾ! ಅಯ್ಯೋ ಅಪ್ಪಾ! ಅಯ್ಯೋ ಅಣ್ಣಾ! ಅಯ್ಯೊ ನನ್ನ ಪ್ರೀತಿಗೆ ಪಾತ್ರವಾದ ಇಲಿಯೇ! ಎಂದು ದುಃಖಿಸಿದನು.

೪೩. ನಾರದನು ಹೇಳಿದನು– ಗಣೇಶನ ದುಃಖದ ಧ್ವನಿಯನ್ನು ಕೇಳಿ ಶಿವನು ತನ್ನವರನ್ನೆಲ್ಲಾ ಕಟ್ಟಿಕೊಂಡು ಬೇರೆ ಕಡೆಯಿಂದ ಬಂದನು. ಆಗ ಪಾರ್ವತಿಯು ಇಂತೆಂದಳು.

೪೪. ಪಾರ್ವತಿಯು ಹೇಳಿದಳು–ಎಲೈ ಶಿವನೇ! ಇದೇನು? ಈ ಬೆಟ್ಟದಲ್ಲಿ ಕ್ರೀಡಿಸುತ್ತಿರುವೆಯಲ್ಲ! ವಿನಾಯಕನನ್ನು ದೈತ್ಯರು ಕೊಲ್ಲುತ್ತಿದ್ದಾರೆ. ಸ್ಕಂದನನ್ನು ಕೆಡಗಿದರು. ನೀನು ಅವರನ್ನೂ ಗಣಗಳನ್ನೂ ಹೋಗಿ ರಕ್ಷಿಸು. ನೀನು ಯಾವಾಗಲೂ ಶೂಲವೇ ಮೊದಲಾದ ಆಯುಧಗಳನ್ನು ಹಿಡಿದಿರುವೆಯಲ್ಲ? ಅದಕ್ಕೆ ಈಗ ಉಪಯೋಗದ ಕಾಲವು.

೪೫. ನಾರದನು ಹೇಳಿದನು– ಶಿವನು ಗೌರಿಯ ಮಾತನ್ನು ಕೇಳಿ ವೀರಭದ್ರನನ್ನು ಕರೆದು "ನನ್ನ ವಾಹನವಾದ ವೃಷಭವನ್ನು ಬೇಗ ಸಿದ್ಧಪಡಿಸು." ಎಂದನು. ಅವನು ಹಾಗೆಯೇ ಮಾಡಿದನು.

ಬಬಂಧ ಮುಕುಟಂ ತಸ್ಯ ಶೃಂಗಯೋರ್ಭಾಸ್ಕರಪ್ರಭಂ ।
ಕಂಠೇ ಘಂಟಾಶತಂ ಬಧ್ವಾ ಕರ್ಣಯೋರ್ದರ್ಪಣೌ ಧೃತೌ ॥ ೪೬ ॥

ಸ್ಕಂಧೇ ಚ ಕಿಂಕಿಣೀಜಾಲಂ ಚರಣೇ ನೂಪುರಂ ಮಹತ್ ।
ಪುಚ್ಛೇ ಚಾಮರಸಾಹಸ್ರಂ ತಸ್ಯ ಪಾಶಾಷ್ಟಕಂ ಮುಖೇ ॥ ೪೭ ॥

ಕಲ್ಯಾಣೇ ಚ ತಥಾ ದೇವೀ ಸರ್ವಸ್ಯಾದ್ಯಾ ವ್ಯವಸ್ಥಿತಾ ।
ಪಾಶಾಷ್ಟಕೇನ ಸಂಯುಕ್ತಾ ತತ್ರ ಖಡ್ಗಧರಾಂಬಿಕಾ ॥ ೪೮ ॥

ನ್ಯಸ್ತಾನಿ ಸರ್ವಶಸ್ತ್ರಾಣಿ ಸ ವೃಷಃ ಸಜ್ಜಿತೋ ಬಭೌ ।
ಪಾರ್ವತ್ಯಾ ಭೂಷಿತಃ ಸೋಥ ನಿಜಯಾ ಘಂಟಮಾಲಯಾ ॥
ಕೃತಂ ಚ ತಿಲಕಂ ದೇವ್ಯಾ ಪ್ರೋಕ್ತಃ ಸತ್ಕೃತಿಪೂರ್ವಕಂ ॥ ೪೯ ॥

॥ ಪಾರ್ವತ್ಯುವಾಚ ॥

ಹರಸ್ತ್ವಯಾ ನ ಮೋಕ್ತವ್ಯೋ ವೃಷೇಂದ್ರ ರಣಸಂಕಟೇ ।
ಆಗಂತವ್ಯಮರಿಂ ಜಿತ್ವಾ ಶಂಭುನಾ ಸಹ ಸಂಗರೇ ॥ ೫೦ ॥

---

೪೬–೪೭. ಆ ಎತ್ತಿನ ಕೊಂಬುಗಳಿಗೆ ಪ್ರಕಾಶಮಾನವಾದ ಕಿರೀಟಗಳನ್ನೂ ಕತ್ತಿಗೆ ನೂರು ಗಂಟೆಗಳನ್ನೂ ಕಿವಿಗೆ ಕನ್ನಡಿಗಳನ್ನೂ ಹೆಗಲಿನ ಮೇಲೆ ಕಿರುಗಂಟೆಗಳ ಸರಪಣಿಯನ್ನೂ ಕಾಲಿಗೆ ಗಗ್ಗರಗಳನ್ನೂ ಬಾಲಕ್ಕೆ ಸಾವಿರಾರು ಚಾಮರಗಳನ್ನೂ ಮುಖಕ್ಕೆ ಎಂಟು ಹುರಿಯ ಮುಖವಾಡವನ್ನೂ ಹಾಕಿದನು.

೪೮–೪೯. ಮಂಗಳಕರವಾದ ಪಾರ್ವತಿಯೇ ಎಲ್ಲಕ್ಕೂ ಮುಂದಾಳಾಗಿ ನಿಂತಳು. ಆ ಅಂಬಿಕೆಯೇ ಆ ಎತ್ತಿಗೆ ಹಾಕಿ ಕಟ್ಟಿರುವ ಎಂಟು ಹಗ್ಗಗಳನ್ನೂ ಖಡ್ಗವನ್ನೂ ಹಿಡಿದು ನಿಂತಿದ್ದಳು. ಅನಂತರ ಎಲ್ಲಾ ಶಸ್ತ್ರಗಳನ್ನೂ ಅದರ ಮೇಲೆ ಇಟ್ಟರು. ಕೊನೆಗೆ ಆ ಎತ್ತು ಸಿದ್ಧವಾಯಿತು. ಪಾರ್ವತಿಯೇನೇ ಘಂಟೆಗಳ ಸರವನ್ನೂ ಅದಕ್ಕೆ ತನ್ನ ಕೈಯ್ಯಿಂದಲೇ ಅಲಂಕರಿಸಿದಳು. ಹಣೆಗೆ ತಿಲಕವನ್ನು ಇಟ್ಟು ಅದಕ್ಕೆ ಉಪಚಾರಗಳನ್ನು ಮಾಡಿ ಇಂತೆಂದಳು.

೫೦. ಪಾರ್ವತಿಯು ಹೇಳಿದಳು– ಎಲೈ ವೃಷಭರಾಜನೇ! ನೀನು ಯುದ್ಧರಂಗದಲ್ಲಿ ಹರನು ತೊಂದರೆಪಡುತ್ತಿರುವಾಗ ಅವನನ್ನು ಬಿಟ್ಟುಬಿಡಬೇಡ. ಶಂಭುವಿನೊಡನೆ ಶತ್ರುಗಳನ್ನು ಜಯಿಸಿ ನೀನು ಮತ್ತೆ ಬಾ.

|| ನಾರದ ಉವಾಚ ||

ಇತಿ ಶ್ರುತ್ವಾ ವಚೋ ದೇವ್ಯಾ ಹರೋ ವೃಷಂ ಸಮಾರುಹತ್ ।
ಧೃತ್ವಾಯುಧಸಹಸ್ರಂ ತು ನಿಜಾಲಂಕಾರಭೂಷಿತಃ ॥
ರಣಂ ಗಚ್ಛಾಮಿ ತಾಂ ಪ್ರಾಹ ಪಾರ್ವತೀಂ ಪ್ರತಿ ಸಾದರಂ || ೩೧ ||

|| ಶಿವ ಉವಾಚ ||

ತ್ವಂ ತಿಷ್ಠಸಿ ಸ್ವರೂಪೇಣ ಏಕಾಕಿನ್ಯಸಿ ಸಸ್ಪೃಹಾ ।
ಭಾಮಿನೀ ದುರಭಿಪ್ರಾಯಾ ದಾನವಾ ಹಿ ಸಮಾಗತಾಃ ॥
ತಸ್ಮಾತ್ತ್ವಯಾತ್ಮನೈವಾತ್ಮಾ ರಕ್ಷಣೀಯೋ ವರಾನನೇ || ೩೨ ||

|| ನಾರದ ಉವಾಚ ||

ಇತ್ಯುಕ್ತ್ವಾ ವೃಷಭಾರೂಢೋ ಯಯೌ ರುದ್ರೋ ರಣಾಂಗಣಂ ।
ತ್ರಿಂಶನ್ಮಹಾಬ್ಜ ಸಾಹಸ್ರೈಃ ಪ್ರಮಥಾನಾಂ ವೃತಃ ಶಿವಃ || ೩೩ ||

ವೀರಭದ್ರೋ ರಥೇನಾಶು ಸಿಂಹಯುಕ್ತೇನ ಸರ್ವತಃ ।
ವಾಮ ಪಾರ್ಶ್ವಂ ಮಹೇಶಸ್ಯ ಶೂರೋ ರಕ್ಷತಿ ಪಾರ್ಥಿವ || ೩೪ ||

---

೩೧. ನಾರದನು ಹೇಳಿದನು– ದೇವಿಯ ಮಾತನ್ನು ಕೇಳಿ ಹರನು ವೃಷಭವನ್ನು ಹತ್ತಿದನು. ಮತ್ತು ಸಾವಿರ ಆಯುಧಗಳನ್ನು ಹೊಂದಿ ತನ್ನ ಅಲಂಕಾರಗಳಿಂದ ಅಲಂಕರಿಸಿಕೊಂಡು ಪಾರ್ವತಿಯನ್ನು ಕುರಿತು ಪ್ರೀತಿ ಪೂರ್ವಕವಾಗಿ ಯುದ್ಧಕ್ಕೆ ಹೋಗುತ್ತೇನೆ. ಎಂದು ಹೇಳಿದನು.

೩೨. ಶಿವನು ಹೇಳಿದನು– ಎಲೈ ಪಾರ್ವತಿಯೇ! ನೀನು ಒಬ್ಬಂಟಿಗ ಳಾಗಿ ಮೊದಲಿದ್ದಂತೆಯೇ ಆಸೆಯನ್ನು ಹೊಂದಿದ್ದೀಯೆ. ಆದರೆ ಹೆಂಗಸಿನಲ್ಲಿ ಕೆಟ್ಟ ಯೋಚನೆಯನ್ನು ಹೊಂದಿರುವ ದಾನವರು ಇಲ್ಲಿಗೆ ಬಂದುಬಿಟ್ಟದ್ದಾರೆ. ಅವರು ವಿರುದ್ಧವಾಗಿ ನಡೆದಾರು. ಆದುದರಿಂದ ನಿನ್ನನ್ನು ನೀನೇ ಕಾಪಾಡಿ ಕೊಳ್ಳಬೇಕು.

೩೩. ನಾರದನು ಹೇಳಿದನು– ಈ ರೀತಿಯಾಗಿ ಶಿವನು ಮೂವತ್ತು ಸಾವಿರ ಮಹಾಪದ್ಮಗಣಗಳಿಂದ ಕೂಡಿಕೊಂಡು ಎತ್ತಿನ ಮೇಲೆ ಕುಳಿತುಕೊಂಡು ಯುದ್ಧರಂಗಕ್ಕೆ ಹೊರಟನು.

೩೪. ವೀರಭದ್ರನು ಸಿಂಹವನ್ನು ಕಟ್ಟಿದ ರಥದಲ್ಲಿ ಕುಳಿತು ಈಶ್ವರನ ಎಡಭಾಗವನ್ನು ರಕ್ಷಿಸುತ್ತಾ ಹೊರಟನು.

ಮಣಿಭದ್ರೋಽಶ್ವಯುಕ್ತೇನ ರಥೇನ ಪರವೀರಹಾ ।
ದಕ್ಷಿಣಂ ಧೂರ್ಜಟೇಃ ಪಾರ್ಶ್ವಂ ಸಂರಕ್ಷತಿ ಧನುರ್ಧರಃ ॥ ೫೫ ॥

ತುಂಗಾದುತ್ತೀರ್ಯ ಶೈಲೇಂದ್ರಾದ್ರಣಂ ಪ್ರಾಪ್ತೋ ಗಣೈಸ್ಸಹ ।
ದೈತ್ಯಾ ಜಗರ್ಜುಸ್ತೇ ದೃಷ್ಟ್ವಾ ಮಹೇಶಾನಂ ವೃಷಸ್ಥಿತಂ ॥ ೫೬ ॥

ತತೋ ಮಹಾನಾದೋಽಭೂದ್ದೈತ್ಯಪ್ರಮಥ ಸೈನ್ಯಯೋಃ ।
ತಯೋ ರಭೂನ್ಮಿಥೋ ರಾಜನ್ ಸಂವಿಮರ್ದೋಽಥ ದಾರುಣಃ ॥ ೫೭ ॥

ತತೋ ನಂದೀ ಮಹಾಕಾಲಃ ಕಾಲಸ್ಕಂಧೋ ಮಹಾಬಲಃ ।
ಮಾಲ್ಯವಾನ್ಪುಷ್ಪದಂತಶ್ಚ ವೃಷಲೀ ಸ್ವರ್ಣದಂತಿಕಃ ॥ ೫೮ ॥

ಚಂಡೀಶೋ ಮದನಶ್ಚಂಡಃ ಕೂಷ್ಮಾಂಡೋ ಗುಪ್ತಲೋಮಕಃ ।
ಯೋ ಯೋ ಪೂರ್ವಂ ರಣೇ ಭಗ್ನಾ ಪ್ರಾಪ್ತಾಸ್ತೇ ರಣಸಂಕಟೇ ॥ ೫೯ ॥

---

೫೫. ಶೂರನಾದ ಮಣಿಭದ್ರನು ಕುದುರೆಯನ್ನು ಕಟ್ಟಿದ ರಥದಲ್ಲಿ ಕುಳಿತು ಆ ಈಶ್ವರನ ಬಲಪಾರ್ಶ್ವವನ್ನು ಕಾಪಾಡುತ್ತಿದ್ದನು.

೫೬. ಈ ರೀತಿ ಶಿವನು ಎತ್ತರವಾದ ಪರ್ವತದ ಶಿಖರದಿಂದಿಳಿದು ಗಣಗಳ ಜೊತೆಯಲ್ಲಿ ಬಂದನು. ಇಂತು ಬಂದ ಎತ್ತಿನಮೇಲೆ ಕುಳಿತಿರುವ ಆ ಶಿವನನ್ನು ನೋಡಿ ದೈತ್ಯನು ಸಿಂಹನಾದ ಮಾಡಿದನು.

೫೭. ಆಗ ಆ ದೈತ್ಯರೂ ಪ್ರಮಥಗಣಗಳೂ ಬಹುವಾಗಿ ಸಿಂಹನಾದ ಮಾಡಿದರು. ಮತ್ತು ಅವರುಗಳಲ್ಲಿ ಒಬ್ಬರಿಗೊಬ್ಬರಿಗೆ ಉಗ್ರವಾದ ಕಲಹವು ನಡೆಯಿತು.

೫೮–೫೯. ಅನಂತರ ನಂದೀ, ಮಹಾಕಾಳ, ಕಾಲಸ್ಕಂಧ, ಮಹಾಬಲ, ಮಾಲ್ಯವಂತ, ಪುಷ್ಪದಂತ, ವೃಷಲಿ, ಸ್ವರ್ಣದಂತಿಕ, ಚಂಡೀಶ, ಮದನ, ಚಂಡ, ಕೂಷ್ಮಾಂಡ, ಗುಪ್ತಲೋಮಕ, ಇವರೇ ಮೊದಲಾದ ಹಿಂದೆ ಯಾರು ಯಾರು ಯುದ್ಧದಲ್ಲಿ ಸೋತು ಓಡಿದ್ದರೋ ಅವರೆಲ್ಲರೂ ಈ ಉಗ್ರಕದನಕ್ಕೆ ಬಂದರು.

ಶಿವಸ್ಯ ಪುರತೋ ದೈತ್ಯಾ ಯುಯುಧುಸ್ತೇ ಮಹಾಬಲಾಃ ।
ಗಣದಾನವಯೋರ್ಘೋರಾಂ ಸಂಗ್ರಾಮೋಭೂದ್ಭಯಾವಹಃ ॥ ೬೦ ॥

ಶೂಲೈಃ ಕುಂತೈರ್ಗದಾಭಿಶ್ಚ ಮುದ್ಗರೈಃ ಪರಿಘೈರಪಿ ।
ಇಂದ್ರಿಯಾಣಿ ಯಥಾತ್ಮಾನಂ ವಿಷಯೈಃ ಪಂಚ ಪಂಚಭಿಃ ॥ ೬೧ ॥

ತತೋ ಗಣಾನಾಂ ವಿದ್ರಾವ್ಯ ಸೈನ್ಯಂ ತೇ ಚ ಮಹಾಬಲಾಃ ।
ರಣೇ ಸಂವೇಷ್ಟಯಾಮಾಸುಃ ಶರೌಘೈಃ ಸರ್ವತಃ ಶಿವಂ ॥ ೬೨ ॥

ಜಘಾನಾಥ ರಣೇ ದೈತ್ಯಾನ್ ಶಂಭುರ್ಬಾಣೈಃ ಸುದಾರುಣೈಃ ।
ಯಥಾಶ್ವಮೇಧಃ ಪಾಪಾನಿ ಹಂತಿ ಸ್ನಾನೇನ ತತ್‌ಕ್ಷಣಾತ್ ॥ ೬೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಮಹಾದೇವ ಸಮಾಗಮೋ ನಾಮ ತ್ರಯೋದಶೋಽಧ್ಯಾಯಃ

---

೬೦. ಶಿವನ ಎದುರಿಗೆ ಆ ದೈತ್ಯರು ಬಹು ಭಯಂಕರವಾಗಿ ಯುದ್ಧ ಮಾಡಿದರು. ಈ ರೀತಿಯಾಗಿ ಗಣಗಳಿಗೂ ದಾನವರಿಗೂ ಭಯಂಕರವಾದ ಯುದ್ಧವು ನಡೆಯಿತು.

೬೧-೬೨. ಕಣ್ಣು, ಮೂಗು, ಕಿವಿ, ಚರ್ಮ, ನಾಲಿಗೆ ಎಂಬ ಐದು ಇಂದ್ರಿಯಗಳೂ ತಮ್ಮ ತಮ್ಮ ವಿಷಯಗಳಿಂದ ಆತ್ಮನನ್ನು ಹೊಡೆಯುವಂತೆ ಶೂಲ, ಕುಂತ, ಗದೆ, ಮುದ್ಗರ ಪರಿಘವೆಂಬ ಐದು ಆಯುಧಗಳಿಂದ ಆ ಶಿವನನ್ನು ಹೊಡೆದರು. ಆಗ ದೈತ್ಯರು ಶಿವನ ಗಣಗಳನ್ನು ಓಡಿಸಿ ಯುದ್ಧದಲ್ಲಿ ಈಶ್ವರನನ್ನು ಎಲ್ಲಾ ಕಡೆಯಿಂದಲೂ ಮುತ್ತಿಕೊಂಡರು.

೬೩. ಅಶ್ವಮೇಧಯಾಗವು ಅವಭೃತಸ್ನಾನವನ್ನು ಮಾಡುವುದರಿಂದ ಪಾಪಗಳನ್ನು ನಾಶಮಾಡುವಂತೆ ಶಂಭುವು ಬಾಣಗಳಿಂದ ದೈತ್ಯರನ್ನು ಕೊಂದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದವಾದ ಜಾಲಂಧರೋಪಾಖ್ಯಾನದಲ್ಲಿ ಮಹಾದೇವ ಸಮಾಗಮ ಎಂಬ ಹದಿಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ದಶೋಽಧ್ಯಾಯಃ ॥



॥ ನಾರದ ಉವಾಚ ॥

ತತೋ ಜಾಲಂಧರಶ್ಶ್ರುತ್ವಾ ದೈತ್ಯಕೋಲಾಹಲಂ ರಣೇ ।
ಆ ಜಗಾಮ ರಥಾರೂಢೋ ಯತ್ರ ದೇವಃ ಸದಾಶಿವಃ ॥
ಸಾರಥಿಂ ಖಡ್ಗರೋಮಾಣಂ ಕೋಪಾತ್ಸತ್ವರಮಬ್ರವೀತ್ ॥ ೧ ॥

॥ ಜಾಲಂಧರ ಉವಾಚ ॥

ಸಂಪ್ರೇಷಯ ರಥಂ ಶೀಘ್ರಂ ಸಹಸ್ರಹಯಯೋಜಿತಂ ।
ಹನ್ಮಿ ತಂ ತಾಪಸಂ ಸರ್ಪಜರಾಭಸ್ಮಾಸ್ಥಿಭೂಷಿತಂ ॥
ವೃಷಾರೂಢಸ್ಯ ಕಾ ಶಕ್ತಿಃ ಪಂಗೋರ್ಯುದ್ಧೇ ಮಯಾ ಸಹ ॥ ೨ ॥

---

### ಹದಿನಾಲ್ಕನೆಯ ಅಧ್ಯಾಯವು

೧. ನಾರದನು ಹೇಳಿದನು– ಆಮೇಲೆ ಜಲಂಧರನು ಯುದ್ಧದಲ್ಲಿ ಬಹುವಾಗಿ ಕೂಗುತ್ತಿರುವುದನ್ನು ಕೇಳಿ ರಥದಲ್ಲಿ ಕುಳಿತು ಶಂಭುವಿರುವಲ್ಲಿಗೆ ಬಂದನು. ಮತ್ತು ಸಾರಥಿಯಾದ ಖಡ್ಗರೋಮನನ್ನು ಕುರಿತು ಕೋಪದಿಂದ ಇಂತೆಂದನು.

೨. ಜಲಂಧರನು ಹೇಳಿದನು– ಎಲೈ ಖಡ್ಗರೋಮನೇ ! ಸಾವಿರ ಕುದುರೆಗಳನ್ನು ಕಟ್ಟಿರುವ ನನ್ನ ರಥವನ್ನು ಬೇಗನೆ ನಡೆಸು. ಹಾವುಗಳನ್ನು ಕಟ್ಟಿಕೊಂಡಿರುವ ಮುದುಕನಾದ ಮೂಳೆಯನ್ನು ಕಟ್ಟಿಕೊಂಡಿರುವ ಆ ತಾಪಸನನ್ನು ಕೊಲ್ಲುವೆನು. ಎತ್ತಿನ ಮೇಲೆ ಕುಳಿತು ನನ್ನೊಡನೆ ಯುದ್ಧಮಾಡುವ ಈ ಹೆಳವನ ಶಕ್ತಿ ಎಷ್ಟರದು ?

ಉಲ್ಬಣಗುಣಮಭ್ಯುದಿತಂ ಕ್ಷುದ್ರೋ ದ್ರಷ್ಟುಂ ಕ್ಷಣಂ ನ ಸಹತ ಇತಿ ।
ಹಿತ್ವಾ ತನುಮುಮುತಾಮಪಿ ಶಲಭಃ ಶುಭ್ರಾಂ ದೀಪಾರ್ಚಿಷಂ ಹರತಿ॥ ೩ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ಖಡ್ಗರೋಮಾಣ ಮಾಭಾಷ್ಯ ಚ ತತೋದ್ಧತಃ ।
ಗೃಹೀತ್ವಾ ಕಾರ್ಮುಕಂ ಘೋರಂ ರಥೇನಾಧಾವತ ದ್ರುತಂ ॥ ೪ ॥

ತಂ ರುರೋಧ ತಥಾಯಾಂತಂ ವೀರಭದ್ರಃ ಶಿತೈಃ ಶರೈಃ ।
ನಿರುಚ್ಛ್ವಾಸೀತ್ಕೃತೇನಾಪಿ ಸಕಾಯೇನ ಶರೈರ್ವೃತಃ ॥ ೫ ॥

ದೇವೈರ್ಯದ್ಯಪಿ ತುಲ್ಯೋಽಭೂತ್ ಭೂತೇಶಸ್ಯ ಪರಿಗ್ರಹಃ ।
ತಥಾಪಿ ಕಿಂ ಕಪಾಲಾನಿ ತುಲಾಂ ಯಾಂತಿ ಕಲಾನಿಧೇಃ ॥ ೬ ॥

ವಿವ್ಯಾಧ ಮಣಿಭದ್ರೋಽಪಿ ಶರೈಸ್ಸಾಗರನಂದನಂ ।
ಪಾಶೇನ ಮಣಿಭದ್ರಂ ತು ಹತ್ವೋವಾಚ ಸಮುದ್ರಜಃ ॥ ೭ ॥

---

೩. ಉತ್ಕೃಷ್ಟವಾದ ಗುಣವುಳ್ಳ, ವೃದ್ಧಿ ಹೊಂದುತ್ತಿರುವವನನ್ನು ಅಯೋಗ್ಯನಾದವನು ಒಂದು ಕ್ಷಣಕಾಲವೂ ಸಹಿಸಲಾರನು, ಎಂಬುದು ನಿಜವು. ದೀಪದ ಹುಳುವು ತನ್ನ ದೇಹದ ಪ್ರೀತಿಯನ್ನು ಬಿಟ್ಟು ಚೆನ್ನಾಗಿರುವ ದೀಪದ ಕಾಂತಿಯನ್ನೂ ಕೂಡ ಹಾಳುಮಾಡುತ್ತದೆ.

೪. ನಾರದನು ಹೇಳಿದನು– ಹೀಗೆಂದು ಖಡ್ಗರೋಮನಿಗೆ ಹೇಳಿ ಆ ಕೊಬ್ಬಿದ ಜಲಂಧರನು ಉಗ್ರವಾದ ಧನುಸ್ಸನ್ನು ಹಿಡಿದು ರಥದಲ್ಲಿ ಕುಳಿತು ಶೀಘ್ರವಾಗಿ ಎದುರಿಸಿದನು.

೫. ಆಗ ವೀರಭದ್ರನು ಎದುರಿಸಿ ಬರುತ್ತಿರುವ ಜಲಂಧರನನ್ನು ಚೂಪಾದ ಬಾಣಗಳಿಂದ ಹೊಡೆದು ಕೆಡವಿದನು ಆಗ ಆ ಬಾಣಗಳು ಆತನ ದೇಹದಲ್ಲಿ ಚುಚ್ಚಿಕೊಂಡುದರಿಂದ ನಿಟ್ಟುಸಿರುಬಿಟ್ಟನು.

೬. ಶಿವನ ಗಣಗಳು ದೇವತೆಗಳಿಗೇನೋ ಸರಿಸಮಾನವಾಗಿರುವರು. ಆದರೆ ದೇವತೆಗಳಿಗೂ ಅವರಿಗೂ ಸರಿಸಮಾನವಿಲ್ಲ. ಕಪಾಲಗಳುಚಂದ್ರನಿಗೆ ಎಂದಾದರೂ ಸಮವಾಗುವುವೇ ?

೭. ಮಣಿಭದ್ರನೂ ಕೂಡಾ ಬಾಣಗಳಿಂದ ಜಲಂಧರನನ್ನು ಹೊಡೆದನು. ಆಗ ಜಲಂಧರನು ಪಾಶದಿಂದ ಮಣಿಭದ್ರನನ್ನು ಹೊಡೆದು ಇಂತೆಂದನು.

|| ಜಾಲಂಧರ ಉವಾಚ ||

ಏಹಿ ಯೋದ್ಧುಂ ಮಹಾದೇವ ಶಸ್ತ್ರಾಭ್ಯಾಸೋಽಸ್ತಿ ತೇ ಯದಿ ।
ತ್ವ ಮಾಂ ಪ್ರಹರ ನತ್ವಾಹಮಾದೌ ಹನ್ಮಿ ಜಟಾಧರಂ || ೮ ||

|| ನಾರದ ಉವಾಚ ||

ಇತಿ ಬ್ರುವಂತಂ ತಂ ಗರ್ವಾದ್ವೀರಭದ್ರೋಽಥ ಸಾಯಕೈಃ ।
ಪೂರಯಾಮಾಸ ಸಂಕ್ರುದ್ಧೋ ಯಥಾ ಪದ್ಮಂ ರವಿಃ ಕರೈಃ || ೯ ||

ಮಣಿಭದ್ರೋಽಥ ಗದಯಾ ಸೈನ್ಯಂ ತಸ್ಯ ಸಮಾಹನತ್ ।
ರಥೋಽಪರಿ ರಥಂ ವೀರ ತುರಗಂ ತುರಗೋಽಪರಿ || ೧೦ ||

ಗಜೋಽಪರಿ ಗಜಂ ಹತ್ವಾ ಪಾತಯಾಮಾಸ ಭೂತಳೇ ।
ರಕ್ತಪಂಕಾರುಣಾಭೂಮಿಃ ಸಂಜಾತಾ ದುರ್ಗಮಾ ಕ್ಷಣಾತ್ || ೧೧ ||

ಶೈವಾಶ್ಚ ಗಣಮುಖ್ಯಾಶ್ಚ ದಾನವಾನ್ ಜಘ್ನುರಾಹವೇ ।
ಪತಂತಿ ದಾನವಾಶ್ಘೋರಾ ಗತಪ್ರಾಣಾ ಮಹೀತಳೇ || ೧೨ ||

---

೮. ಜಲಂಧರನು ಹೇಳಿದನು- ಎಲೈ ಮಹಾದೇವನೇ ! ನೀನು ಶಸ್ತ್ರಾಸ್ತ್ರ ಗಳನ್ನು ಅಭ್ಯಾಸಮಾಡಿದ್ದರೆ ಯುದ್ಧಕ್ಕೆ ಬಾ. ನೀನು ಮೊದಲು ನನ್ನನ್ನು ಹೊಡೆ. ನಾನು ಜಟಾಧಾರಿಯಾದ ತಾಪಸನನ್ನು ಮೊದಲು ಹೊಡೆಯುವುದಿಲ್ಲ.

೯. ನಾರದನು ಹೇಳಿದನು- ಹೀಗೆ ಗರ್ವದಿಂದ ಮಾತಾಡುತ್ತಿರುವ ಜಲಂಧರನಿಗೆ ವೀರಭದ್ರನು ಬಾಣಗಳನ್ನು, ಬಿಟ್ಟು ಸೂರ್ಯನು ತನ್ನ ಕಿರಣಗಳಿಂದ ಪದ್ಮವನ್ನು ತುಂಬುವಂತೆ ಅವನ ದೇಹದಲ್ಲಿ ತುಂಬಿದನು.

೧೦-೧೧. ಆ ಮೇಲೆ ಮಣಿಭದ್ರನು ಗದೆಯಿಂದ ಅವನ ಸೈನ್ಯವನ್ನು ಹೊಡೆದನು. ರಥದಿಂದ ರಥವನ್ನೂ, ಕುದುರೆಯಿಂದ ಕುದುರೆಯನ್ನೂ, ಆನೆಯ ಮೇಲೆ ಆನೆಯನ್ನೂ ಹೊಡೆದು ಕೆಳಗೆ ಕೆಡವಿದರು. ಒಂದು ಕ್ಷಣದಲ್ಲಿಯೇ ಭೂಮಿಯೆಲ್ಲಾ ರಕ್ತದಿಂದ ಕೆಂಪಾಗಿ ಕೆಸರಿನಿಂದ ನಡೆಯಲು ಕಷ್ಟವಾಯಿತು.

೧೨. ಶಿವನ ಗಣಗಳು ದಾನವರನ್ನು ಈ ರೀತಿಯಾಗಿ ಕೊಂದರು. ಅವರೆಲ್ಲರೂ ಪ್ರಾಣಬಿಟ್ಟವರಾಗಿ ರಣಭೂಮಿಯಲ್ಲಿ ಬಿದ್ದರು.

ರುಂಡ ದೋರ್ದಂಡ ಮುಂಡೈಶ್ಚ ಕಟಿಸ್ಪೃಷ್ಠ ಕರೋರುಭಿಃ ।
ಪತಂತಿ ದಾನವಾಶ್ಶೂರಾ ಪೂರಿತಾ ವಸುಧಾ ನೃಪ || ೧೩ ||

ಏವಂ ವಿಧಂ ರಣಂ ದೃಷ್ಟ್ವಾ ಹರಮತ್ಯಂತ ದುರ್ಜಯಂ ।
ಭುವನೇ ಚ ತಥಾನ್ಯಾನಿ ದೃಷ್ಟವಾನ್ ಲಕ್ಷಣಾನಿ ಸಃ || ೧೪ ||

ತೇಜೋನ್ಯದೇವ ನಕ್ಷತ್ರಶಶಾಂಕಶಕಲಾದಿಷು ।
ಉದ್ಘಾಟಿತಜಗತ್ಕೋಶ ಮನ್ಯದೇವ ರವೇರ್ಮಹಃ || ೧೫ ||

ಭಗ್ನಃ ಪುನಶ್ಚಿಂತಿತವಾನ್ ತತೋ ಜಾಲಂಧರೋ ನೃಪ ।
ನ ದೃಷ್ಟಾ ಸಾಮಯಾಗೌರೀ ಯಾಂ ಮಾಮಾಹೇತಿ ನಾರದಃ || ೧೬ ||

ಸಾಂಪ್ರತಂ ತಾಶ್ವತೇ ಸ್ಥಾನೇ ಕಥಂ ದ್ರಕ್ಷ್ಯಾಮ್ಯುಮಾಂ ಸ್ಥಿತಾಂ ।
ತಾಂ ಹಿ ದ್ರಷ್ಟುಂ ವ್ರಜಾಮ್ಯಾದೌ ಪಶ್ಚಾದ್ಯೋತ್ಸ್ಯಾಮಿ ಶಂಭುನಾ ।
ಚಿಂತಯಿತ್ವೇತಿ ಮನಸಾ ದೈತ್ಯಂ ಪ್ರಾಹಾರ್ಣವಾತ್ಮಜಃ || ೧೭ ||

---

೧೩. ತಲೆ, ಸೊಂಟ, ತೋಳು, ಮುಂಡ, ಕೈ, ತೊಡೆ, ಇವೆಲ್ಲವೂ ಕತ್ತರಿಸಿ ಹೋಗಿ ದಾನವರು ಭೂಮಿಯಲ್ಲಿ ಬೀಳುತ್ತಿದ್ದುದರಿಂದ ಆ ರಣರಂಗವೆಲ್ಲವೂ ತುಂಬಿಹೋಯಿತು.

೧೪. ಯುದ್ಧರಂಗದಲ್ಲಿ ಈರೀತಿ ತಮ್ಮವರೇ ಸತ್ತು ಬಿದ್ದಿರುವುದನ್ನೂ ಹರನು ಜಯಿಸಲಸಾಧ್ಯವಾಗಿರುವುದನ್ನೂ ಜಲಂಧರನು ತಿಳಿದನು. ಅಲ್ಲದೆ ಪ್ರಪಂಚದಲ್ಲಿ ತನಗೆ ಅಪಜಯವಾಗುವ ಲಕ್ಷಣಗಳನ್ನೂ ತಿಳಿಯುತ್ತಿದ್ದನು.

೧೫. ನಕ್ಷತ್ರ ಚಂದ್ರರಲ್ಲಿರುವ ತೇಜಸ್ಸೇ ಬೇರೆರೀತಿಯಾಗಿದ್ದಿತು. ಜಗತ್ತು ಎಂಬ ಮೊಗ್ಗನ್ನು ಅರಳಿಸಿದ ಸೂರ್ಯನ ತೇಜಸ್ಸೇ ಬೇರೆಯಾಗಿದ್ದಿತು.

೧೬. ಈ ರೀತಿ ಸೋತ ಜಲಂಧರನು ನಾರದನು ನನಗೆ ವರ್ಣಿಸಿದ್ದ ಆ ಗೌರಿಯು ಮಾತ್ರ ಕಾಣಿಸಲೇ ಇಲ್ಲವಲ್ಲ, ಎಂದು ಚಿಂತೆಗೊಂಡನು.

೧೭. ಈಗ ಅವಳಿರುವ ಕೈಲಾಸ ಭಾಗದಲ್ಲಿ ಆ ಉಮೆಯನ್ನು ಹೇಗೆ ನೋಡಲಿ ? ಇರಲಿ. ಮೊದಲು ಹೋಗಿ ಅವಳನ್ನು ನೋಡುತ್ತೇನೆ. ಆ ಮೇಲೆ ಶಂಭುವಿನೊಡನೆ ಯುದ್ಧಮಾಡುತ್ತೇನೆ. ಈ ರೀತಿಯಾಗಿ ಯೋಚಿಸಿ ಜಲಂಧರನು ಶುಂಭನೆಂಬ ದೈತ್ಯನನ್ನು ಕುರಿತು ಇಂತೆಂದನು.

॥ ಜಾಲಂಧರ ಉವಾಚ ॥

ಶುಂಭ ಚಂಡಜಯೋ ವೀರ ಮಮ ತುಲ್ಯ ಪರಾಕ್ರಮ ।
ಧೃತ್ವಾ ಮತ್ಸದೃಶಂ ರೂಪಂ ಸಂಗ್ರಾಮಂ ಕರ್ತುಮರ್ಹಸಿ ॥ ೧೮ ॥

ತವ ಯುದ್ಧಸ್ಯ ಭಾರೋಯಂ ಶಿಬಿರಸ್ಯ ಬಲಸ್ಯ ಚ ।
ಅಹಂ ಯಾಸ್ಯಾಮಿ ತಾಂ ದ್ರಷ್ಟುಂ ಗೌರೀಂ ಚ ಚಿತ್ತಹಾರಿಣೀಂ ॥ ೧೯ ॥

॥ ನಾರದ ಉವಾಚ ॥

ಇತ್ಯುಕ್ತ್ವಾಥ ದದೌ ತಸ್ಮೈ ಸ್ವಾಂಗಾದುತ್ತೀರ್ಯ ಮಂಡನಂ ।
ವರ್ಮ ಶಸ್ತ್ರಾದಿಕಂ ದತ್ವಾ ರಥಂ ಸಾರಥಿ ಸಂಯುತಂ ॥ ೨೦ ॥

ದುರ್ವಾರಣೇನ ಸಹಿತಃ ಸೈನ್ಯಂ ಮುಕ್ತ್ವೋದಧೇಸ್ಸುತಃ ।
ಅಲಕ್ಷಿತಸ್ತತೋ ಗತ್ವಾ ಗುಹಾಂ ಗುಪ್ತಾಂ ತು ಪಾರ್ಥಿವ ॥ ೨೧ ॥

ಮಾನಸೋತ್ತರ ಶೈಲಸ್ಯ ಹರರೂಪಂ ದಧಾರ ಸಃ ।
ಧೃತ್ವಾ ದುರ್ವಾರಣೋ ರೂಪಂ ನಂದಿನಸ್ಸದೃಶಂ ತಥಾ ॥ ೨೨ ॥

---

೧೮. ಜಲಂಧರನು ಹೇಳಿದನು– ಚಂಡನನ್ನು ಜಯಿಸಿದ, ನನ್ನ ಪರಾಕ್ರಮದಂತೆ ಪರಾಕ್ರಮವುಳ್ಳ ಎಲೈ ಶುಂಭನೇ ! ನನ್ನ ರೂಪದಂತೆ ಮಾಯೆಯಿಂದ ರೂಪವನ್ನು ಹೊಂದಿ ಯುದ್ಧವನ್ನು ಮಾಡುತ್ತಿರು.

೧೯. ಎಲೈ ಶುಂಭನೇ ! ಈ ಯುದ್ಧದ ಭಾರವೂ, ಸೈನ್ಯಗಳನ್ನು ಸರಿಯಾಗಿ ಇಟ್ಟುಕೊಳ್ಳುವ ಭಾರವೂ ನಿನ್ನದಾಗಿದೆ. ನಾನು ಆ ಮನೋಹರಳಾದ ಗೌರಿಯನ್ನು ನೋಡಲು ಹೋಗುತ್ತೇನೆ.

೨೦–೨೨. ನಾರದನು ಹೇಳಿದನು– ಆ ಶುಂಭನಿಗೆ ಹೀಗೆಂದು ಹೇಳಿ ತನ್ನ ಮೈಯ್ಯಿಂದ ಬಟ್ಟೆ ಒಡವೆ ಶಸ್ತ್ರಗಳನ್ನೂ ಕಳಚಿ ಅವುಗಳನ್ನು ಅವನಿಗೆ ಕೊಟ್ಟು ಸಾರಥಿ ಸಹಿತವಾದ ರಥವನ್ನೂ ಕೊಟ್ಟನು. ಅನಂತರ ದುರ್ವಾರಣನನ್ನು ಕರೆದುಕೊಂಡು ಆ ಜಲಂಧರನು ಒಬ್ಬರಿಗೂ ಕಾಣದಂತೆ ಮಾನಸೋತ್ತರ ಶೈಲದ ಒಂದು ಗುಟ್ಟಾದ ಗುಹೆಗೆ ಹೋಗಿ ತಾನು ಈಶ್ವರನ ರೂಪವನ್ನು ಧರಿಸಿ ದುರ್ವಾರಣನಿಗೆ ನಂದಿಯ ರೂಪವನ್ನು ಅಳವಡಿಸಿ ಸಿದ್ಧನಾದನು.

ಅಥಾರುರುಹತುಃ ಶೈಲಂ ಛದ್ಮಶಂಕರನಂದಿನೌ ।
ಯತ್ರಾಸ್ತೇ ಶಿಖರೇ ಗೌರೀ ಸಖೀಭಿಃ ಸಹಿತಾ ನೃಪ　　|| ೨೩ ||

ತಮಾಯಾಂತಂ ಶರೈರ್ಭಿನ್ನಂ ಸ್ಕಂಧಮಾಲಂಬ್ಯ ನಂದಿನಃ ।
ರಕ್ತಾಕ್ತಮಂಬರಂ ದೃಷ್ಟ್ವಾ ಭವಾನೀ ವಿಸ್ಮಿತಾಭವತ್　　|| ೨೪ ||

ಸಖ್ಯಸ್ತಸ್ಯಾ ಜಯಾದ್ಯಾಸ್ತಾ ಜಗ್ಮುಸ್ತಂ ಸಂಭ್ರಮಾನ್ವಿತಾಃ ।
ಶಂಕರಸ್ಯಾಂತಿಕಂ ಗತ್ವಾ ಪಪ್ರಚ್ಛುಸ್ತಂ ಸುದುಃಖಿತಾಃ　　|| ೨೫ ||

|| ಸಖ್ಯ ಊಚುಃ ||

ಕಿಂ ಜಾತಂ ತವ ದೇವೇಶ ಕೇನ ತ್ವಂ ಸಂಗರೇ ಜಿತಃ ।
ಸ ಶಲ್ಯಸ್ತ್ವಂ ಕಥಂ ನಾಥ ಸಂಸಾರೀವ ಪ್ರರೋದಿಷಿ　　|| ೨೬ ||

---

೨೩. ಈ ರೀತಿಯಾಗಿ ಕಪಟವೇಷವನ್ನು ಹೊಂದಿದ ಆ ಜಲಂಧರನು ಮತ್ತು ದುರ್ವಾರಣನು ಹರ ನಂದಿಗಳಂತೆ ನಟಿಸುತ್ತಾ ಗೌರಿಯು ಇರುವ ಆ ಪರ್ವತದ ಶಿಖರಕ್ಕೆ ಹೋದರು.

೨೪. ಹೀಗೆ ಹೊರಟ ಕಪಟ ಶಿವನು ಬಾಣಗಳ ಏಟಿನಿಂದ ಬಹು ನೊಂದಂತೆಯೂ ಅದರಿಂದ ಬಂದ ರಕ್ತದಿಂದ ಬಟ್ಟೆಯೆಲ್ಲಾ ನೆನೆದಿರುವಂತೆಯೂ ಅದರಿಂದ ತಾನು ಶಕ್ತಿಗುಂದಿ ನಂದಿಯ ಕತ್ತನ್ನು ಹಿಡಿದುಕೊಂಡು ಬರುತ್ತಿರುವ ಹಾಗೆಯೂ ನಟಿಸಿಕೊಂಡು ಬರುತ್ತಿರುವುದನ್ನು ನೋಡಿ ಗೌರಿಯು ಶಂಕರ ನಂದಿಗಳೆಂದೇ ತಿಳಿದು ಆಶ್ಚರ್ಯಭರಿತಳಾದಳು.

೨೫. ಆಗ ಜಯೆಯೇ ಮೊದಲಾದ ಸಖಿಯರು ಇವರನ್ನು ನೋಡಿ ಆತುರದಿಂದ ಆ ಶಂಕರನ ಹತ್ತಿರಕ್ಕೆ ಓಡಿಬಂದು ದುಃಖಪಡುತ್ತಾ ಇಂತೆಂದರು.

೨೬, ಸಖಿಯರು ಹೇಳಿದರು– ಎಲೈ ದೇವದೇವನಾದ ಸ್ವಾಮಿಯೇ ! ನಿನಗೇನಾಯಿತು ? ನಿನ್ನನ್ನು ಯುದ್ಧದಲ್ಲಿ ಸೋಲಿಸಿದವರಾರು ? ನಿನ್ನ ಮೈಯ್ಯಲ್ಲೆಲ್ಲಾ ಈ ಬಾಣದ ಮೊನೆಗಳು ಹೀಗೆ ಚುಚ್ಚಿಕೊಂಡಿರಲು ಕಾರಣವು ಏನು ? ಇದೇನು ಸಂಸಾರಿಗಳಂತೆ ಅಳುತ್ತಿರುವೆಯಲ್ಲಾ ?

॥ ನಾರದ ಉವಾಚ ॥

ಇತ್ಯುಕ್ತಃ ಪ್ರದದೌ ತಾಭ್ಯೋ ಭೂಷಣಾನಿ ಪೃಥಕ್ ಪೃಥಕ್ ।
ಉತ್ತಾರ್ಯ ಶನಕೈ ರಂಗಾದ್ವಾಸುಕಿ ಪ್ರಭೃತೀನಿ ಚ ॥ ೨೭ ॥

ಗಣೇಶಸ್ಕಂದ ಶಿರಸೀ ಛಿನ್ನೇ ಕುಕ್ಷೌ ವಿಲೋಕ್ಯ ಚ ।
ಹಾ ಸ್ಕಂದ ಹಾ ಗಣೇಶೇತೀ ಹಾ ರುದ್ರೇತ್ಯಂಬಿಕಾರುದತ್ ॥ ೨೮ ॥

ತಸ್ಯಾಃ ಸಖ್ಯಸ್ತತಃ ಸರ್ವಾ ರುರುದುಃ ಶೋಕಕರ್ಶಿತಾಃ ।
ಅತ್ರಾಂತರೇ ತದಾ ನಂದೀ ಜಗಾದ ಗಿರಿಜಾಂ ಪ್ರತಿ ॥
ದುರ್ಮನಸ್ಕಾಂ ನಿರಾನಂದಾಂ ಹಸ್ತವಿನ್ಯಸ್ತಮಸ್ತಕಾಂ ॥ ೨೯ ॥

॥ ನಂದ್ಯುವಾಚ ॥

ಪಶ್ಯ ದೇವಿ ಭವಂ ಬಾಣೈರ್ದಾರಿತಂ ಸಂಗರೇಽಸುರೈಃ ।
ಪೀಡಿತಂ ಜರ್ಜರಾಂಗಂ ಚ ತ್ವಮೇನಂ ಪರಿಪಾಲಯ ॥ ೩೦ ॥

---

೨೭. ನಾರದನು ಹೇಳಿದನು– ಅವರು ಹೀಗೆ ಕಷ್ಟವನ್ನು ವಿಚಾರಿಸಲು ಅವರಿಗೆ ತನ್ನಲ್ಲಿದ್ದ ಒಡವೆಗಳನ್ನು ತೆಗೆದು ಒಬ್ಬೊಬ್ಬರಿಗೆ ಒಂದೊಂದರಂತೆ ಕೊಟ್ಟನು. ಅನಂತರ ವಾಸುಕಿಯೇ ಮುಂತಾದ ಆಭರಣಗಳನ್ನು ತೆಗೆದು ಕೆಳಗೆ ಇಟ್ಟನು.

೨೮. ಗಣೇಶ ಕುಮಾರಸ್ವಾಮಿಯರ ಕತ್ತರಿಸಿದ ತಲೆಗಳು ಆ ನಂದಿಯ ಮಡಲಿನಲ್ಲಿರಲವುಗಳನ್ನು ನೋಡಿ ಪಾರ್ವತಿಯು "ಅಯ್ಯೋ ಸ್ಕಂದನೇ! ಅಯ್ಯೋ ಗಣೇಶನೇ! ಅಯ್ಯೋ ರುದ್ರನೇ"! ಎಂಬುದಾಗಿ ಅಳತೊಡಗಿದಳು.

೨೯. ಆಗ ಆ ಪಾರ್ವತಿಯೂ ಸಖಿಯರೂ ಎಲ್ಲರೂ ದುಃಖಗೊಂಡು ಗೋಳಾಡಿದರು. ಪಾರ್ವತಿಯು ದುಃಖಪಡುತ್ತಾ ಅಂಗೈಯ್ಯಲ್ಲಿ ತಲೆಯನ್ನು ಇಟ್ಟುಕೊಂಡು ಕುಳಿತಳು. ಇದನ್ನು ನೋಡಿ ಆ ಕಪಟ ನಂದಿಯು ಇಂತೆಂದನು.

೩೦. ಕಪಟ ನಂದಿಯು ಹೇಳಿದನು– ಎಲೈ ದೇವಿಯೇ! ಯುದ್ಧದಲ್ಲಿ ದೈತ್ಯರು ಬಾಣಗಳನ್ನು ಹೊಡೆದು ಚೂರು ಚೂರುಮಾಡಿರುವ ಶಿವನ ಮೈಯನು ನೋಡು. ಅಲ್ಲದೆ ಅಲಗುಗಳು ಚುಚ್ಚಿಕೊಂಡು ನೋಯುತ್ತ ಮೈಯೆಲ್ಲವೂ ಜಜ್ಜಿಹೋಗಿವೆ. ಇಂತಹವನನ್ನು ನೋಡಿ ಉಪಚರಿಸು.

ಮಣಿಭದ್ರೋ ವೀರಭದ್ರಃ ಪುಷ್ಪದಂತಶ್ಚ ವೀರ್ಯವಾನ್ ।
ಧಮನೋ ಧೂಮತಿಮಿರಃ ಕೂಷ್ಮಾಂಡಾದ್ಯಾ ರಣೇ ಹತಾಃ ॥ ೩೧ ॥

ಚಂಡೀ ಭೃಂಗೀ ಕಿರೀಟೀ ಚ ಮಹಾಕಾಳಶ್ಚ ಶೃಂಖಲೀ ।
ಚಂಡೀಶೋ ಗುಪ್ತನೇತ್ರಶ್ಚ ಕಾಲಾದ್ಯಾಶ್ಚ ಹತಾ ರಣೇ ॥ ೩೨ ॥

ವಿನಾಯಕಸ್ಯ ಸ್ಕಂದಸ್ಯ ಶಿರಸೀ ಭ್ರಮತಾ ಮಯಾ ।
ದೃಷ್ಟೇ ಮಹಾರಣೇ ದೇವಿ ಇತ್ಯುಕ್ತ್ವಾಥ ಪುರೋಕ್ಷಿಪತ್ ॥ ೩೩ ॥

ತಚ್ಛ್ರುತ್ವಾ ನಂದಿನೋ ವಾಕ್ಯಂ ಶಿರಸೀ ಗೃಹ್ಯ ಪುತ್ರಯೋಃ ।
ಪಾರ್ವತೀ ವಿಲಲಾಪೋಚ್ಚೈಃ ಪುತ್ರ ಪುತ್ರೇತಿ ಜಲ್ಪತೀ ॥ ೩೪ ॥

ತಾರಕಾರೇ ಕಥಂ ಯುದ್ಧೇ ಹತಸ್ತ್ವಂ ಸಿಂಧುಸೂನುನಾ ।
ತ್ವಂ ತು ತ್ರಿವಾಸರೋ ದೈವೈಃ ಸೇನಾಪತ್ಯೇಭಿಷೇಚಿತಃ ॥ ೩೫ ॥

---

೩೧–೩೨. ಮಣಿಭದ್ರ, ವೀರಭದ್ರ, ಪುಷ್ಪದಂತ, ಧಮನ, ಧೂಮಿತಿಮಿರ ಕೂಷ್ಮಾಂಡ, ಚಂಡಿ, ಭೃಂಗಿ, ಕಿರೀಟೀ, ಮಹಾಕಾಳ, ಶೃಂಖಿಲೀ, ಚಂಡೀಶ, ಗುಪ್ತನೇತ್ರ, ಕಾಲ ಇವರೇ ಮುಂತಾದವರು ಯುದ್ಧದಲ್ಲಿ ಸತ್ತರು.

೩೩. ನಾನು ಯುದ್ಧಭೂಮಿಯಲ್ಲಿ ಸಂಚರಿಸುತ್ತಿರುವಾಗ ವಿನಾಯಕ ಕುಮಾರಸ್ವಾಮಿಯರ ತಲೆಗಳು ಕತ್ತರಿಸಿ ಬಿದ್ದಿರುವುದನ್ನು ಕಂಡೆನು. ಆಗ ಅವನ್ನು ತೆಗೆದುಕೊಂಡೆನು. ಎಂದು ಆಕೆಯ ಮುಂದೆ ಅವನ್ನು ಎಸೆದನು.

೩೪–೩೫. ಕಪಟ ನಂದಿಯ ಮಾತನ್ನು ಕೇಳಿ ಪಾರ್ವತಿಯು ಆ ಮಕ್ಕಳ ತಲೆಯನ್ನು ತೆಗೆದುಕೊಂಡು ಮಗನೇ ! ಮಗನೇ ! ಎಂಬುದಾಗಿ ಗಟ್ಟಿಯಾಗಿ ಅತ್ತಳು. ಎಲೈ ತಾರಕಾಸುರನನ್ನು ಕೊಂದವನೇ ! ನಿನ್ನನ್ನು ಜಲಂಧರನು ಯುದ್ಧದಲ್ಲಿ ಹೇಗೆ ಕೊಂದನು ? ಇನ್ನೂ ಮೂರು ದಿವಸದ ಮಗುವಾಗಿರು ವಾಗಲೇ ದೇವತೆಗಳು ನಿನ್ನನ್ನು ಸೇನಾಧಿಪತಿಯನ್ನಾಗಿ ಅಭಿಷೇಕ ಮಾಡಿದರು.

ತದಾ ತ್ವಯಾ ಕಥಂ ವೀರ ತಾರಕಾಖ್ಯೋ ನಿಪಾತಿತಃ ।
ನೀಲಕಂಠೇನ ಕಿಂ ತ್ಯಕ್ತೋ ಯತಸ್ತ್ವಂ ಪತಿತೋ ಭುವಿ ॥ ೩೬ ॥

ಸ್ನುಷಾಮುಖಂ ನ ದೃಷ್ಟಂ ಚ ಮಯಾ ಪುತ್ರಾಸ್ತಭಾಗ್ಯಯಾ ।
ನ ಭೋಗಾ ವತ್ಸ ತೇ ಭುಕ್ತಾಃ ಸಂಸಾರಸ್ಯಾಪಿ ಯೋ ಭವಾನ್ ॥ ೩೭ ॥

ತಾತ ಹೇರಂಬ ವಿಘ್ನೇಶ ಲಂಬೋದರ ಗಜಾನನ ।
ರಣಾಂಗಣೇ ಕೇನ ಪುತ್ರ ಸಿದ್ಧೈಃ ಪೂಜ್ಯೋ ನಿಪಾತಿತಃ ॥
ವಾಹನೋಸೌ ಕುತೋ ವತ್ಸ ಮೂಷಕಃ ಕೇನ ಹಿಂಸಿತಃ ॥ ೩೮ ॥

॥ ನಾರದ ಉವಾಚ ॥
ಏವಂ ವಿಲಪತೀಂ ಗೌರೀಂ ಶಿವಃ ಪ್ರಾಹ ಸುದುಃಖಿತಃ ॥ ೩೯ ॥

---

೩೬. ನೀನು ಬಹು ಶೂರನಲ್ಲವೇ ? ಹಿಂದೆ ನೀನು ಚಿಕ್ಕವನಾಗಿದ್ದರೂ ಶೌರ್ಯದಿಂದ ತಾರಕಾಸುರನನ್ನು ಕೊಲ್ಲಲಿಲ್ಲವೇ ? ನೀಲಕಂಠನು (ನವಿಲು) ನಿನ್ನನ್ನು ಬಿಟ್ಟುಬಿಟ್ಟನೇನು ? ಆದ್ದರಿಂದಲೇ ನಿನ್ನನ್ನು ಅವರು ಕೊಂದರೇ ?

೩೭. ಎಲೈ ಮಗನೇ ! ಭಾಗ್ಯಹೀನಳಾದ ನಾನು ಸೊಸೆಯ ಮುಖವನ್ನು ನೋಡಲಿಲ್ಲವಲ್ಲ ! ಸಂಸಾರದಲ್ಲಿ ಯಾವ ಉತ್ತಮವಾದ ಭೋಗಗಳೋ ಅವೊಂದನ್ನೂ ನೀನು ಅನುಭವಿಸಲೇ ಇಲ್ಲವಲ್ಲ !

೩೮. ಅಪ್ಪ ಹೇರಂಬನೇ! ವಿಘ್ನೇಶನೇ! ಲಂಬೋಧರನೇ! ಗಜಾನನನೇ! ಸಿದ್ಧರೂ ಕೂಡಾ ನಿನ್ನನ್ನು ಪೂಜೆಮಾಡುತ್ತಿದ್ದರಲ್ಲ ! ಅಂತಹ ನೀನು ರಣರಂಗಣದಲ್ಲಿ ಹೇಗೆ ಕೊಲ್ಲಲ್ಪಟ್ಟೆ ? ಅಪ್ಪ ನಿನ್ನವಾಹನವಾದ ಇಲಿಯೆಲ್ಲಿ ? ಆ ಇಲಿಯನ್ನು ಯಾರು ಕೊಂದರು ?

೩೯. ನಾರದನು ಹೇಳಿದನು– ಈ ರೀತಿ ಅಳುತ್ತಿರುವ ಗೌರಿಯನ್ನು ನೋಡಿ ಮಾಯಾಶಿವನು ದುಃಖಿಸುತ್ತಾ ಇಂತೆಂದನು.

|| ಮಾಯಾ ಶಿವ ಉವಾಚ ||

ಸಾಕ್ಷಾದ್ರುದ್ರೋಽಸ್ಮಿ ದೇವೇಶಿ ಹರಸ್ತ್ವಂ ಮಾ ಭಯಂ ಕುರು || ೪೦ ||

|| ಪಾರ್ವತ್ಯುವಾಚ ||

ವೃಷಭಃ ಕ್ವ ಗತೋ ದೇವ ಹತೋ ಜಾಲಂಧರೇಣ ವೈ ।
ಶರಜರ್ಜರದೇಹಸ್ಯ ಕಿಂ ಕರೋಮಿ ಪ್ರಿಯಂ ತವ || ೪೧ ||

|| ನಾರದ ಉವಾಚ ||

ತತಶ್ಶ್ರುತ್ವಾ ವಚೋ ದೇವ್ಯಾ ನಿಶ್ಶ್ವಸ್ಯೋವಾಚ ಶಂಕರಃ ।
ದೀರ್ಘಂ ವಿನಿಹತೌ ಪುತ್ರೌ ವೃಥಾ ಶೋಚಸಿ ಕಿಂ ಪ್ರಿಯೇ || ೪೨ ||

ಅಧುನಾ ತೇಂಗಸಂಗೇನ ದೇವಿ ಮಾಂ ತ್ರಾತುಮರ್ಹಸಿ ।
ಶಂಕರಸ್ಯ ವಚಶ್ಶ್ರುತ್ವಾ ಸಮಯೋಽಚಿತಮಾತುರಂ || ೪೩ ||

ಪ್ರತ್ಯುವಾಚಾಂಬಿಕಾ ದೇವಂ ಬಭಾಷೇ ನೋಚಿತಂ ವಚಃ || ೪೪ ||

---

೪೦. ಮಾಯಾ ಶಿವನು ಹೇಳಿದನು- ಎಲೈ ದೇವೇಶಿಯೆ ! ನಾನು ಆ ರುದ್ರನೇ ಆಗಿರುನೆನು. ಈ ರಕ್ತವನ್ನು ಹೊಂದಿರುವ ದೇಹವನ್ನು ನೋಡಿ ಭಯ ಪಡಬೇಡ.

೪೧. ಪಾರ್ವತಿಯು ಹೇಳಿದಳು– ಎಲೈ ದೇವನೇ ! ವೃಷಭವು ಎಲ್ಲಿ ಹೋಯಿತು ? ಜಲಂಧರನು ಅದನ್ನು ಕೊಂದನೇನು ? ಬಾಣದೇಟಿನಿಂದ ನಿನ್ನ ದೇಹವು ಜಜ್ಜಿಹೋಗಿದೆ. ನಿನಗೇನು ಉಪಚಾರವನ್ನು ಮಾಡಲಿ ? ಹೇಳು.

೪೨. ನಾರದನು ಹೇಳಿದನು– ಆಗ ಆ ಪಾರ್ವತಿಯ ಮಾತನ್ನು ಕೇಳಿ ಕಪಟಿಯಾದ ಶಿವನು ನಿಟ್ಟುಸಿರುಬಿಟ್ಟು ಇಂತೆಂದನು. ಎಲೈ ಪ್ರಿಯಳೇ ! ಮಕ್ಕಳೇನೋ ಯುದ್ಧದಲ್ಲಿ ಸತ್ತರು. ಅವರಿಗೋಸ್ಕರ ಏಕೆ ವ್ಯರ್ಥವಾಗಿ ದುಃಖಿಸುತ್ತೀಯೆ ?

೪೩–೪೪. ಈಗ ನಿನ್ನ ಅಂಗಸಂಗವನ್ನು ಕೊಟ್ಟು ಕಾಪಾಡು, ಎಂದನು. ಮಾಯಾ ಶಂಕರನ ಈ ಮಾತನ್ನು ಕೇಳಿ ಆ ದೇವಿಯು ನೋವನ್ನು ಹೊಂದಿದ ಈತನ ಸಮಯಕ್ಕೆ ತಕ್ಕುದಲ್ಲದ ಈ ಸುರತಪ ಮಾತನ್ನು ಕೇಳಿ ಆತನಿಗೆ ತಕ್ಕಂತೆ ಉತ್ತರವನ್ನು ಕೊಡಲಿಲ್ಲ.

|| ಪಾರ್ವತ್ಯುವಾಚ ||

ಮಹಾವಿಷಾದೇ ಪತಿತೇ ಭಯೇ ಚ
ಕೃತೇ ಸಮಾಧೌ ವಮನೇ ಮಹಾಜ್ವರೇ |
ಶ್ರಾದ್ಧೇ ಪ್ರಯಾಣೇ ಗುರುವೃದ್ಧಸನ್ನಿಧೌ
ರತಿಂ ಬುಧಾಃ ಶಂಕರ ವರ್ಜಯಂತಿ || ೪೫ ||

ಶ್ರಾಂತಾಮಧ್ವರತಾಂ ವಿದೇಶವಿರಹಕ್ರಾಂತಾಂ ವಿವಾಹೋತ್ಸವೇ
ಯಾತ್ರಾಯಾಂ ಪರಿತೋಷಿತಾಂ ಚ ಸಲಲಕ್ರೀಡಾಗತಾಂ ರೋಗಿಣೀಂ |
ಮುಗ್ಧಾಂ ಚ ಪ್ರಸವಾಮಥೋ ಋತುಮತೀಂ ಮತ್ವಾ ರಮಂತೇ ನ ವೈ
ಮೋನೇ ಭೋಗ್ಯತಯಾ ಸ ಗೌತಮಋಷಿಸ್ತ್ವನ್ಯಾಂ ನ ಗಚ್ಛೇತ್ಸ್ವಧೀಃ||೪೬

ಕಥಂ ಮಾಂ ದುಃಖದುಃಖಾರ್ತಾಂ ಪುತ್ರಶೋಕೇನ ಪೀಡಿತಾಂ |
ಗ್ಲಾನಾಂ ಬಾಷ್ಪಪರಿಮ್ಲಾನಾಂ ಸಂಪ್ರಾರ್ಥಯಸಿ ಚಾತುರಾಂ || ೪೭ ||

---

೪೫. ಪಾರ್ವತಿಯು ಹೇಳಿದಳು- ಎಲೈ ಶಂಕರನೇ ! ಅತ್ಯಂತ ದುಃಖ ಕಾಲದಲ್ಲಿಯೂ ಭಯಕಾಲದಲ್ಲಿಯೂ, ಮಹಾಜ್ವರದಲ್ಲಿಯೂ ಶ್ರಾದ್ಧಮಾಡಿದಾಗಲೂ ಪ್ರಯಾಣದಲ್ಲಿಯೂ ಗುರುಗಳ ವೃದ್ಧರ ಜೊತೆಯಲ್ಲಿರುವಾಗಲೂ ರತಿಸುಖವನ್ನು ಬಿಡಬೇಕೆಂದು ದೊಡ್ಡವರು ಹೇಳಿರುವರು.

೪೬. ಬಳಲಿರುವ ದಾರಿಯನ್ನು ನಡೆದಿರುವ, ಬೇರೆಯ ಸ್ಥಳಕ್ಕೆ ಹೋಗಿರುವ, ವಿರಹದಿಂದ ಬಳಲಿರುವ, ವಿವಾಹದ ಸಂಭ್ರಮದಲ್ಲಿರುವ, ಯಾತ್ರೆಯನ್ನು ಮಾಡುತ್ತಿರುವ, ಬಹುಸಂತೋಷಪಟ್ಟಿರುವ, ಜಲಕ್ರೀಡೆಯಾಡುತ್ತ ಇರುವ, ರೋಗವುಳ್ಳ ಬುದ್ಧಿಸ್ವಾಧೀನವಿಲ್ಲದಿರುವ, ಹೆತ್ತಿರುವ, (ಬಾಣಂತಿಯ) ಮುಟ್ಟಾಗಿರುವ ಹೆಂಗಸರನ್ನು ಯಾವಾಗಲೂ ರಮಿಸಬಾರದು. ಗೌತಮ ಋಷಿಯು ಇವರನ್ನು ಬಿಟ್ಟು ಮಿಕ್ಕವರು ಭೋಗಿಸುವುದಕ್ಕೆ ಅರ್ಹರೆಂದು ಹೇಳಿರುತ್ತಾನೆ.

೪೭. ನಾನು ಬಹು ದುಃಖಪೂರಿತಳಾಗಿ ಪುತ್ರಶೋಕದಿಂದ ಪೀಡಿತಳಾಗಿ ಇದ್ದೇನೆ. ಕಾಂತಿಹೀನಳಾಗಿ ಕಣ್ಣೀರಿನಿಂದ ಕೊಳೆಯಾಗಿದ್ದೇನೆ. ಮನೋರೋಗದಿಂದ ಕೂಡಿರುವ ನನ್ನನ್ನು ಹೇಗೆ ಭೋಗಕ್ಕೆ ಕರೆಯುತ್ತೀಯೆ ?

|| ನಾರದ ಉವಾಚ ||

ಭವಾನ್ಯಾ ಇತಿ ವಾಕ್ಯಾನಿ ಶ್ರುತ್ವಾಮಾಯಾಮಹೇಶ್ವರಃ ।
ಉವಾಚ ಸ್ವಾರ್ಥಮುದ್ದಿಶ್ಯ ಗೌರ್ಯಾ ರೂಪೇಣ ಮೋಹಿತಃ || ೪೮ ||

|| ಮಾಯಾಶಿವ ಉವಾಚ ||

ಪುರುಷಸ್ಯಾರ್ತಿಯುಕ್ತಸ್ಯ ನ ಯಚ್ಛಂತಿ ರತಿಂ ಸ್ತ್ರಿಯಃ ।
ತಥೈವ ರೌರವೇ ಘೋರೇ ಪತಿಷ್ಯಂತಿ ನ ಸಂಶಯಃ || ೪೯ ||

ಗಣಶೂನ್ಯಃ ಪುತ್ರಶೂನ್ಯೋಽಥಶೂನ್ಯೋಽಹಂ ವರಾನನೇ ।
ಸಾಂಪ್ರತಂ ಗೃಹಶೂನ್ಯೋಽಹಂ ಸರ್ವಶೂನ್ಯೋಽಸ್ಮಿ ಭಾಮಿನಿ || ೫೦ ||

ಸ ಜೀವಿತವಿಹೀನೋಽಹಂ ತ್ವಾಂ ದೃಷ್ಟುಮಿಹ ಚಾಗತಃ ।
ಸ್ವಾಂ ಗುಹಾಂ ತು ಪ್ರವಿಶ್ಯಾಶು ತ್ಯಜಾಮಿ ಪ್ರಕೃತಿಂ ಸ್ವಕಾಂ || ೫೦ ||

ಉತ್ತಿಷ್ಠ ನಂದಿನ್ಸಂಯಾಮಸ್ತೀರ್ಥೇ ಭವ ಪುರಸ್ಸರಃ ।
ತ್ವಂ ಯಾಹಿ ಸ್ವೇಚ್ಛಯಾ ಕಾಂತೇ ಪ್ರಕೃತಿಂ ಸ್ವಾಂ ಪರಿತ್ಯಜ || ೫೨ ||

---

೪೮. ನಾರದನು ಹೇಳಿದನು– ಭವಾನಿಯ ಈ ರೀತಿಯಾದ ಮಾತನ್ನು ಕೇಳಿ ಆ ಕಪಟಿಯಾದ ಶಿವನು ಗೌರಿಯ ರೂಪಕ್ಕೆ ಮನಸೋತು ತನ್ನ ಪ್ರಯೋಜನವನ್ನು ಸಾಧಿಸಿಕೊಳ್ಳಲು ಇಂತೆಂದನು.

೪೯. ಮಾಯಾ ಶಿವನು ಹೇಳಿದನು- ಮದನ ಭಾಧಯಿಂದ ತೊಂದರೆ ಪಡುತ್ತಿರುವ ಪುರುಷನಿಗೆ (ಹೆಂಡತಿಯು) ಸ್ತ್ರೀಯು ಸಂಭೋಗಸುಖವನ್ನು ಕೊಡದೆ ಇದ್ದರೆ ಘೋರವಾದ ರೌರವನರಕದಲ್ಲಿ ಬೀಳುತ್ತಾಳೆ. ಸಂಶಯವಿಲ್ಲ.

೫೦. ಎಲೈ ಭಾಮಿನಿಯೇ! ಈಗ ನನಗೆ ಗಣಗಳಿಲ್ಲ. ಮಕ್ಕಳಿಲ್ಲ. ಮನೆಯು ಕೂಡಾ ಇಲ್ಲ. ಈಗಂತೂ ಒಂದೂ ಇಲ್ಲದವನಾಗಿದ್ದೇನೆ.

೫೧-೫೨. ಅಂತಹ ನನಗೆ ಈ ಜೀವಿತವು ಬೇಕಿಲ್ಲ. ಆದರೆ ನಿನ್ನನ್ನು ನೋಡಲು ಇಲ್ಲಿಗೆ ಬಂದೆನು. ಈಗ ನಾನು ನನ್ನ ಗುಹೆಗೆ ಹೋಗಿ ಈ ದೇಹವನ್ನು ಬಿಟ್ಟುಬಿಡುವೆನು. ಎಲೈ ನಂದಿಯೇ! ಏಳು ಹೋಗೋಣ. ಯೋಗ್ಯಕಾಲ ಸಿಕ್ಕಿರುವಾಗ ನೀನು ಮುಂದಾಳಾಗಿ ಕೆಲಸಮಾಡು. ಎಲೈ ಕಾಂತೆಯೇ! ನೀನು ನಿನ್ನ ಇಷ್ಟಬಂದಂತೆ ಹೋಗಬಹುದು. ಈ ನಿನ್ನ ದುಃಸ್ವಭಾವವನ್ನು ಬಿಟ್ಟುಬಿಡು.

|| ನಾರದ ಉವಾಚ ||

ಇತಿ ಮಾಯಾಮಹೇಶಸ್ಯ ವಚಃ ಶ್ರುತ್ವಾಂಬಿಕಾ ತತಃ |
ದೀರ್ಘಂ ದಧೌ ಮಹಾಶ್ವಾಸಂ ಶೋಕೇನ ಚ ಜಡೀಕೃತಾ || ೫೩ ||

ತಸ್ಯಾ ವೈ ಪರಮಃ ಕ್ಷೋಭಃ ಕಿಂಚಿನ್ನೋವಾಚ ಸಾ ಕ್ಷಣಂ |
ಯಯಾ ಸಮ್ಮೋಹಿತಂ ಸರ್ವಂ ಜಗತ್ ಸ್ಥಾವರ ಜಂಗಮಂ || ೫೪ ||

ಸೈವ ಸಂಮೋಹಿತಾ ತೇನ ನ ಜಾನೇ ದುಃಖಮಾತ್ಮನಃ || ೫೫ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಮಾಯಾಮಹೇಶಾಗಮನಂ ನಾಮ ಚತುರ್ದಶೋಽಧ್ಯಾಯಃ

---

೫೩. ನಾರದನು ಹೇಳಿದನು– ಅಂಬಿಕೆಯು ಮಾಯಾ ಶಿವನ ಈ ರೀತಿಯಾದ ಮಾತನ್ನು ಕೇಳಿ ದುಃಖದಿಂದ ಏನನ್ನೂ ಹೇಳದೆ ಉಸಿರುಕಟ್ಟಿ ಕೊಂಡು ಸುಮ್ಮನಿದ್ದಳು.

೫೪–೫೫. ಆಗ ಪಾರ್ವತಿಗೆ ಮನಸ್ಸು ಕಲಕಿಹೋಯಿತು. ಕ್ಷಣಕಾಲ ಏನನ್ನೂ ಹೇಳಲೇ ಇಲ್ಲ. ಚರಾಚರಾತ್ಮಕವಾದ ಈ ಜಗತ್ತನ್ನು ಯಾವಳು ಮಾಯೆಗೆ ಸಿಲುಕಿಸಿ ತೊಂದರೆ ಕೊಡುವಳೋ ಅಂತಹವಳೂ ಕೂಡಾ ಜಲಂಧರನಿಂದ ಅಜ್ಞಾನಾಂಧಕಾರದಲ್ಲಿ ಬೀಳಿಸಲ್ಪಟ್ಟಳೆಂದ ಮೇಲೆ ನಮ್ಮ ದುಃಖದ ಸ್ಥಿತಿಗಳನ್ನು ನಾನು ಹೇಳಲಾರೆನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ಮಾಯಾಮಹೇಶನ ಆಗಮನ ಎಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚದಶೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಇತಿ ಮಾಯಾಮಹೇಶೇನ ಮೋಹಿತಾ ಗಿರಿಜಾ ಯದಾ ।
ಅತಃ ಕಿಂ ಸಮಭೂದ್ಬ್ರಹ್ಮನ್ ತನ್ಮಮಾಖ್ಯಾತುಮರ್ಹಸಿ ॥ ೧ ॥

॥ ನಾರದ ಉವಾಚ ॥

ಕ್ಷೀರಾಬ್ಧೌ ತು ಶಯಾನಸ್ಯ ಚುಕ್ಷೋಭ ಹೃದಯಂ ಹರೇಃ ।
ಅಕಸ್ಮಾದೇವ ರಾಜೇಂದ್ರ ನಯನೇಽಶ್ರು ಪರಿಪ್ಲುತೇ ॥ ೨ ॥

ದೃಷ್ಟ್ವಾ ತನ್ಮಹದುತ್ಪಾತಲಕ್ಷಣಂ ಭಗವಾಂಸ್ತತಃ ।
ಉತ್ಥಾಯ ಶೇಷಪರ್ಯಂಕಾನ್ಮಾಂ ಚ ಶೇಷಂ ವಿಲೋಕ್ಯ ಚ ॥ ೩ ॥

---

## ಹದಿನೈದನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು– ಎಲೈ ನಾರದನೇ! ಭವಾನಿಯು ಈ ರೀತಿಯಾಗಿ ಕಪಟ ಶಿವನಿಂದ ಮೋಹಿತಳಾದ ಮೇಲೆ ಮುಂದೇನಾಯಿತು? ಎಂಬುದನ್ನು ನನಗೆ ಹೇಳು.

೨. ನಾರದನು ಹೇಳಿದನು– ಇತ್ತ ಕ್ಷೀರಸಮುದ್ರದಲ್ಲಿ ಮಲಗಿದ್ದ ಹರಿಗೆ ಮನಸ್ಸು ಇದ್ದಕ್ಕಿದ್ದಂತೆಯೇ ಕಳವಳಗೊಂಡಿತು. ಕಾರಣವಿಲ್ಲದೇನೇ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು.

೩–೪. ಆಗ ಆ ಭಗವಂತನಾದ ವಿಷ್ಣುವು ಆ ಮಹತ್ತಾದ ಉತ್ಪಾತದ ಗುರುತುಗಳನ್ನು ನೋಡಿ ಶೇಷನ ಹಾಸಿಗೆಯಿಂದ ಮೇಲಕ್ಕೆದ್ದು ಲಕ್ಷ್ಮಿಯನ್ನೂ

ಕಿಂ ಕಾರ್ಯಮಿತಿ ಗೋವಿಂದಃ ಸನ್ನಗಾರಿಮಥಾಸ್ಮರತ್ ।
ಸಚಾಗ್ರೇ ಸ್ಮೃತಿಮಾತ್ರೇಣ ತಸ್ಥೌ ಬದ್ಧಾಂಜಲಿಃ ಪ್ರಭೋಃ ॥
ವಿನತಾಸಂದನಂ ದೃಷ್ಟ್ವಾ ಪುರತಃ ಪ್ರಾಹ ಕೇಶವಃ ॥ ೪ ॥

॥ ವಿಷ್ಣುರುವಾಚ ॥

ಸುಪರ್ಣ ತತ್ರ ಗಚ್ಛ ತ್ವಂ ಯತ್ರ ಯುದ್ಧಃ ಪ್ರವರ್ತತೇ ।
ಹತೋ ಜಾಲಂಧರೋ ವೀರೋ ಹರೋ ವಾ ತೇನ ಮೋಹಿತಃ ॥ ೫ ॥

ದೃಷ್ಟ್ವಾ ತಂ ಶೀಘ್ರಮಾಗತ್ಯ ಕಥಯಸ್ವ ಮಮಾಖಿಲಂ ।
ಜಾಲಂಧರೇಶಯೋರ್ಯುದ್ಧಂ ದ್ರಷ್ಟುಂ ಶಕ್ತಸ್ತ್ವಮೇವ ಹಿ ॥ ೬ ॥

ಕೋನ್ಯೋ ಮಹಾಹವೇ ತಸ್ಮಿನ್ ಜ್ಞಾತ್ವಾಯಾತಿ ಶರೀರವಾನ್ ।
ಕದಾಚಿದ್ದುರ್ಗಮಂ ತಚ್ಚ ಯುದ್ಧಂ ಶಸ್ತ್ರಾಸ್ತ್ರವೃಷ್ಟಿಭಿಃ ॥ ೭ ॥

---

ಶೇಷನನ್ನೂ ನೋಡಿ ಏನುಮಾಡಲಿ ? ಎಂದು ಯೋಚಿಸಿ ಗರುಡನನ್ನು ಸ್ಮರಿಸಿದನು. ಆ ಗರುಡನು ಅಚ್ಯುತನು ಸ್ಮರಿಸಿದೊಡನೆಯೇ ಎದುರಿಗೆ ಕೈ ಕಟ್ಟಿಕೊಂಡು ಪ್ರಭುವೇ ! ಏನಪ್ಪಣೆ ? ಎಂದನು. ಎದುರಿಗೆ ನಿಂತಿರುವ ಗರುಡನನ್ನು ನೋಡಿ ಹರಿಯು ಇಂತೆಂದನು.

೫. ವಿಷ್ಣುವು ಹೇಳಿದನು– ಎಲೈ ಗರುಡನೇ ! ಯುದ್ಧವು ನಡೆಯುವಲ್ಲಿಗೆ ಹೊರಡು. ವೀರನಾದ ಜಲಂಧರನು ಯುದ್ಧದಲ್ಲಿ ಸತ್ತಿರಬೇಕು. ಇಲ್ಲವೇ ಹರನು ಆ ಜಲಂಧರನಿಂದ ಮೂರ್ಛೆಹೊಂದಿರಬೇಕು.

೬. ಅಲ್ಲಿ ನಡೆಯುವ ಯುದ್ಧವನ್ನು ನೋಡಿ ತಿಳಿದುಕೊಂಡು ಬಾ. ಜಲಂಧರ ಶಿವರಿಗೆ ನಡೆಯುವ ಯುದ್ಧವನ್ನು ನೋಡಲು ನೀನೇ ಶಕ್ತನು.

೭. ಆ ಮಹಾರಣರಂಗದಿಂದ ವಿಷಯವನ್ನು ತಿಳಿದು ಬದುಕಿಬರತಕ್ಕವನು ಯಾವನಿರುವನು ? ಆ ಯುದ್ಧವು ಶಸ್ತ್ರ, ಅಸ್ತ್ರಗಳ ಹೊಡೆತದಿಂದ ಹೊಂದಲು ಅಸಾಧ್ಯವು. ಹೊಂದಿದ ಮೇಲೆ ಉಳಿಯುವುದು ಮಹಾಕಷ್ಟವು.

ಅಥ ತ್ವಂ ಬಾಣಸಂಚಾರೋ ಗತ್ವಾ ಪಿಹಿತವಿಗ್ರಹಃ ।
ಸಂದೃಷ್ಟ್ವಾ ಪಾರ್ವತೀ ವೃತ್ತಂ ಶೀಘ್ರಮಾಯಾತು ಮರ್ಹಸಿ ॥ ೮ ॥

ದೈತ್ಯಮಾಯಾ ನಿರಾಸಾರ್ಥಂ ವಿಚಿಂತ್ಯ ಭಗವಾಂಸ್ತ್ವರನ್ ।
ಗುಟಿಕಾಂ ಸರ್ವಸಿದ್ಧಾಂ ಚ ಗರುಡಾಯ ದದೌ ಹರಿಃ ॥ ೯ ॥

ಅನಯಾ ನ ಭ್ರಮೋ ವೀರ ತಥೇತ್ಯುಕ್ತ್ವಾ ಮುಖೇ ಽಕ್ಷಿಪತ್ ॥ ೧೦ ॥

ಏವಂ ಸಂಪ್ರೇರಿತಃ ಪಕ್ಷೀ ಹರಿಂ ಕೃತ್ವಾ ಪ್ರದಕ್ಷಿಣಂ ।
ನಿಶ್ಚಕ್ರಾಮ ಖಮಾವಿಶ್ಯ ಜಗಾಮಾದ್ಭುತವೇಗವಾನ್ ॥ ೧೧ ॥

ತತ್ರ ಗತ್ವಾ ರಣಂ ಘೋರಂ ದೈತ್ಯಸಂಘೈಃ ಸುದುಸ್ಸಹಂ ।
ದೃಷ್ಟವಾನಖಿಲೇನಾಸೌ ನ ಕಿಂಚಿತ್ ಜ್ಞಾತವಾನ್ ಕಿಲ ॥ ೧೨ ॥

---

೮. ಮತ್ತು ನೀನು ಬಾಣದಂತೆ ವೇಗವಾಗಿ ಸಂಚರಿಸುತ್ತಾ ದೇಹವನ್ನು ಮರೆಸಿಕೊಂಡು ಪಾರ್ವತಿಯನ್ನು ನೋಡಿ ಆಕೆಯ ವಿಷಯವನ್ನೂ ತಿಳಿದು ಕೊಂಡು ಬೇಗನೆ ಬಾ.

೯–೧೦. ಆಗ ಹರಿಯು ಯೋಚಿಸಿ ದೈತ್ಯರ ಮಾಯೆಗೆ ಸಿಕ್ಕದಂತೆ ಇರುವುದಕ್ಕೂ, ಅವರ ಮಾಯೆ ತಿಳಿಯುವುದಕ್ಕೂ 'ಸರ್ವಸಿದ್ಧಿ' ಎಂಬ ಗುಳಿಗೆಯನ್ನು ಆ ಗರುಡನಿಗೆ ಕೊಟ್ಟನು. ಮತ್ತು ಎಲೈ ಗರುಡನೇ! ನಿನಗೆ ಯಾವ ವಿಧವಾದ ಸಂದೇಹವೂ ಬರದಂತೆ ವಶವಾಗುತ್ತದೆ, ಎಂದನು. ಆ ಗರುಡನು ಹಾಗೇ ಆಗಲೆಂದು ಹೇಳಿ ಆ ಗುಳಿಗೆಯನ್ನು ಬಾಯಿಯಲ್ಲಿ ಹಾಕಿ ಕೊಂಡನು.

೧೧. ಹರಿಯು ಹೀಗೆ ಹೇಳಿ ಕಳುಹಿಸಲು ಆ ಗರುಡನು ಹರಿಯನ್ನು ಪ್ರದಕ್ಷಿಣೆಮಾಡಿಕೊಂಡು ಆಕಾಶಕ್ಕೆ ನೆಗೆದು ಅಲ್ಲಿಂದ ವೇಗವಾಗಿ ಹೋದನು.

೧೨. ದೈತ್ಯರು ಮಾಡುತ್ತಿದ್ದ ಮಹಾಯುದ್ಧಕ್ಕೆ ಹೋಗಿ ಅಲ್ಲಿ ಎಲ್ಲವನ್ನೂ ನೋಡಿದನು. ಎಲ್ಲೆಲ್ಲಿ ಪೂರ್ತಿಯಾಗಿ ನೋಡಿದರೂ ವಿಶೇಷವೇನೂ ತಿಳಿಯಲಿಲ್ಲ.

ತಸ್ಮಾದುತ್ಪ್ಲುತ್ಯ ವೇಗೇನ ಗತೋಽಸೌ ಮಾನಸೋತ್ತರಂ ।
ಶೈಲಂ ತುಂಗತರಂ ದುರ್ಗಮಗಮ್ಯಂ ಮರುತಾಮಪಿ ॥ ೧೩ ॥

ವಿಲೋಕ್ಯ ಯನ್ನ ದದೃಶೇ ಗೌರೀಂ ಸ್ಥಾನೇ ಪತಂಗರಾಟ್ ।
ತತ್ರಾಗತ್ಯ ಭುಜಂಗಾರಿರ್ಧ್ವನಿಂ ಸ ಶ್ರುತವಾನ್ಕಿಲ ॥ ೧೪ ॥

ಗತ್ವಾ ಸಮೀಪೇ ದದೃಶೇ ಮಾಯಾಪಶುಪತಿಂ ತತಃ ।
ಗರುಡೋ ಗುಟಿಕಾಂ ಕ್ಷಿಪ್ಯ ಮುಖೇ ನ ಭ್ರಮಮಾಪ ಸಃ ॥ ೧೫ ॥

ಜ್ಞಾತ್ವಾ ಬುದ್ಧ್ಯಾಥ ದೈತ್ಯೋಽಯಮಿತಿ ನಾಯಂ ವೃಷಧ್ವಜಃ ।
ಹಾ ಕಷ್ಟಮಿತಿ ಚೋಕ್ತ್ವಾಥ ರುದನ್ನಾಗತ್ಯ ಚಾರ್ಣವಂ ॥
ಕಥಯಾಮಾಸ ವೃತ್ತಾಂತಂ ಪುತತಃ ಕೈಟಭದ್ವಿಷಃ ॥ ೧೬ ॥

---

೧೩. ಆ ರಣರಂಗದಿಂದ ಹಾರಿ ವೇಗದಿಂದ ದೇವತೆಗಳಿಗೂ ಹೋಗಲು ಆಗದ ಮಾನಸೋತ್ತರವೆಂಬ ದೊಡ್ಡ ಪರ್ವತಕ್ಕೆ ಹೋದನು.

೧೪. ಅಲ್ಲೆಲ್ಲಾ ಹುಡುಕಿದರೂ ಗೌರಿಯನ್ನು ಅವಳ ಜಾಗದಲ್ಲಿ ಕಾಣಲಿಲ್ಲ. ಆಗ ಆ ಗರುಡನು ಇನ್ನೂ ಸ್ವಲ್ಪ ಮುಂದೆ ಹೋಗಲು ಮಾತನಾಡುವ ಶಬ್ದವು ಕೇಳಿತು.

೧೫. ಮುಂದೆ ಹೋಗಿ ಹತ್ತಿರದಲ್ಲಿಯೇ ಇದ್ದ ಮಾಯಾ ಮಹೇಶನನ್ನು ನೋಡಿದನು. ಗರುಡನು ಬಾಯಿಯಲ್ಲಿ ಗುಳಿಗೆಯನ್ನು ಹಾಕಿಕೊಂಡಿದ್ದುದರಿಂದ ಭ್ರಮೆಯು ಅವನಿಗುಂಟಾಗಲಿಲ್ಲ.

೧೬. ಆಗ ಬುದ್ಧಿಯಿಂದ ಯೋಚಿಸಿ ಇವನು ದೈತ್ಯನೇ ಹೊರತು ಶಿವನಲ್ಲ. ಅಯ್ಯೋ ಕಷ್ಟ ಒದಗಿದೆಯಲ್ಲಾ ! ಎಂದು ವ್ಯಸನಪಟ್ಟವನಾಗಿ ಕ್ಷೀರಸಮುದ್ರಕ್ಕೆ ಬಂದು ವಿಷ್ಣುವಿನೊಡನೆ ಅಲ್ಲಿನ ವಿಷಯಗಳೆಲ್ಲವನ್ನೂ ಹೇಳಿದನು.

|| ಗರುಡ ಉವಾಚ ||

ದೇವ ಜಾಲಂಧರೇಣಾಯಂ ಹರೋ ದೇವವಿಡಂಬಿತಃ |
ಉಮಾ ಪ್ರತಾರಿತಾ ತೇನ ಪಾಪೇನ ಛದ್ಮರೂಪಿಣಾ || ೧೭ ||

ಶೂರಸ್ತ್ವಂ ಯದಿ ಗೋವಿಂದ ಸಮರಂ ಪ್ರತಿ ಯಾಹ್ಯತಃ |
ಮಾಯಾ ಯುದ್ಧಂ ತು ದೇವೇಶ ಕುರು ಜಾಲಂಧರಂ ಪ್ರತಿ || ೧೮ ||

ತಸ್ಯ ರಾಜ್ಞೀ ಮಯಾ ದೃಷ್ಟಾ ಪೀಠೇ ಜಾಲಂಧರೇ ಶುಭೇ|
ಪ್ರಾಸಾದ ಭೂಮ್ಯಾಂ ಕ್ರೀಡಂತೀ ವಾದ್ಯಗೀತಾದಿನರ್ತನೇ || ೧೯ ||

ಸಾ ಸುಂದರತರಾ ಗೌರ್ಯಾ ರಂಭೋರ್ವಶ್ಯೋಃಶ್ಚತಾದಪಿ |
ನೇದೃಶೀ ಮಾನುಷೇ ಲೋಕೇ ನ ಪಾತಾಳೇಷು ತತ್ಸಮಾ || ೨೦ ||

---

೧೭. ಗರುಡನು ಹೇಳಿದನು– ಎಲೈ ದೇವನೇ ! ಜಲಂಧರನು ಶಿವನನ್ನು ಅನುಕರಿಸುತ್ತಾ ಅವನ ವೇಷವನ್ನು ಹೊಂದಿರುವನು. ಪಾರ್ವತಿಯನ್ನು ಪಾಪಿಯಾದ ಜಲಂಧರನು ಕಪಟಶಿವರೂಪದಿಂದ ಮೋಸಪಡಿಸಿರುವನು.

೧೮. ಎಲೈ ಗೋವಿಂದನೇ ! ನೀನು ಶೂರನಾಗಿದ್ದರೆ ಇಲ್ಲಿಂದ ಯುದ್ಧಕ್ಕೆ ಹೊರಡು. ಆ ಜಲಂಧರನೊಡನೆ ಮಾಯಾ ಯುದ್ಧವನ್ನು ಮಾಡು.

೧೯. ಆ ಜಲಂಧರನ ಹೆಂಡತಿಯನ್ನು ಜಲಂಧರ ಪೀಠದಲ್ಲಿ ನೋಡಿದೆನು. ಆಕೆಯು ಉಪ್ಪರಿಗೆಯ ಮೇಲೆ ವಾದ್ಯ ಹಾಡು ಮುಂತಾದುವುಗಳಲ್ಲಿ ಕ್ರೀಡಿಸುತ್ತಿದ್ದಳು.

೨೦. ಆಕೆಯು ಗೌರಿಗಿಂತಲೂ ಸುಂದರಿಯು. ನೂರು ಜನ ರಂಭೆಯರು ಊರ್ವಶಿಯರಿಗಿಂತಲೂ ಆಕೆಯು ಸುಂದರಿಯು. ಈ ರೀತಿಯಾದವಳು ಮನುಷ್ಯಲೋಕದಲ್ಲಿಯೂ ಇಲ್ಲ. ಪಾತಾಳದಲ್ಲಿಯೂ ಇಲ್ಲ.

ಭಾರ್ಯಾ ತೇ ನ ಸಮಾ ವೇಶ್ಯಾನಾರೀಣಾಂ ಕಾ ಕಥಾ ಹರೇಃ ।
ಯಸ್ತಾಂ ಸ್ಪೃಶತಿ ದೇಹೇನ ಸ ಕೃತಾರ್ಥಃ ಪುಮಾನ್ ಭವೇತ್ ॥ ೨೧ ॥

ತವ ಸ್ಯಾಲಕ ಪತ್ನೀಂ ಚ ಹರ ತ್ವಂ ತಾಂ ರಮಾಪ್ರಿಯ ।
ಶಂಕರಸ್ಯೋಪಕಾರಂ ಚ ಕುರು ಚೈವಾತ್ಮನಃ ಸುಖಂ ॥ ೨೨ ॥

॥ ನಾರದ ಉವಾಚ ॥

ಶ್ರುತ್ವಾ ತಾರ್ಕ್ಷ್ಯಸ್ಯ ವಚನಂ ತಂ ನಿರ್ಭರ್ತ್ಸ್ಯ ರಮಾಪ್ರಿಯಃ ।
ಸಮ್ಯಗ್ವ್ಯವಸ್ಯ ಚೋಪಾಯಂ ವಿಸಸರ್ಜ ದ್ರುತಂ ದ್ವಿಜಂ ॥ ೨೩ ॥

ಪ್ರಿಯಾಂ ಪ್ರತಾರ್ಯ ಸಂಛಾದ್ಯ ಮಂಚಕೇ ಪೀತವಾಸಸಾ ।
ನಿರ್ಗತೋನ್ಯೇನ ರೂಪೇಣ ಯೋಗಮಾಯಾಬಲೇನ ಚ ॥ ೨೪ ॥

---

೨೧. ನಿನ್ನ ಹೆಂಡತಿಯಾದ ಲಕ್ಷ್ಮಿಯೂ ಕೂಡಾ ಅವಳಂತಿಲ್ಲ. ವೇಶ್ಯಾ ಸ್ತ್ರೀಯರನ್ನು ಹೇಳತಕ್ಕದ್ದೇನು ? ಆದ್ದರಿಂದ ನೀನು ಅವಳನ್ನು ಕದಿಯಬೇಕು. ಯಾವನು ಅವಳನ್ನು ತನ್ನ ದೇಹದಿಂದ ಮುಟ್ಟುತ್ತಾನೆಯೋ ಆ ಮನುಷ್ಯನು ಲೋಕದಲ್ಲಿ ಕೃತಾರ್ಥನು.

೨೨. ಎಲೈ ರಮಾಪ್ರಿಯನೇ ! ನಿನ್ನ ಭಾವಮೈದುನನ ಹೆಂಡತಿಯಾದ ಆ ವೃಂದೆಯನ್ನು ಕದ್ದುಕೊಂಡು ಬಾ. ಹಾಗೆ ಮಾಡಿದರೆ ಶಂಕರನಿಗೆ ಉಪ ಕಾರವೂ ನಿನಗೆ ಸುಖವೂ ಆಗುತ್ತದೆ.

೨೩. ನಾರದನು ಹೇಳಿದನು– ರಮಾ ಪ್ರಿಯನಾದ ವಿಷ್ಣುವು ಗರುಡನ ಈ ಮಾತನ್ನು ಕೇಳಿ ಅವನನ್ನು ಗದರಿಸಿ ತಾನು ಮಾಡಬೇಕಾದ ಉಪಾಯವನ್ನು ಸರಿಯಾಗಿ ನಿಷ್ಕರ್ಷೆಮಾಡಿಕೊಂಡು ಅನಂತರ ಆ ಗರುಡನನ್ನು ಕಳುಹಿಸಿಬಿಟ್ಟನು.

೨೪. ಆಗ ವಿಷ್ಣುವು ತಾನು ಹೆಂಡತಿಯೊಡನೆ ಮಲಗಿದ್ದ ಮಂಚದ ಮೇಲೆ ಹೊಂಬಣ್ಣದ ಬಟ್ಟೆಯಿಂದ ತಾನು ಹೊದೆದುಕೊಂಡು ಮಲಗಿರುವಂತೆ ಮಾಡಿ, ಲಕ್ಷ್ಮಿಗೆ ತಾನು ಅಲ್ಲಿ ಮಲಗಿರುವನೆಂಬಂತೆ ತಿಳಿಯುವ ಹಾಗೆ ಮಾಡಿ ವಂಚಿಸಿ ಯೋಗಮಾಯಾ ಬಲದಿಂದ ಬೇರೆ ರೂಪವನ್ನು ಹೊಂದಿ ಅಲ್ಲಿಂದ ಹೊರಟನು.

ವೃಂದಾರಿಕಾನುರಾಗೇಣ ಮೋಹಿತೋ ಮಧುಸೂದನಃ ।
ದೃಷ್ಟ್ವಾ ಹರಿಂ ತು ಗಚ್ಛಂತಂ ಪ್ರತಿಚ್ಛನ್ನಂ ಯುಧಿಷ್ಠಿರ ॥ ೨೫ ॥

ಶೇಷೋಽಪ್ಯನ್ಯತಮೋನಾಸೌ ರೂಪೇಣಾಗತ್ಯ ಕೇಶವಂ ।
ಜಗಾದ ಭಕ್ತ್ಯಾ ತಂ ತಿಷ್ಠ ಮಮಾನು ಜ್ಞಾತುಮರ್ಹಸಿ ॥ ೨೬ ॥

ಕಿಂ ಕರೋಮಿ ಕ್ವ ಗಚ್ಛಾಮಿ ಬ್ರೂಹಿ ಕಾರ್ಯಂ ಜನಾರ್ದನ ।
ಸದಾ ತವ ಮುಖಂ ದೃಷ್ಟ್ವಾ ಭೋಕ್ಷ್ಯಾಮೀತಿ ಭವೇತ್ಸುಖಂ ॥ ೨೭ ॥

॥ ಶ್ರೀ ಭಗವಾನುವಾಚ ॥

ಜಾಲಂಧರಸ್ತ್ರಿಯಂ ರಮ್ಯಾಂ ಹರಿಷ್ಯೇ ಹರಕಾರಣಾತ್ ।
ಪಾರ್ವತ್ಯಾಶ್ಚೋಪಕಾರಾಯ ಸಂಭಾದ್ಯ ಸ್ವಾತ್ಮನಸ್ತನುಂ ॥ ೨೮ ॥

ಏಹಿ ಯಾವೋ ವಯಂ ಬಂಧೋ ಕಾಂತಾರಂ ದುರತಿಕ್ರಮಂ ।
ವೃಂದಾಕರ್ಷಣಸಿದ್ಧ್ಯರ್ಥ ಮಿತ್ಯುಕ್ತ್ವಾ ತೌ ವನಂ ಗತೌ ॥ ೨೯ ॥

---

೨೫-೨೬. ಈ ರೀತಿ ವೃಂದೆಯಲ್ಲಿರುವ ಅನುರಾಗದಿಂದ ವಿಷ್ಣುವು ಆಕೆಯಲ್ಲಿ ಮೋಹಗೊಂಡನು. ಎಲೈ ಯುಧಿಷ್ಠಿರನೇ ! ಹರಿಯು ಹೀಗೆ ವೇಷವನ್ನು ಬದಲುಮಾಡಿಕೊಂಡು ಹೋಗುತ್ತಿರುವುದನ್ನು ಶೇಷನು ನೋಡಿ ತಾನೂ ಬೇರೆ ರೂಪದಿಂದ ಅವನ ಬಳಿಗೆ ಬಂದು ಭಕ್ತಿಯಿಂದ ಎಲೈ ಕೇಶವನೇ ! ನೀನು ಇಲ್ಲೇ ಇರು. ನನಗೆ ಅಪ್ಪಣೆಮಾಡು.

೨೭. ಎಲೈ ಜನಾರ್ದನನೇ ! ಏನು ಮಾಡಲಿ ? ಎಲ್ಲಿ ಹೋಗಲಿ ? ಆ ಕೆಲಸವನ್ನು ನನಗೆ ಆಜ್ಞಾಪಿಸು. ಯಾವಾಗಲೂ ನಿನ್ನ ಮುಖವನ್ನು ನೋಡುತ್ತಾ ಸುಖವನ್ನೇ ಅನುಭವಿಸುತ್ತಿರುವೆನು, ಎಂದೇ ನನಗೆ ತಿಳಿದಿರುತ್ತದೆ.

೨೮. ಭಗವಂತನು ಹೇಳಿದಳು—ಎಲೈ ಶೇಷನೇ ! ಶಿವ ಮತ್ತು ಪಾರ್ವತಿಯರಿಗೆ ತೊಂದರೆಯನ್ನು ತಪ್ಪಿಸುವುದಕ್ಕೋಸ್ಕರ ನಾನು ಕಪಟವೇಷವನ್ನು ಹೊಂದಿ ಆ ಜಲಂಧರನ ಹೆಂಡತಿಯನ್ನು ಮೋಸಪಡಿಸಿ ಕದಿಯಬೇಕು.

೨೯. ಎಲೈ ಬಂಧುವೇ ! ಆ ವೃಂದೆಯನ್ನು ನಮ್ಮ ವಶಮಾಡಿಕೊಂಡು ಎಳೆದುಕೊಳ್ಳಬೇಕು. ಆದ್ದರಿಂದ ಒಂದು ಕಾಡಿನಲ್ಲಿ ನಾವಿರಬೇಕು. ಅಲ್ಲಿಗೆ ಹೋಗೋಣ, ನಡೆ. ಎಂದು ಹೇಳಿ ಆ ವಿಷ್ಣುವೂ ಶೇಷನೂ ಕಾಡಿಗೆ ಹೋದರು.

ತತೋ ವಿಷ್ಣುಶ್ಚ ಶೇಷಶ್ಚ ಜಟಾವಲ್ಕಲಧಾರಿಣೌ ।
ಆಶ್ರಮಂ ಚಕ್ರತುಃ ಪುಣ್ಯಂ ಸರ್ವಕಾಮಫಲಪ್ರದಂ ॥ ೩೦ ॥

ತಯೋಃ ಶ್ಶಿಷ್ಯಾಃ ಪ್ರಶಿಷ್ಯಾಶ್ಚ ಬಭೂವುಃ ಕಾಮರೂಪಿಣಃ ।
ಸಿಂಹವ್ಯಾಘ್ರವರಾಹಾಶ್ಚ ಋಕ್ಷವಾನರ ಮರ್ಕಟಾಃ ॥ ೩೧ ॥

ಅಥ ತಸ್ಮಿನ್ ವನೇ ವೃಂದಾಂ ಮಂತ್ರೇಣಾಕರ್ಷಯದ್ಧರಿಃ ।
ತಸ್ಯಾ ಹೃದಯಸಂತಾಪಂ ಚಕಾರ ಮಧುಸೂದನಃ ॥ ೩೨ ॥

ಏತಸ್ಮಿನ್ನಂತರೇ ರಾಜ್ಞೀ ತಾಪಮುಗ್ರಮುಪಾಗತಾ ।
ಚಾಮರಾಂಶ್ಚಾಲಯಾಮಾಸ ದಿವ್ಯ ಸ್ತ್ರೀಕರ ಚಾಲಿತಾನ್ ॥ ೩೩ ॥

ಪ್ರಿಯಸ್ಯಾಗಮನಂ ತನ್ವೀ ಚಿಂತಯಂತೀ ಮುಹುರ್ಮುಹುಃ ।
ಚಂದನಾಗುರುಲಿಪ್ತಾಂಗೀ ಮೂರ್ಛಾಂ ಯಾತಿ ಹಿ ಸತ್ವರಂ ॥ ೩೪ ॥

---

೩೦. ಆಮೇಲೆ ಆ ವಿಷ್ಣುವೂ ಶೇಷನೂ ಕಾಡಿಗೆ ಹೋಗಿ ಜಟೆಯನ್ನೂ ನಾರುಬಟ್ಟೆಯನ್ನೂ ಧರಿಸಿ ಇಷ್ಟಾರ್ಥವೆಲ್ಲವೂ ಸಿಕ್ಕುವಂತಹ ಒಂದು ಆಶ್ರಮವನ್ನು ಮಾಡಿಕೊಂಡರು.

೩೧. ಅಲ್ಲಿ ಅವರಿಗೆ ಇಷ್ಟಬಂದ ರೂಪವನ್ನು ಧರಿಸುವ ಶಿಷ್ಯರೂ ಶಿಷ್ಯರ ಶಿಷ್ಯರೂ ಆದರು. ಮತ್ತು ಸಿಂಹ, ಹುಲಿ, ಹಂದಿ, ಕರಡಿ, ಕಪಿಗಳೂ ಕೂಡ ಆ ವನದಲ್ಲಿ ಇಷ್ಟಾರ್ಥವನ್ನು ಕೊಡತಕ್ಕವುಗಳೂ ಆದುವು.

೩೨. ಅನಂತರ ಹರಿಯು ಆ ವೃಂದೆಯನ್ನು ಆ ವನಕ್ಕೆ ಬರುವಂತೆ ತನ್ನ ಮಂತ್ರಶಕ್ತಿಯಿಂದ ಏರ್ಪಡಿಸಿದನು. ಬಂದನಂತರ ಆಕೆಯ ಮನಸ್ಸಿಗೆ ದುಃಖ ಬರುವಂತೆಯೂ ಮಾಡಿದನು.

೩೩–೩೪. ಇಷ್ಟರಲ್ಲಿಯೇ ಈ ವೃಂದೆಯು ಮನ್ಮಥನ ತಾಪವನ್ನು ಬಹುವಾಗಿ ಹೊಂದಿ ಅದನ್ನು ತಾಳಲಾರದೆ ಅಪ್ಸರಸ್ತ್ರೀಯರ ಕೈಯಿಂದ ಚಾಮರಗಳಿಂದ ಬೀಸಿಸಿಕೊಳ್ಳುತ್ತಿದ್ದಳು. ಆಗ ಗಂಡನ ಬರುವಿಕೆಯನ್ನೇ ಆ ವೃಂದೆಯು ಸದಾ ನಿರೀಕ್ಷಿಸುತ್ತ ಇದ್ದಳು. ಆ ಮನ್ಮಥನ ಬಾಧೆಯ ಉಷ್ಣವನ್ನು ಹೋಗಲಾಡಿಸಿಕೊಳ್ಳಲು ಚಂದನ ಅಗುರುಗಳನ್ನು ಬಳಿದುಕೊಂಡರೂ ಪರಿಹಾರವಾಗದೆ ಮೂರ್ಛೆಯನ್ನು ಹೊಂದುತ್ತಿದ್ದಳು.

ತುರ್ಯಯಾಮೇ ವಿಭಾವರ್ಯಾಶ್ಚತುರ್ದಶ್ಯಾಂ ನೃಪಾಂಗನಾ ।
ಸ್ವಪ್ನಂ ದದರ್ಶ ಭಯದಂ ವೈಧವ್ಯಭಯ ಸೂಚಕಂ　　　　॥ ೩೫ ॥

ಜಾಲಂಧರ ಶಿರಶ್ಶುಷ್ಕಂ ಮರ್ದಿತಂ ಪಾಂಡುಭಸ್ಮನಾ ।
ಗೃಧ್ರೇಣಾಕೃಷ್ಟನಯನಂ ಛಿನ್ನ ಕರ್ಣಾಗ್ರನಾಸಿಕಂ　　　　॥ ೩೬ ॥

ಮುಕ್ತಕೇಶೀ ಕರಾಳಾಸ್ಯಾ ಕೃಷ್ಣವರ್ಣಾರುಣಾಂಬರಾ ।
ಚಖಾದ ಕಾಳೀ ರಕ್ತಾಸ್ಯಾ ಹಸ್ತೇ ವಿಧೃತಖರ್ಪರಾ　　　　॥ ೩೭ ॥

ಈದೃಶಂ ದದೃಶೇ ಸ್ವಪ್ನಂ ತಥಾತ್ಮಾನಂ ವಿಡಂಬಿತಂ ।
ದೈತ್ಯಕ್ಷಯ ಗುಣೋಪೇತಂ ಸಾ ದದರ್ಶ ನೃಪಾಂಗನಾ　　　　॥ ೩೮ ॥

ತತಃ ಪ್ರಬುದ್ಧಾಸುರ ರಾಜಪತ್ನೀ ಗೀತೇನ ವಾದ್ಯೇನ ಚ ಮಾಗಧಾನಾಂ ।
ಗೇಯ ಪ್ರಬಂಧೈಸ್ತವನೈರ್ವಚೋಭಿರ್ವಂಶಸ್ತವೈಃ
ಕಿಂ ಪುರುಷಪ್ರ ಪಾದಿತೈಃ ॥ ೩೯ ॥

---

೩೫ ಚತುರ್ದಶೀ ದಿನದ ರಾತ್ರಿಯ ನಾಲ್ಕನೆಯ ಜಾವದಲ್ಲಿ ಆ ವೃಂದೆಯು ವೈಧವ್ಯದ ಭಯವನ್ನು ತೋರಿಸುವ ಭಯಂಕರವಾದ ಒಂದು ಸ್ವಪ್ನವನ್ನು ಕಂಡಳು.

೩೬–೩೭. ಆ ಸ್ವಪ್ನದಲ್ಲಿ ಜಲಂಧರನ ತಲೆಯು ಕತ್ತರಿಸಲ್ಪಟ್ಟು ರಕ್ತವಿಲ್ಲದೆ ಕಾಂತಿವಿಹೀನವಾಗಿತ್ತು. ಬಿಳಿಯ ಬೂದಿಯಲ್ಲಿ ಹೊರಳಾಡಿಸಿತ್ತು. ಹದ್ದುಗಳು ಕಣ್ಣುಗಳನ್ನು ಕಿತ್ತು ತಿಂದಿದ್ದುವು. ಕಿವಿ ಮೂಗುಗಳನ್ನು ಕೊಯ್ದು ಹಾಕಿದ್ದರು. ತಲೆಯನ್ನು ಕೆದರಿಕೊಂಡು, ಕಪ್ಪು ಬಣ್ಣವುಳ್ಳ, ಕೆಂಪು ಬಟ್ಟೆಯನ್ನುಟ್ಟಿರುವ, ಭಯಂಕರವಾದ ಮುಖವುಳ್ಳ, ಕಾಳಿಯು ಕೈಯ್ಯಲ್ಲಿ ಕಪಾಲವನ್ನು ಹಿಡಿದು ಕೊಂಡು, ಮುಖವನ್ನೆಲ್ಲಾ ರಕ್ತವನ್ನು ಮಾಡಿಕೊಂಡು ಅದನ್ನು ತಿನ್ನುತ್ತಿದ್ದಳು.

೩೮. ತಾನು ವೈಧವ್ಯಲಕ್ಷಣಗಳಿಂದ ಕೂಡಿದವಳೂ ಆದಳು. ಈ ರೀತಿಯಾದ, ದೈತ್ಯನಾಶಕವಾದ, ಒಂದು ಸ್ವಪ್ನವನ್ನು ಆ ವೃಂದೆಯು ನೋಡಿದಳು.

೩೯. ಅನಂತರ ಆ ರಾಜಮಹಿಷಿಯಾದ ವೃಂದೆಯು ಸ್ತುತಿಪಾಠಕರ ಹಾಡಿನಿಂದಲೂ ವಾದ್ಯದಿಂದಲೂ ಕಿಂಪುರುಷರು ಹೇಳುತ್ತಿರುವ ಗಾನರೂಪವಾದ ಗದ್ಯದ ರಚನೆಗಳಿಂದಲೂ, ಸ್ತುತಿಗಳಿಂದಲೂ, ತನ್ನ ವಂಶದ ಗುಣ ಸ್ತೋತ್ರಗಳಿಂದಲೂ, ಎಚ್ಚೆತ್ತಳು.

ತತಸ್ತಾನ್ಸಕಲಾನ್ ಶ್ರಾಂತಾನ್ ಧನಂ ದತ್ವಾ ಪ್ರಸಾದಜಂ ।
ನಿವಾರ್ಯ ವಿಪ್ರಾನಾಹೂಯ ಸ್ವಪ್ನಂ ದೃಷ್ಟಂ ನ್ಯವೇದಯತ್ ॥ ೪೦ ॥

ತಂ ಸ್ವಪ್ನಂ ಬ್ರಾಹ್ಮಣಾಃ ಶ್ರುತ್ವಾ ತಾಮೂಚುಃ ಶಾಸ್ತ್ರಪಾರಗಾಃ ॥ ೪೧ ॥

॥ ದ್ವಿಜಾ ಊಚುಃ ॥

ದೇವಿ ದುಸ್ಸ್ವಪ್ನಮತ್ಯುಗ್ರಮಚಿಂತ್ಯ ಫಲದಾಯಕಂ ।
ದೇಹಿ ದಾನಂ ದ್ವಿಜಾತಿಭ್ಯೋ ಹ್ಯ ಚಿಂತ್ಯಭಯನಾಶಕಂ ॥ ೪೨ ॥

ಧೇನುವಾರ್ಸಾಂಸಿ ರತ್ನಾನಿ ಗಜಾಂಶ್ಚಾಭರಣಾನಿ ಚ ॥ ೪೩ ॥

॥ ನಾರದ ಉವಾಚ ॥

ಬ್ರಾಹ್ಮಣಾಃ ಪರಿಸಂತುಷ್ಟಾಃ ಸಿಷಿಚುಸ್ತಾಂ ನೃಪಸ್ತ್ರಿಯಂ ।
ಅಭಿಷಿಕ್ತಾಪಿ ಸಾ ವೃಂದಾ ಜ್ವರೇಣ ಪರಿತಾಪ್ಯತೇ ॥ ೪೪ ॥

---

೪೦–೪೧. ಹೀಗೆ ಎಚ್ಚತ್ತ ವೃಂದೆಯು ಆ ಸ್ತುತಿಪಾಠಕರಿಗೂ ಕಿಂಪುರುಷರಿಗೂ ತನ್ನ ಅನುಗ್ರಹ ಸೂಚಕವಾದ ಬಹುಮಾನಗಳನ್ನು ಕೊಟ್ಟು ಕಳುಹಿಸಿ ಬ್ರಾಹ್ಮಣರನ್ನು ಕರೆಸಿ ಅವರಿಗೆ ತಾನು ಕಂಡ ಸ್ವಪ್ನವನ್ನು ತಿಳಿಸಿದಳು. ಶಾಸ್ತ್ರವನ್ನು ಚೆನ್ನಾಗಿ ಬಲ್ಲ ಬ್ರಾಹ್ಮಣರು ಆ ಸ್ವಪ್ನವನ್ನು ಕೇಳಿ ಅವಳನ್ನು ಕುರಿತು ಇಂತೆಂದರು.

೪೨–೪೩. ಬ್ರಾಹ್ಮಣರು ಹೇಳಿದರು–ಎಲೈ ದೇವಿಯೇ ! ಈ ದುಸ್ವಪ್ನವು ಬಹು ಉಗ್ರವಾದುದು. ನಾವು ಯೋಚಿಸಲಾರದಷ್ಟು ಕೆಟ್ಟಫಲವನ್ನು ಕೊಡುತ್ತದೆ. ಆ ದುಸ್ವಪ್ನದ ಕೆಟ್ಟಫಲವು ನಾಶವಾಗಲು ಬ್ರಾಹ್ಮಣರಿಗೆ ಗೋವು, ಬಟ್ಟೆ, ರತ್ನ, ಆನೆ, ಕುದುರೆ, ಒಡವೆ, ಮುಂತಾದುವುಗಳೆನ್ನು ದಾನಮಾಡು.

೪೪. ನಾರದನು ಹೇಳಿದನು– ವೃಂದೆಯು ಅದೇ ರೀತಿಯಾಗಿ ದ್ವಿಜರಿಗೆ ದಾನಮಾಡಿದಳು. ಬ್ರಾಹ್ಮಣರೂ ಕೂಡಾ ಅನೇಕವಾದ ಅಘಮರ್ಷಣ, ಸೂಕ್ತಗಳನ್ನೂ ಸ್ವಸ್ತಿವಾಚನಗಳನ್ನೂ ಹೇಳಿ ಆ ವೃಂದೆಗೆ ತೀರ್ಥೋದಕವನ್ನೂ ಪ್ರೋಕ್ಷಣೆಮಾಡಿದರು. ಈ ರೀತಿಯಾಗಿ ಪ್ರೋಕ್ಷಣೆ ಮಾಡಿಸಿಕೊಂಡರೂ ಆ ವೃಂದೆಯು ಆ ದುಸ್ವಪ್ನದ ತಾಪದಿಂದ ದುಃಖಿಸುತ್ತಿದ್ದಳು.

ವಿಸೃಜ್ಯ ವಿಪ್ರಪ್ರವರಾನ್ ಪ್ರಾಸಾದಮುಗಮತ್ತದಾ ।
ತತ್ರ ಸ್ಥಿತಾಪಿ ಸ್ವಪುರಂ ದದೃಶೇ ದೀಪ್ತಮಂಗನಾ　　|| ೪೫ ||

ತತಃ ಸ್ವಕರ್ಮಣಾ ರಾಜನ್ನಾಕೃಷ್ಟಾ ಹರಿಣಾ ತು ಸಾ ।
ನ ಶಶಾಕ ಗೃಹೇ ಸ್ಥಾತುಂ ತತೋ ರಾಜ್ಞೀ ವನಂ ಯಯೌ　　|| ೪೬ ||

ರಥಮಶ್ವತರೀಯುಕ್ತಂ ಸ್ಮರದೂತೀ ಸಖೀವಹಂ ।
ಸಮಾರುಹ್ಯ ಕ್ಷಣಾತ್ತಸ್ಮಿ ಪ್ರಾಪ್ತಾ ಸೌಭಾಗ್ಯಕಾನನಂ　　|| ೪೭ ||

ನಾನಾವೃಕ್ಷ ಸಮಾಯುಕ್ತಂ ನಾನಾಪಕ್ಷಿ ಗಣಾನ್ವಿತಂ ।
ಪುಷ್ಪಪ್ರಸ್ರವಣೋಪೇತಂ ಸ್ವರ್ಗನಾರೀ ವಿಭೂಷಿತಂ　　|| ೪೮ ||

ಮಂದಾನಿಲಪ್ರವೇಶೋಸ್ತಿ ಯತ್ರ ನಾನ್ಯಸ್ಯ ಕಸ್ಯ ಚಿತ್ ।
ವನಂ ವೃಂದಾರಿಕಾ ದೃಷ್ಟ್ವಾ ಸಸ್ಮಾರ ಪತಿಮಾತ್ಮನಃ　　|| ೪೯ ||

---

೪೫. ಈ ರೀತಿ ಅಭಿಷೇಕವಾದ ಮೇಲೆ ಬ್ರಾಹ್ಮಣರುಗಳನ್ನು ಸಂಭಾವನೆಗಳಿಂದಲೂ, ದಾನಧರ್ಮಗಳಿಂದಲೂ ಗೌರವಿಸಿ ಆ ವೃಂದೆಯು ಮನೆಯ ಮಹಡಿಯ ಮೇಲಕ್ಕೆ ಹೋದಳು. ಅಲ್ಲಿ ನಿಂತಿರಲು ತನ್ನ ಊರಿಗೆ ಬೆಂಕಿಬಿದ್ದು ಉರಿಯುತ್ತಿರುವಂತೆ ಕಂಡಳು.

೪೬. ಅನಂತರ ಹರಿಯು ಕಾಡಿನಲ್ಲಿದ್ದುಕೊಂಡು ತನ್ನ ಮಂತ್ರಗಳಿಂದಲೂ ಯುಕ್ತಿಗಳಿಂದಲೂ ಆಕೆಯನ್ನು ಬರುವಂತೆ ಮಾಡಿಕೊಂಡನು. ಇತ್ತ ಈಕೆಯೂ ಮನೆಯಲ್ಲಿರಲು ಮನಸ್ಸಿಲ್ಲದೆ ಕಾಡಿಗೆ ಹೊರಟಳು.

೪೭. ಒಂದು ಉತ್ತಮವಾದ ರಥಕ್ಕೆ ಹೇಸರ ಕತ್ತೆಯನ್ನು ಕಟ್ಟಿ ಅದನ್ನು ಸ್ಮರದೂತಿಯೆಂಬ ಸಖಿಯು ನಡೆಸುತ್ತಿದ್ದಳು. ಇಂತಿರುವ ರಥದಲ್ಲಿ ಕುಳಿತು ಆ ವೃಂದೆಯು ಕ್ಷಣಕಾಲದಲ್ಲಿ ಸೌಭಾಗ್ಯಕಾನನವೆಂಬ ಉದ್ಯಾನಕ್ಕೆ ಹೋದಳು.

೪೮. ಆ ವನವು ಅನೇಕ ಬಗೆಯಾದ ಮರಗಳಿಂದಲೂ ಬಗೆ ಬಗೆಗಳಾದ ಪಕ್ಷಿಗಳಿಂದಲೂ ಕೂಡಿದ್ದಿತು. ಹೂವುಗಳು ಮಕರಂದವನ್ನು ಸುರಿಸುತ್ತಿದ್ದುವು. ಅಪ್ಸರ ಸ್ತ್ರೀಯರೂ ಯಕ್ಷ ಕಿನ್ನರರೂ ಅಲ್ಲಿ ವಾಸಿಸುತ್ತಿದ್ದರು.

೪೯. ಆ ವನಕ್ಕೆ ಗಂಡಸಾಗಿ ಮಂದಮಾರುತನೊಬ್ಬನು ಪ್ರವೇಶಿಸಬಹುದೇ ಹೊರತು ಮತ್ತೊಬ್ಬರಿಗೆ ಪ್ರವೇಶವಿರಲಿಲ್ಲ. ಇಂತಹ ವನವನ್ನು ನೋಡಿ ಆ ವೃಂದೆಯು ಮನ್ಮಥಪರಾಧೀನಳಾಗಿ ಗಂಡನನ್ನು ಸ್ಮರಿಸಿದಳು.

ಕಥಂ ಜಾಲಂಧರಂ ವೀರಂ ದ್ರಕ್ಷ್ಯಾಮಿ ಪ್ರಾಪ್ತಮಗ್ರತಃ ।
ಸಾ ತತ್ರ ನ ಸುಖಂ ಲೇಭೇ ವಿವೇಶಾನ್ಯತಮಂ ವನಂ ॥ ೫೦ ॥

ಸಖೀ ರಥ ಸಮಾಯುಕ್ತಾ ವಿಷ್ಣುಮಾಯಾ ವಿಮೋಹಿತಾ ।
ತತೋ ವಿಲೋಕಯಾಮಾಸ ವಿಪಿನಂ ತರುಸಂಕುಲಂ ॥ ೫೧ ॥

ಉರುಪಾಷಾಣಸಂರುದ್ಧಂ ತುರಂಗಾಕ್ಷೀ ಭಯಾವಹಂ ।
ಸಿಂಹವ್ಯಾಘ್ರ ಭಯಾಕೀರ್ಣಂ ಸೃಗಾಲವ್ಯಾಲಸೇವಿತಂ ॥ ೫೨ ॥

ದ್ರುಮೈಸ್ಸ್ಪೃಶಚ್ಛಿಖಾಕಾಶೈಃ ಗುಹಾಸು ಧ್ವಾಂತಪೂರಿತಂ ।
ವನಂ ವಿಲೋಕ್ಯ ಸಾ ಭೀಮಂ ಚಕಿತಾ ಕಮಲೇಕ್ಷಣಾ ॥ ೫೩ ॥

ಸ್ಮರದೂತೀಂ ಸಖೀಂ ವೃಂದಾ ಜಗಾದ ರಥವಾಹಿನೀಂ ।
ರಥಂ ಪ್ರೇಷಯ ಮೇ ಶೀಘ್ರಂ ಸ್ಮರದೂತಿ ಗೃಹಂ ಪ್ರತಿ ॥ ೫೪ ॥

---

೫೦. ವೀರನಾದ ಜಲಂಧರನು ಈಗ ನನ್ನ ಹತ್ತಿರ ಬರಬೇಕಾದರೆ ಏನು ಮಾಡಲಿ ? ಎಂದು ಯೋಚಿಸುತ್ತಿದ್ದಳು. ಹೀಗೆ ಯೋಚಿಸುತ್ತಾ ಆಕೆಯು ಆ ವನದಲ್ಲಿಯೂ ಶಾಂತಿಯನ್ನು ಹೊಂದಲಿಲ್ಲ. ಅಲ್ಲಿರುವ ವಸ್ತುಗಳೆಲ್ಲವೂ ಮನ್ಮಥ ಕೇಳಿಗೆ ಉದ್ಬೋಧಕಗಳೇ ಹೊರತು ಶಾಂತಿಯನ್ನು ಕೊಡತಕ್ಕವಾಗಿರಲಿಲ್ಲ. ಆದುದರಿಂದ ಆಕೆಯು ಬೇರೆವನಕ್ಕೆ ಹೋದಳು.

೫೧. ಆ ವೃಂದೆಯು ಈ ರೀತಿ ವಿಷ್ಣುವಿನ ಮಾಯೆಗೆ ಒಳಗಾಗಿ ಸಖಿಯರನ್ನು ಕಳೆದುಕೊಂಡು ರಥವನ್ನು ತೆಗೆದುಕೊಂಡು ಮುಂದೆ ಹೊರಟು ಅಲ್ಲಿ ಬಹುಮರಗಳು ಬೆಳೆದಿರುವ ಒಂದು ವನವನ್ನು ಕಂಡಳು.

೫೨–೫೩. ಆ ಕಾಡು ದೊಡ್ಡ ದೊಡ್ಡ ಕಲ್ಲು ಬಂಡೆಗಳಿಂದ ಕೂಡಿದ್ದಿತು. ಅದು ಹೆಂಗಸರಿಗೆ ಭಯವನ್ನುಂಟುಮಾಡುವುದು. ಆ ಕಾಡಿನಲ್ಲಿ ದುಷ್ಟಮೃಗಗಳು ವಿಶೇಷವಾಗಿದ್ದುವು. ಮರಗಳು ಮುಗಿಲನ್ನು ಮುಟ್ಟುವಂತೆ ಬೆಳೆದಿದ್ದುವು. ಇದರಿಂದ ಅಲ್ಲಿರುವ ಗುಹೆಗಳಲ್ಲಿ ಯಾವಾಗಲೂ ಕತ್ತಲೆಯು ಕವಿದಿದ್ದಿತು. ವೃಂದೆಯು ಇಂತಹ ಭಯಂಕರವಾದ ವನವನ್ನು ನೋಡಿ ಹೆದರಿದಳು.

೫೪. ಆಗ ವೃಂದೆಯು ರಥವನ್ನು ನಡೆಸುತ್ತಿದ್ದ ಸ್ಮರದೂತಿಯೆಂಬ ಸಖಿಯನ್ನು ಕುರಿತು ಎಲೈ ಸ್ಮರದೂತಿಯೇ ! ರಥವನ್ನು ಮನೆಯ ಕಡೆಗೆ ಬೇಗ ತಿರುಗಿಸು. ಬೇಗ ಮನೆಗೆ ಹೋಗಬೇಕು, ಎಂದಳು.

|| ಸ್ಮರದೂತಿರುವಾಚ ||

ನಾಹಂ ಜಾನಾಮಿ ದಿಗ್ಭಾಗಂ ನಯಾಮಿ ಕ್ವ ರಥಂ ಸಖಿ |
ಶ್ರಾಂತಾ ಅಶ್ವಾಃ ಪ್ರವರ್ತಂತೇ ಮಾರ್ಗಶ್ಚಾತ್ರ ನ ವಿದ್ಯತೇ || ೫೫ ||

ಪ್ರೇರಿತೋ ದೈವತೇನಾಪಿ ಸ್ಯಂದನೋ ಯಾತು ಯತ್ರ ಚ |
ಅತ್ರ ಕೋಽಪಿ ಚ ಮಾಂಸಾದೋ ಭಕ್ಷಯಿಷ್ಯತಿ ನಾನ್ಯಥಾ || ೫೬ ||

|| ನಾರದ ಉವಾಚ ||

ಇತ್ಯುಕ್ತ್ವಾ ಸಾ ದ್ರುತತರಾ ರಥಂ ಶೀಘ್ರಮುವಾಹಯತ್ |
ಸ ರಥೋ ವೇಗತಃ ಪ್ರಾಪ್ತೋ ಯತ್ರ ಸಿದ್ಧಾ ಮುದಾನ್ವಿತಾಃ || ೫೭ ||

ತತ್ರ ಸಿದ್ಧಾಶ್ಚ ದೃಶ್ಯಂತೇ ಕಾನನಂ ಚ ಭಯಾವಹಂ |
ನ ಯತ್ರ ಪ್ರಚಲೋ ವಾಯುರ್ನ ಶಬ್ದಃ ಪಕ್ಷಿಣಾಮಪಿ || ೫೮ ||

---

೫೫. ಸ್ಮರದೂತಿಯು ಹೇಳಿದಳು– ಎಲೈ ಸಖಿಯೇ! ನನಗೆ ದಿಕ್ಕೇ ಗೊತ್ತಾಗುವುದಿಲ್ಲ. ರಥವನ್ನು ಎತ್ತ ಬಿಡಬೇಕೆಂಬುದು ತಿಳಿಯುವುದಿಲ್ಲ. ಅಲ್ಲದೆ ಈ ಕುದುರೆಗಳು ಬಳಲಿವೆ. ದಾರಿಯೂ ಕೂಡಾ ಇಲ್ಲವಾಗಿದೆ.

೫೬. ದೇವರು ಯಾವ ಕಡೆಗೆ ಬುದ್ಧಿಯನ್ನು ಕೊಡುವನೋ ಆ ಕಡೆಗೆ ರಥವು ಹೋಗಲಿ ಇಲ್ಲಿ ಯಾವನಾದರೂ ಒಬ್ಬ ಮಾಂಸ ತಿನ್ನುವ ರಾಕ್ಷಸನು ನಮ್ಮನ್ನು ಕೊಂದು ತಿಂದು ಬಿಡುವನು. ಇದು ಹೊರತು ಬೇರೇನೂ ಇಲ್ಲ.

೫೭. ನಾರದನು ಹೇಳಿದನು– ಕೊನೆಗೆ ಆ ಸ್ಮರದೂತಿಯು ಜಾಗ್ರತೆಯಾಗಿ ರಥವನ್ನು ಯಾವುದೋ ಒಂದು ಕಡೆಗೆ ಓಡಿಸಿದಳು. ಕೊನೆಗೆ ಆ ರಥವು ವೇಗವಾಗಿ ಹೋಗುತ್ತಿರಲು ಅಲ್ಲಿ ಸಂತೋಷದಿಂದ ವಾಸಿಸುತ್ತಿರುವ ಸಿದ್ಧರನ್ನು ನೋಡಿ ಅಲ್ಲಿ ನಿಲ್ಲಿಸಿದಳು.

೫೮–೫೯. ಅಲ್ಲಿ ಉತ್ತಮರಾದ ಸಿದ್ಧರು ಕಾಣುತ್ತಿದ್ದರು. ಆ ಕಾಡಾದರೋ ಭಯಂಕರವಾಗಿದ್ದಿತು- ಗಾಳಿಯು ಅಲ್ಲಿ ಗಟ್ಟಿಯಾಗಿ ಬೀಸುತ್ತಿರಲಿಲ್ಲ. ಪಕ್ಷಿಗಳು ಕೂಡಾ ಶಬ್ದವನ್ನು ಮಾಡುತ್ತಿರಲಿಲ್ಲ. ಸೂರ್ಯನು

ನ ಚ ತೇಜಃ ಪ್ರಕಾಶೋಽಸ್ತಿ ನ ಜಲಂ ಪ್ರದಿಶೋ ದಿಶಃ ।
ತತ್ರ ಪ್ರಾಪ್ತರಥಸ್ಯಾಪಿ ಲಕ್ಷಣೋಽಭೂದ್ವಿಪರ್ಯಯಃ ॥ ೫೯ ॥

ಅಶ್ವತರ್ಯೋ ನ ಹ್ರೇಷಂತೇ ನ ಚ ಶಬ್ದಶ್ಚ ನೇಮಿಜಃ ।
ನ ಚಲಂತಿ ಪತಾಕಾಶ್ಚ ಘಂಟಿಕಾ ನ ಕ್ವಣಂತಿ ಚ ॥ ೬೦ ॥

ನ ಸ್ವನಂತಿ ಮಹಾಘಂಟಾ ಧ್ವಜಸ್ತಂಭೇ ನಿವೇಶಿತಾಃ ।
ವಿಲೋಕ್ಯೈವಂವಿಧಂ ಪ್ರಾಹ ತತ್ರ ವೃಂದಾ ಸಖೀಂ ಪ್ರತಿ ॥ ೬೧ ॥

॥ ವೃಂದೋವಾಚ ॥

ಸ್ಮರದೂತಿ ಕ್ವ ಯಾಸ್ಯಾಮೋ ವ್ಯಾಘ್ರಸಿಂಹಭಯಂ ವನಂ ।
ನ ಗೃಹೇ ನ ಸುಖಂ ರಾಜ್ಯೇ ಮಮ ಜಾತಂ ವನೇ ಸಖಿ ॥ ೬೨ ॥

---

ಅತಿಯಾದ ತೇಜಸ್ಸನ್ನು ಬೀರುತ್ತಿರಲಿಲ್ಲ. ನೀರು ಅಲ್ಲಿರಲಿಲ್ಲ. ದಿಕ್ಕುಗಳಾಗಲೀ ಮೂಲೆ ದಿಕ್ಕುಗಳಾಗಲೀ ತಿಳಿಯುತ್ತಿರಲಿಲ್ಲ. ಅಲ್ಲಿಗೆ ಈ ರಥವು ಹೋದೊಡನೆಯೇ ಇದರ ಲಕ್ಷಣಗಳೇ ವ್ಯತ್ಯಾಸವಾದುವು.

೬೦. ಆ ಹೇಸರಗತ್ತೆಗಳು ಕೆನೆಯದೆ ಹೋದುವು. ಚಕ್ರದ ಶಬ್ದವೇ ನಿಂತುಹೋಯಿತು. ಬಾವುಟಗಳು ಅಲ್ಲಾಡುತ್ತಿರಲಿಲ್ಲ. ಘಂಟೆಗಳು ಸದ್ದಾಗದೆ ಮೌನವಾಗಿದ್ದುವು.

೬೧. ಬಾವುಟದ ಕೋಲಿಗೆ ಕಟ್ಟಿದ್ದ ದಪ್ಪ ಗಂಟೆಗಳೂ ಕೂಡ ಸದ್ದು ಮಾಡದಿದ್ದುವು. ವೃಂದೆಯು ಈ ಸ್ಥಿತಿಯನ್ನೆಲ್ಲಾ ನೋಡಿ ಸಖಿಯನ್ನು ಕುರಿತು ಇಂತೆಂದಳು.

೬೨. ವೃಂದೆಯು ಹೇಳಿದಳು– ಎಲ್ಲಿ ಹೋಗೋಣ. ಈ ವನದಲ್ಲಿ ಸಿಂಹ ಹುಲಿಗಳು ತುಂಬಿವೆ. ಆದ್ದರಿಂದ ಬಹು ಭಯಂಕರವಾಗಿದೆ. ಮನೆಯಲ್ಲಿ ಆಗಲೀ ರಾಜ್ಯದಲ್ಲಿ ಆಗಲಿ ನನಗೆ ಸುಖವಿಲ್ಲ. ಈ ವನದಲ್ಲಿಯೂ ಸುಖವಿಲ್ಲ.

|| ಸ್ಮರದೂತಿರುವಾಚ ||

ಶೃಣುಷ್ವ ದೇವಿ ಪಶ್ಯ ತ್ವಂ ಪುರಶ್ಶೈಲೋತಿದಾರುಣಃ ।
ದೃಷ್ಟ್ವಾಗ್ರತೋ ನ ಗಚ್ಛಂತಿ ತುರಂಗ್ಯೋ ಭಯವಿಹ್ವಲಾಃ || ೬೩ ||

|| ನಾರದ ಉವಾಚ ||

ತಸ್ಯಾಸ್ತದ್ವಚನಂ ಶ್ರುತ್ವಾ ಸಂತ್ರಸ್ತಾ ಸಾ ನೃಪಾಂಗನಾ ।
ದೃಷ್ಟ್ವಾ ಹಾರಂ ಸ್ವ ಕಂಠಸ್ಥಂ ಸ್ಯಂದನಾಚ್ಛೀಘ್ರಮುತ್ಥಿತಾ || ೬೪ ||

ಏತಸ್ಮಿನ್ನಂತರೇ ಪ್ರಾಪ್ತೋ ರಾಕ್ಷಸೋ ಭೀಷಣಾಕೃತಿಃ ।
ತ್ರಿಪಾದಃ ಪಂಚಹಸ್ತಶ್ಚ ಸಪ್ತನೇತ್ರೋತಿದಾರುಣಃ || ೬೫ ||

ಪಿಂಗಳೋ ವ್ಯಾಘ್ರಕರ್ಣಶ್ಚ ಸಿಂಹಸ್ಕಂಧಸ್ತಥಾನನಃ ।
ವಿಹಂಗೇಶಸಮಾಃ ಕೇಶಾಃ ಲಂಬಂತೇ ರುಧಿರಾರುಣಾಃ || ೬೬ ||

---

೬೩. ಸ್ಮರದೂತಿಯು ಹೇಳಿದಳು– ಎಲೈ ದೇವಿಯೇ ! ನನ್ನ ಮಾತನ್ನು ಕೇಳು. ನೀನೂ ಮುಂದೆ ನೋಡು. ಆ ಬೆಟ್ಟವು ಬಹು ದೊಡ್ಡದಾಗಿದೆ. ಎದುರಿನಲ್ಲಿ ಅದನ್ನು ನೋಡಿ ಈ ಹೆಣ್ಣು ಹೇಸರಕತ್ತೆಗಳು ಭಯಪಡುತ್ತಾ ಮುಂದಕ್ಕೆ ಹೋಗದೆ ನಿಂತಿವೆ.

೬೪. ನಾರದನು ಹೇಳಿದನು– ಈ ಸ್ಮರದೂತಿಯ ಮಾತನ್ನು ಕೇಳಿ ಆ ರಾಣಿಯು ಹೆದರಿದಳು. ತನ್ನ ಕತ್ತಿನಲ್ಲಿರುವ ಹಾರವನ್ನು ನೋಡುತ್ತಾ ರಥದಲ್ಲಿಯೇ ಎದ್ದು ನಿಂತಳು.

೬೫–೬೬. ಇಷ್ಟರಲ್ಲಿ ಭಯಂಕರವಾದ ಆಕಾರವುಳ್ಳ ಒಬ್ಬ ರಾಕ್ಷಸನು ಅಲ್ಲಿಗೆ ಬಂದನು. ಅವನಿಗೆ ಮೂರು ಕಾಲುಗಳೂ ಐದು ಕೈಗಳೂ ಏಳು ಕಣ್ಣುಗಳೂ ಇದ್ದು ಹೆದರಿಕೆಯನ್ನುಂಟುಮಾಡುತ್ತಿದ್ದುವು. ಅವನು ಕೆಂಚಗೆ ಹೊಂಬಣ್ಣವಾಗಿದ್ದನು. ಅವನ ಕಿವಿಗಳು ಹುಲಿಯ ಕಿವಿಗಳಂತಿದ್ದುವು. ಸಿಂಹದ ಕತ್ತಿನಂತೆ ಕತ್ತೂ ಮುಖವೂ ಇದ್ದುವು. ಅವನ ಜಟೆಗಳು ಗರುಡನ ಗರಿಯ ಬಣ್ಣಕ್ಕೆ ಸಮವಾಗಿ ರಕ್ತದಂತೆ ಕೆಂಪಗೆ ನೇತಾಡುತ್ತಿದ್ದುವು.

ತಂ ದೃಷ್ಟ್ವಾ ಪದ್ಮಕೋಶಾಂಗೀ ಸಹಸಾ ಸಭಯಾಭವತ್ ।
ನೇತ್ರೇ ಕರಾಭ್ಯಾಮಾಚ್ಛಾದ್ಯ ಚಕಂಪೇ ಕದಳೀವ ಸಾ ॥ ೬೭ ॥

ಪ್ರತೀಹಾರೀ ಪ್ರತೋದಂ ತು ತ್ಯಕ್ತ್ವಾ ರಾಜ್ಞೀಮಭಾಷತ ।
ಭೀತಾಂ ಮಾಂ ತ್ರಾಹಿ ದೇವಿ ತ್ವಮಯಂ ಧಾವತಿ ಭಕ್ಷಿತುಂ ॥ ೬೮ ॥

ಏತಸ್ಮಿನ್ನಂತರೇ ಪ್ರಾಪ್ತೋ ರಾಕ್ಷಸೋ ರಥ ಸನ್ನಿಧೌ ।
ರಥಮುತ್ಕ್ಷಿಪ್ಯ ಹಸ್ತೇನಾ ಭ್ರಾಮಯಚ್ಚಾಶ್ವಿನೀಯುತಂ ॥ ೬೯ ॥

ಸಾ ರಾಜ್ಞೀ ಪತಿತಾ ಭೂಮೌ ಮೃಗೀ ವ್ಯಾಘ್ರಭಯಾದಿವ ।
ಸ್ಮರದೂತೀ ತರೋರ್ಮೂಲೇ ಛಿನ್ನಾಶೋಕಲತಾ ಯಥಾ ॥ ೭೦ ॥

ತತಸ್ತಸ್ಯಾಶ್ವಿನೀಸ್ಸರ್ವಾ ಭಕ್ಷಯಾಮಾಸ ರಾಕ್ಷಸಃ ।
ತೇನ ರಾಜ್ಞೀಧೃತಾ ಹಸ್ತೇ ಸಿಂಹೇನೇಭವಧೂರಿವ ॥ ೭೧ ॥

---

೬೭. ಪದ್ಮದ ಮೊಗ್ಗಿನಂತೆ ಮೈಯುಳ್ಳ ಆಕೆಯು ಆತನನ್ನು ನೋಡಿ ಝುಗ್ಗನೆ ಹೆದರಿದಳು. ಕೈಗಳಿಂದ ಕಣ್ಣುಗಳನ್ನು ಮುಚ್ಚಿಕೊಳ್ಳುತ್ತಾ ಬಾಳೆಯಂತೆ ಬಳುಕಿ ನಡುಗಿದಳು.

೬೮. ಆ ಸಾರಥಿಯಾದ ಸ್ಮರದೂತಿಯು ಕೈಯಲ್ಲಿನ ಚಾವಟಿಯನ್ನು ಬಿಸುಟು ಹೆದರಿಕೆಯಿಂದ ದೇವಿಯೇ! ನನ್ನನ್ನು ಕಾಪಾಡು!! ಕಾಪಾಡು!!! ಈತನು ನನ್ನನ್ನು ಕೊಲ್ಲಲು ಬರುತ್ತಿರುವನು. ಎಂದು ಕೂಗಿಕೊಂಡಳು.

೬೯. ಇಷ್ಟು ಹೊತ್ತಿಗೆ ಆ ರಾಕ್ಷಸನು ರಥದ ಬಳಿಗೆ ಬಂದು ಕೈಯಿಂದ ರಥವನ್ನು ಕುದುರೆಗಳೊಡನೆಯೇ ಮೇಲಕ್ಕೆತ್ತಿ ಗರ್ರೆಂದು ತಿರುಗಿಸಿದನು.

೭೦. ಆ ರಾಣಿಯು ಜಿಂಕೆಯು ಹುಲಿಯ ದೆಸೆಯಿಂದ ಹೆದರಿ ಬೀಳುವಂತೆ ನೆಲವಲ್ಲಿ ಹೆದರಿಕೆಯಿಂದ ಬಿದ್ದುಬಿಟ್ಟಳು. ಈ ಸ್ಮರದೂತಿಯೂ ಕೂಡಾ ಕತ್ತರಿಸಲ್ಪಟ್ಟ ಅಶೋಕದ ಕೊಂಬೆಯು ಮರದ ಬುಡದಲ್ಲಿಯೇ ಬೀಳುವಂತೆ ಹೆದರಿಕೆಯಿಂದ ಆಕೆಯ ಬಳಿಯಲ್ಲಿಯೇ ಬಿದ್ದಳು.

೭೧. ಆಮೇಲೆ ಆ ರಾಕ್ಷಸನು ಆ ಕುದುರೆಗಳೆನ್ನೆಲ್ಲಾ ತಿಂದುಬಿಟ್ಟನು. ಮತ್ತು ಸಿಂಹವು ಹೆಣ್ಣಾನೆಯನ್ನು ಹಿಡಿದುಕೊಳ್ಳುವಂತೆ ಆ ರಾಣಿಯನ್ನು ಕೈಯ್ಯಲ್ಲಿ ಹಿಡಿದುಕೊಂಡನು.

ತಾಮುವಾಚ ತತೋ ರಕ್ಷಃ ಪ್ರಾಣ್ಯೈಸ್ತೇ ಕಾರಣಂ ಯದಿ ।
ತವ ಭರ್ತಾ ಹತಃ ಸಂಖ್ಯೇ ಹರೇಣೇತಿ ಶ್ರುತಂ ಮಯಾ ॥ ೭೨ ॥

ಮಾಮಾಸಾದ್ಯಾದ್ಯ ಭರ್ತಾರಂ ಚಿರಂ ಜೀವಾಕುತೋಭಯಾ ।
ಪಿಚತ ವಾರುಣೀಂ ಮಾಧ್ವೀಂ ಮಹಾಮಾಂಸಸಮನ್ವಿತಾಂ ।
ಶೃಣ್ವತೀತಿವಚೋ ರಾಜ್ಞೀ ಗತಸತ್ವಾ ಇವಾಭವತ್ ॥ ೭೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಶ್ರೀಮನ್ಮಾಥವಮಾಯಾ ಕಥನಂ ನಾಮ ಪಂಚದಶೋಽಧ್ಯಾಯಃ

---

೭೨-೭೩. ಆಗ ರಾಕ್ಷಸನು ಎಲೈ ರಾಣಿಯೇ! ನಿನಗೆ ಜೀವದಾಸೆ ಇದ್ದರೆ ನನ್ನ ಮಾತನ್ನು ಕೇಳು. ನಿನ್ನ ಗಂಡನನ್ನು ಹರನು ಯುದ್ಧದಲ್ಲಿ ಕೊಂದುವನ್ನು ನಾನು ಕೇಳಿದ್ದೇನೆ. ಆದ್ದರಿಂದ ನನ್ನನ್ನೇ ಗಂಡನನ್ನಾಗಿ ಹೊಂದು. ಮತ್ತು ಬಹು ಕಾಲದವರೆಗೆ ಯಾವುದರಿಂದಲೂ ಹೆದರದೆ ಬಾಳು- ಒಳ್ಳೆ ರುಚಿಕರವಾದ ಹೆಂಡವನ್ನು ಕುಡಿಯುತ್ತಾ ಮಹಾಮಾಂಸ (ಮನುಷ್ಯರ ಮಾಂಸ) ವನ್ನು ತಿನ್ನು. ಈ ರೀತಿಯಾಗಿ ರಾಕ್ಷಸನು ಹೇಳುತ್ತಿರುವುದನ್ನು ಕೇಳಿ ಆ ರಾಣಿಯ ಪ್ರಾಣಗಳು ಹಾರಿಹೋದಂತಾದುವು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ಶ್ರೀಮನ್ಮಾಥವಮಾಯಾ ಕಥನ ಎಂಬ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಷೋಡಶೋಽಧ್ಯಾಯಃ ॥



॥ ನಾರದ ಉವಾಚ ॥

ನಾರಾಯಣಸ್ತದಾ ದೇವೋ ಜಟಾವಲ್ಕಲಧಾರ್ಯಥ ।
ದ್ವಿತೀಯೋನುಚರಸ್ತಸ್ಯ ಹ್ಯಾಯಯೌ ಫಲಹಸ್ತವಾನ್ ॥ ೧ ॥

ತೌ ದೃಷ್ಟ್ವಾ ಸ್ಮರದೂತೀ ಸಾ ವಿಲಲಾಪ ಮೃಗೇಕ್ಷಣಾ ।
ತಚ್ಛ್ರುತ್ವಾ ವಚಸಂ ತಸ್ಯಾಃ ಪ್ರೋಚತುಸ್ತಾಂಚ ತಾವುಭೌ ॥ ೨ ॥

॥ ತಾಪಸಾ ಊಚತುಃ ॥

ಭಯಂ ಮಾ ಗಚ್ಛ ಕಲ್ಯಾಣಿ ತ್ವಮಾವಾಂ ತ್ರಾತುಮಾಗತೌ ।
ವನಂ ಘೋರಂ ಪ್ರವಿಷ್ಟಾಸಿ ಕಥಂ ದುಷ್ಟನಿಷೇವಿತಂ ॥ ೩ ॥

---

## ಹದಿನಾರನೆಯ ಅಧ್ಯಾಯವು

೧. ನಾರದರು ಹೇಳಿದನು– ಆಗ ನಾರಾಯಣನು ಜಟಾನಾರುಮಡಿಗಳನ್ನು ಧರಿಸಿಯೂ ಒಬ್ಬ ಶಿಷ್ಯನು ಹಣ್ಣುಗಳನ್ನು ಕೈಯ್ಯಲ್ಲಿ ಹಿಡಿದುಕೊಂಡು ಅವನ ಹಿಂದೆಯೂ ಬರುತ್ತಿದ್ದರು.

೨. ಸ್ಮರದೂತಿಯು ಅವರಿಬ್ಬರನ್ನೂ ನೋಡಿ ಗಟ್ಟಿಯಾಗಿ ಅತ್ತಳು. ಆಕೆಯು ಅಳುವ ಶಬ್ದವನ್ನು ಅವರಿಬ್ಬರೂ ಕೇಳಿ ಅಲ್ಲಿಗೆ ಬಂದು ಅವಳನ್ನು ಕುರಿತು ಈ ರೀತಿ ಹೇಳಿದರು.

೩. ತಾಪಸರು ಹೇಳಿದರು– ಎಲೈ ಕಲ್ಯಾಣಿಯೇ! ಭಯಪಡಬೇಡ. ನಿನ್ನನ್ನು ಕಾಪಾಡುವುದಕ್ಕೆ ನಾವುಗಳು ಬಂದಿದ್ದೇವೆ. ದುಷ್ಟರು ವಾಸಮಾಡುವ ಈ ಕಾಡಿಗೆ ಹೇಗೆ ಬಂದೆಯಮ್ಮಾ!

|| ನಾರದ ಉವಾಚ ||

ಏವಮಾಶ್ವಾಸ್ಯ ತಾಂ ತನ್ವೀಂ ರಾಕ್ಷಸಂ ಪ್ರಾಹ ಮಾಧವಃ || ೪ ||

|| ಮಾಧವ ಉವಾಚ ||

ಮುಂಚೇಮಾಮಧಮಾಚಾರ ಮೃದ್ವಂಗೀಂ ಚಾರುಹಾಸಿನೀಂ |
ರೇ ರೇ ಮೂರ್ಖ ದುರಾಚಾರ ಕಿಂ ಕರ್ತುಂ ತ್ವಂ ವ್ಯವಸ್ಥಿತಃ || ೫ ||

ಸರ್ವಸ್ವಂ ಲೋಕನೇತ್ರಾಣಾಮಾಹಾರಂ ಕರ್ತುಮುದ್ಯತಃ |
ಭವಪುಣ್ಯಪ್ರಭಾವೇಯಂ ಹಂಸ್ಯೇತಾಂ ಮಂಡನಂ ಭುವಃ || ೬ ||

ಅದ್ಯ ಲೋಕಂ ನಿರಾಲೋಕಂ ಕಂದರ್ಪಂ ದರ್ಪವರ್ಜಿತಂ |
ಕರಿಷ್ಯಸ್ಯಧುನಾ ತ್ವಂ ಚ ಹತ್ವಾ ವೃಂದಾರಿಕಾಂ ವನೇ ||
ತಸ್ಮಾದಿಮಾಂ ವಿಮುಂಚಾಶು ಸುಖಪ್ರಾಸಾದದೇವತಾಂ || ೭ ||

---

೪. ನಾರದನು ಹೇಳಿದನು– ಆ ಹೆಂಗಸಿಗೆ ಹೀಗೆಂದು ಧೈರ್ಯವನ್ನು ಹೇಳಿ ರಾಕ್ಷಸನನ್ನು ಕುರಿತು ಇಂತೆಂದನು.

೫. ಮಾಧವನು ಹೇಳಿದನು– ಎಲೈ ನೀಚವಾದ ಆಚಾರವುಳ್ಳ ರಾಕ್ಷಸನೆ! ಮೃದುವಾದ ಶರೀರವುಳ್ಳ ಮುಗುಳು ನಗೆಯುಳ್ಳ ಈ ಹೆಂಗಸನ್ನು ಬಿಟ್ಟು ಬಿಡು. ಎಲೈ ಮೂರ್ಖನೇ! ದುರಾಚಾರಿಯೇ ಈಕೆಯನ್ನು ಏನು ಮಾಡಬೇಕೆಂದು ಮಾಡಿದ್ದೀಯೆ ?

೬. ಎಲೈ ರಾಕ್ಷಸನೇ! ಈಕೆಯು ಪ್ರಪಂಚದ ಜನರ ಕಣ್ಣಿಗೆ ಅತ್ಯುತ್ತಮವಾದ ವಸ್ತುವಾಗಿದ್ದಾಳೆ. ಈಕೆಯನ್ನು ತಿನ್ನಲು ಪ್ರಯತ್ನಿಸುವೆಯಲ್ಲ! ಈಕೆಯು ಸಂಸಾರದ ಪುಣ್ಯದ ಮಹಿಮೆಯಾಗಿದ್ದಾಳೆ. ಭೂಮಿಗೆ ಅಲಂಕಾರವಾಗಿದ್ದಾಳೆ. ಈಕೆಯನ್ನು ಕೊಲ್ಲುತ್ತೀಯಾ ?

೭. ಎಲೈ ರಾಕ್ಷಸನೇ! ನೀನು ಈ ವೃಂದಾರಿಕೆಯನ್ನು ಕೊಂದರೆ ಲೋಕದ ಕಣ್ಣುಗಳೆಲ್ಲವೂ ನೋಡುವ ಉತ್ತಮವಾದ ಪದಾರ್ಥವು ನಾಶವಾಗುವುದರಿಂದ ಅವುಗಳ ಸಾರ್ಥಕತೆಯು ಹೋಗಿ ಕುರುಡಾದಂತೆ ಆಗುತ್ತವೆ. ಇಂತಹ ಉತ್ತಮವಾದ ಪದಾರ್ಥವನ್ನು ಮನ್ಮಥನು ಸೇರಿ ಇತರರನ್ನು ಮೋಹಿಸುತ್ತಾ ತಾನು ಹೆಮ್ಮೆಪಡುತ್ತಿರುವುದರಿಂದ ಈಕೆಯು ಸತ್ತರೆ ಅವನ ಆ ಹೆಮ್ಮೆಯು ಹೋಗಿಬಿಡುತ್ತದೆ. ಆದ್ದರಿಂದ ಸರ್ವಸುಖಗಳೆಂಬ ಮಹಡಿಯ ಮನೆಗೆ ಮುಖ್ಯದೇವತೆಯಾದ ಈಕೆಯನ್ನು ಬಿಟ್ಟುಬಿಡು.

|| ನಾರದ ಉವಾಚ ||

ಇತಿ ಶ್ರುತ್ವಾ ಹರೇರ್ವಾಕ್ಯಂ ರಾಕ್ಷಸಃ ಕುಪಿತೋಽಬ್ರವೀತ್ || ೮ ||

|| ರಾಕ್ಷಸ ಉವಾಚ ||

ಸಮರ್ಥಸ್ತ್ವಂ ಯದಿ ತದಾ ಮೋಚಯಾದ್ಯೈವ ಮತ್ಕರಾತ್ || ೯ ||

|| ನಾರದ ಉವಾಚ ||

ಇತ್ಯುಕ್ತಮಾತ್ರೇ ವಚನೇ ಮಾಧವೇನ ಕ್ರುಧೇಕ್ಷಿತಃ ।
ಪಪಾತ ಭಸ್ಮಸಾದ್ಭೂತಃ ತ್ಯಕ್ತ್ವಾ ವೃಂದಾಂ ಸುದೂರತಃ ॥
ಅಥೋವಾಚ ಪ್ರಮುಗ್ಧಾ ಸಾ ಮಾಯಯಾ ಜಗದೀಶತುಃ || ೧೦ ||

|| ವೃಂದೋವಾಚ ||

ಕಸ್ತ್ವಂ ಕಾರುಣ್ಯಜಲಧೇ ಯೇನಾಹಮಿಹರಕ್ಷಿತಾ ।
ಶಾರೀರಂ ಮಾನಸಂ ದುಃಖಂ ಸಂತಾಪಂ ತಾಪಸಾಂ ನಿಧೇ । || ೧೧ ||

ತ್ವಯಾ ಮಧುರಯಾ ವಾಚಾ ಹೃತಂ ರಾಕ್ಷಸನಾಶನಾತ್ ।
ತವಾಶ್ರಮೇ ತಪಃ ಸೌಮ್ಯ ಕರಿಷ್ಯಾಮಿ ತಪೋಧನ || ೧೨ ||

---

೮. ನಾರದನು ಹೇಳಿದನು– ಹರಿಯ ಈ ಮಾತನ್ನು ಕೇಳಿ ರಾಕ್ಷಸನು ಕೋಪಗೊಂಡು ಇಂತೆಂದನು.

೯. ರಾಕ್ಷಸನು ಹೇಳಿದನು– ಅಯ್ಯಾ ! ನಿನಗೆ ಶಕ್ತಿ ಇದ್ದರೆ ನನ್ನ ಕೈಯಿಂದ ಈಕೆಯನ್ನು ಈಗಲೇ ಬಿಡಿಸಿಕೋ.

೧೦. ನಾರದನು ಹೇಳಿದನು– ಆ ರಾಕ್ಷಸನು ಹೀಗೆನ್ನಲು ಮಾಧವನು ಆತನನ್ನು ಕೋಪದಿಂದ ನೋಡಿದನು. ಆಗ ರಾಕ್ಷಸನು ವೃಂದೆಯನ್ನು ದೂರದಲ್ಲಿ ಬಿಟ್ಟು ತಾನು ಸುಟ್ಟುಬೂದಿಯಾಗಿ ಹೋದನು. ಆಗ ಆ ಮಾಧವನ ಮಾಯೆಯಿಂದ ಆಶ್ಚರ್ಯಪಟ್ಟು ದಿಕ್ಕುತೋರದೆ ವೃಂದೆಯು ಹೀಗೆಂದಳು.

೧೧–೧೨. ವೃಂದೆಯು ಹೇಳಿದಳು– ಎಲೈ ಕೃಪಾನಿಧಿಯೇ ! ನನ್ನನ್ನು ಕಾಪಾಡಿದ ನೀನು ಯಾರು ? ದೇಹದ ದುಃಖ ಮನಸ್ಸಿನ ದುಃಖ ನನ್ನ ತಾಪ ಇವೆಲ್ಲವನ್ನೂ ಒಂದೇಬಾರಿ ನಾಶಮಾಡಿದೆಯಲ್ಲಾ ! ಎಲೈ ಸೌಮ್ಯನಾದ ಋಷಿಯೇ ! ನಾನು ನಿನ್ನ ಆಶ್ರಮದಲ್ಲಿಯೇ ತಪಸ್ಸು ಮಾಡುತ್ತೇನೆ.

|| ತಾಪಸ ಉವಾಚ ||

ಭರದ್ವಾಜಾತ್ಮಜೋಽಹಂ ವೈ ದೇವಶರ್ಮೇತಿ ವಿಶ್ರುತಃ |
ವಿಹಾಯ ಭೋಗಾನಖಿಲಾನ್ವನಂ ಘೋರಮುಪಾಗತಃ || ೧೩ ||

ಅನೇನ ವಟುನಾ ಸಾರ್ಧಂ ಮಮ ಶಿಷ್ಯೇಣ ಕಾಮತಃ |
ಬಹವಸ್ಸಂತಿ ಚಾನ್ಯೇಽಪಿ ಮಚ್ಛಿಷ್ಯಾಃ ಕಾಮರೂಪಿಣಃ || ೧೪ ||

ತ್ವಂ ಚೇನ್ಮಮಾಶ್ರಮೇ ಸ್ಥಿತ್ವಾ ಚಿಕೀರ್ಷಸಿ ತಪಶ್ಶುಭೇ |
ಏಹಿ ರಾಜ್ಞ್ಯಪರಂ ಯಾಮೋ ವನಂ ದೂರಸ್ಥಿತಂ ಯತಃ || ೧೫ ||

|| ನಾರದ ಉವಾಚ ||

ಇತ್ಯುಕ್ತ್ವಾ ರಾಜಪತ್ನೀಂ ತಾಂ ಯಯೌ ಪ್ರಾಚೀಂ ದಿಶಂ ಹರಿಃ |
ವನಂ ಪ್ರೇತಪಿಶಾಚಾಢ್ಯಂ ಮಂದಗತ್ಯಾ ನರಾಧಿಪ || ೧೬ ||

---

೧೩. ತಪಸ್ವಿಯು ಹೇಳಿದನು- ಅಮ್ಮಾ! ನಾನು ಭರದ್ವಾಜ ಋಷಿಯ ಮಗನು. ದೇವಶರ್ಮನೆಂದು ನನ್ನ ಹೆಸರು. ಎಲ್ಲಾ ಭೋಗಗಳನ್ನೂ ಬಿಟ್ಟು ತಪಸ್ಸಿಗೋಸ್ಕರ ಈ ಘೋರಾರಣ್ಯಕ್ಕೆ ಬಂದೆನು.

೧೪. ಬ್ರಹ್ಮಚಾರಿಯಾದ ಈ ಶಿಷ್ಯನನ್ನು ಕರೆದುಕೊಂಡು ಇಷ್ಟ ಬಂದ ಕಡೆಗಳಲ್ಲಿ ಸುತ್ತುತ್ತಿದ್ದೇನೆ. ತಪಸ್ಸಿದ್ಧಿಯಿಂದ ಇಷ್ಟಬಂದಂತೆ ಆಕಾರಗಳನ್ನು ಹೊಂದಬಲ್ಲ ನನ್ನ ಶಿಷ್ಯರು ಬಹುಮಂದಿ ಇದ್ದಾರೆ.

೧೫. ನೀನು ನನ್ನೊಡನಿದ್ದು ತಪಸ್ಸುಮಾಡುವಿಯಾದರೆ ಎಲೈ ರಾಣಿಯೆ! ದೂರದಲ್ಲಿರುವ ಬೇರೆ ತಪೋವನಕ್ಕೆ ಹೋಗೋಣ. ಬಾ.

೧೬. ನಾರದನು ಹೇಳಿದನು– ಈ ತಪಸ್ವಿಯು ರಾಣಿಯಾದ ವೃಂದೆಗೆ ಇಂತೆಂದು ಹೇಳಿ ನಿಧಾನವಾಗಿ ಪೂರ್ವದಿಕ್ಕಿನಲ್ಲಿರುವ ಪ್ರೇತಪಿಶಾಚಿಗಳಿಂದ ಕೂಡಿರುವ ಒಂದು ವನವನ್ನು ಕುರಿತು ಹೋದನು.

ವೃಂದಾರಿಕಾಶ್ರುಪೂರ್ಣಾಕ್ಷೀ ತಸ್ಯ ಪೃಷ್ಠಾನುಗಾ ಯಯೌ ।
ಸ್ಮರದೂತೀ ಚ ತತ್ಪೃಷ್ಠೇ ಮಾಂ ಪ್ರತೀಕ್ಷೇತಿ ವಾದಿನೀ ॥ ೧೭ ॥

ಅತ್ರಾಂತರೇ ದುರಾಚಾರಃ ಕೋಽಪಿ ಪಾಪಾಕೃತಿರ್ವನೇ ।
ಜಾಲಂ ಪ್ರಸಾರಯಾಮಾಸ ತದ್ಯದಾ ಜೀವಪೂರಿತಂ ॥ ೧೮ ॥

ತತಃ ಸಂಕೋಚಯಾಮಾಸ ತಜ್ಜಾಲಂ ಪಾಪನಾಯಕಃ ।
ಜಾಲಸ್ಥಾಂಸ್ತು ತದಾ ಜೀವಾನುಪಾಹೃತ್ಯ ಮುಮೋಚ ಹ ॥
ಸ ಚ ವ್ಯಾಧಃ ಸ್ತ್ರಿಯೌ ದೃಷ್ಟ್ವಾ ಸ್ಮರದೂತೀ ಜಗಾದ ತಾಂ ॥ ೧೯ ॥

॥ ಸ್ಮರದೂತಿರುವಾಚ ॥

ದೇವಿ ಮಾಮತ್ತುಮಾಯಾತಿ ಕರೇ ಗೃಹ್ಣಾತಿ ಮಾಂ ಸಖೀಂ ॥ ೨೦ ॥

---

೧೭. ವೃಂದೆಯು ಅಳುತ್ತಾ ಆ ಋಷಿಯ ಹಿಂದೆ ಹೊರಟಳು. ಸ್ಮರದೂತಿಯು ಕೂಡಾ ನನ್ನನ್ನು ರಕ್ಷಿಸು. ಎಂದು ಹೇಳುತ್ತಾ ಅವಳ ಹಿಂದೆ ಹೊರಟಳು.

೧೮–೧೯. ಇಷ್ಟರೊಳಗೆ ಒಬ್ಬ ಪಾಪಿಯಾದ ಬೇಡನು ಪ್ರಾಣಿಗಳನು. ಹಿಡಿಯಲು ಬಲೆಯನ್ನು ಒಡ್ಡಿದ್ದನು. ಆ ಬಲೆಗೆ ಅನೇಕ ಮೃಗಗಳು ಬಿದ್ದಿದ್ದುವು. ಅನಂತರ ಆ ಬಲೆಯನ್ನು ಎಳೆದುಕೊಂಡು ಚಿಕ್ಕದುಮಾಡುತ್ತಾ ಬಂದನು. ಹೀಗೆ ಎಳೆದು ಬಲೆಯನ್ನು ಮಡಿಸುತ್ತಿರಲು ಆ ಬೇಡನು ಈ ಇಬ್ಬರು ಹೆಂಗಸರನ್ನು ನೋಡಿ ಒಡನೆಯೇ ಆ ಬಲೆಯಲ್ಲಿದ್ದ ಪ್ರಾಣಿಗಳನ್ನು ಬಿಟ್ಟು ಬಿಟ್ಟು ಆ ಹೆಂಗಸರ ಕಡೆಗೆ ಓಡಿಬಂದನು. ಇದನ್ನು ನೋಡಿ ಆ ಸ್ಮರದೂತಿಯು ವೃಂದೆಯನ್ನು ಕುರಿತು ಇಂತೆಂದಳು.

೨೦. ಸ್ಮರದೂತಿಯು ಹೇಳಿದಳು– ಎಲೈ ದೇವಿಯೇ! ಈ ದುಷ್ಟನು ನನ್ನನ್ನು ತಿನ್ನಲು ಬರುತ್ತಿರುವನು. ಸಖಿಯಾದ ನನ್ನನ್ನು ಕೈಯ್ಯಲ್ಲಿ ಹಿಡಿದು ಕೊಳ್ಳುತ್ತಿರುವನು.

|| ನಾರದ ಉವಾಚ ||

ವೃಂದಾ ತಯೋಕ್ತಂ ಶ್ರುತ್ವೈನಂ ವಿಕೃತಾಸ್ಯಂ ವ್ಯಲೋಕಯತ್ |
ವೀಕ್ಷ್ಯ ತಂ ಭಯವಾತೇನ ನಿರ್ಧೂತಾ ಸಿಂಧುಜಪ್ರಿಯಾ || ೨೦ ||

ದುದ್ರಾವ ವಿಕಲಂ ಶ್ವಭ್ರಂ ಸ್ಮರದೂತ್ಯಾ ಸಮಂ ವನೇ |
ವಿದ್ರವಂತೀ ಸಮಂ ಸಖ್ಯಾ ತಾಪಸಾಶ್ರಮಮಾಗತಾ || ೨೧ ||

ಸಾ ತಾಪಸವನೇ ತಸ್ಮಿನ್ ದದರ್ಶಾತ್ಯಂತಮದ್ಭುತಂ |
ಪಕ್ಷಿಣಃ ಕಾಂಚನಪ್ರಖ್ಯಾನ್ನಾನಾಶಬ್ದಸಮಾಕುಲಾನ್ || ೨೨ ||

ಸಾಪಶ್ಯದ್ಧೇಮಪದ್ಮಾಢ್ಯಾಂ ವಾಪೀಂ ತು ಸ್ವರ್ಣಭೂಮಿಕಾಂ |
ಕ್ಷೀರಂ ವಹಂತೀಂ ಸರಿತಂ ಸ್ರವಂತಿ ಮಧು ಭೂರುಹಾಃ || ೨೪ ||

---

೨೦. ನಾರದನು ಹೇಳಿದನು– ಸಖಿಯು ಹೀಗೆ ಹೇಳಲು ಅದನ್ನು ಕೇಳಿದ ವೃಂದೆಯು ಆಗ ಆ ವಕ್ರಮುಖದ ಬೇಡನನ್ನು ನೋಡಿದಳು. ನೋಡಿದ ಒಡನೆಯೇ ಆ ವೃಂದೆಯು ಭಯಂಕರವೆಂಬ ಸುಂಟರು ಗಾಳಿಯಿಂದ ಅಲ್ಲಾಡಿಸಲ್ಪಟ್ಟಳು.

೨೧. ಆಗ ಆ ವೃಂದೆಯು ಸ್ಮರದೂತಿಯೊಡನೆ ಸುತ್ತಿ ಸುತ್ತಿಕೊಂಡು ಹಳ್ಳಪ್ರದೇಶದಲ್ಲಿ ಮರೆಯಾಗಿ ಓಡಿದಳು. ಹೀಗೆ ಓಡುತ್ತಾ ಕೊನೆಗೆ ಒಂದು ತಪಸ್ವಿಗಳ ಆಶ್ರಮಕ್ಕೆ ಬಂದಳು.

೨೨. ತಾಪಸರ ಆ ಆಶ್ರಮಕ್ಕೆ ಹೋಗಿ ವೃಂದೆಯು ಅಲ್ಲಿ ಆಶ್ಚರ್ಯವಾದ ವಿಷಯಗಳನ್ನು ಕಂಡಳು. ಅಲ್ಲಿರುವ ಹಕ್ಕಿಗಳು ಚಿನ್ನದ ಗರಿಯುಳ್ಳವಾಗಿದ್ದುವು. ನಾನಾಬಗೆಯಾದ ಶಬ್ದಗಳನ್ನು ಮಾಡುತ್ತಿದ್ದುವು.

೨೪. ಅಲ್ಲಿ ಆಕೆಯು ಚಿನ್ನದ ಸೋಪಾನಗಳುಳ್ಳ ಕೊಳಗಳಲ್ಲಿ ಚಿನ್ನದ ಪದ್ಮಗಳು ಇರುವುದನ್ನು ನೋಡಿದಳು. ಅಲ್ಲದೆ ಅಲ್ಲಿರುವ ನದಿಗಳು ನೀರಿಗೆ ಬದಲಾಗಿ ಹಾಲನ್ನು ಹೊಂದಿ ಹರಿಯುತ್ತಿದ್ದುವು. ಮರಗಳೆಲ್ಲವೂ ಜೇನು ತುಪ್ಪವನ್ನು ಸುರಿಸುತ್ತಿದ್ದವು.

ಶರ್ಕರಾರಾಶಯಸ್ತತ್ರ ಮೋದಕಾನಾಂ ಚ ಸಂಚಯಾಃ ।
ಭಕ್ಷ್ಯಾಣಿ ಸ್ವಾದು ಸರ್ವಾಣಿ ಬಹೂನ್ಯಾಭರಣಾನಿ ಚ ॥ ೨೫ ॥

ಬಹುಶಸ್ತಾನಿ ದಿವ್ಯಾನಿ ನಭಸಃ ಸಂಪತಂತಿ ಚ ।
ಕ್ರೀಡಂತಿ ಹರಯಸ್ತೃಪ್ತಾ ಉತ್ಪಂತಿ ಪತಂತಿ ಚ ॥ ೨೬ ॥

ಮಠೇತಿಸುಂದರಂ ವೃಂದಾ ತಂ ದದರ್ಶ ತಪಸ್ವಿನಂ ।
ವ್ಯಾಘ್ರಚರ್ಮಾಸನಗತಂ ಭಾಸಯಂತಂ ಜಗತ್ತ್ರಯಂ ॥ ೨೭ ॥

ತಮುವಾಚ ವಿಭೋ ಪಾಹಿ ಪಾಹಿಪಾಪಾರ್ಧಿಕಾದಥ ।
ತಪಸಾ ಕಿಂಚ ಧರ್ಮೇಣ ಮೌನೇನ ಚ ಜಪೇನ ಚ ॥ ೨೮ ॥

ಭೀತತ್ರಾಣಾತ್ಪರಂ ನಾನ್ಯತ್ಪುಣ್ಯಮಸ್ತಿ ತಪೋಧನ ।
ಏವಮುಕ್ತವತೀ ಭೀತಾ ಸಾಲಸಾಂಗೀ ತಪಸ್ವಿನಂ ॥ ೨೯ ॥

---

೨೫ ಆ ಕೊಳದ ಬಳಿಯಲ್ಲಿ ಸಕ್ಕರೆಯು ರಾಶಿರಾಶಿಯಾಗಿ ಬಿದ್ದಿದ್ದಿತು. ಅನೇಕವಾದ ಆಭರಣಗಳೂ, ಸಿಹಿಯಾದ ಭಕ್ಷಗಳೂ ಗುಡ್ಡೆಗುಡ್ಡೆಯಗಿ ಬಿದ್ದಿದ್ದುವು.

೨೬. ಅನೇಕವಾದ ಆಭರಣಗಳೂ ಈ ಉತ್ತಮವಾದ ಭಕ್ಷಗಳೂ ಅನೇಕವಾಗಿ ಆಕಾಶದಿಂದಲೇ ಬೀಳುತ್ತಿದ್ದುವು. ಅಲ್ಲಿದ್ದ ಜಿಂಕೆಗಳು ತೃಪ್ತಿಯನ್ನು ಹೊಂದಿ ಸಂತೋಷದಿಂದ ನೆಗೆಯುತ್ತಾ ಕುಣಿಯುತ್ತಾ ಇದ್ದವು.

೨೭. ಅಲ್ಲಿ ಒಂದು ಮಠವಿದ್ದಿತು. ಅಲ್ಲಿ ಒಬ್ಬ ತಪಸ್ವಿಯನ್ನು ಆ ವೃಂದೆಯು ನೋಡಿದಳು. ಆ ತಪಸ್ವಿಯು ಹುಲಿಯ ಚರ್ಮದ ಮೇಲೆ ಕುಳಿತು ಕೊಂಡಿದ್ದನು. ಆತನ ತೇಜಸ್ಸನ್ನು ನೋಡಿದರೆ ಅದು ಮೂರುಲೋಕವನ್ನೂ ಬೆಳಗುವಂತಿದ್ದಿತು.

೨೮–೨೯. ಆಗ ಆಕೆಯು ಅವನನ್ನು ನೋಡಿ ಎಲೈ ವಿಭುವೇ! ನನ್ನನ್ನು ಈ ಪಾಪಿಯಾದ ಬೇಡನ ದೆಸೆಯಿಂದ ಕಾಪಾಡು. ತಪಸ್ಸು, ಧರ್ಮ, ಮೌನ, ಜಪ ಇವುಗಳಿಂದ ಬರುವ ಪುಣ್ಯಕ್ಕಿಂತಲೂ ಭಯಪಟ್ಟವರನ್ನು ಕಾಪಾಡುವ ಧರ್ಮವು ಉತ್ತಮವು. ಎಲೈ ಋಷಿಯೇ! ಅದಕ್ಕಿಂತಲೂ ಉತ್ತಮವಾದ ಧರ್ಮವು ಮತ್ತೊಂದಿಲ್ಲ. ಈ ರೀತಿಯಾಗಿ ಆ ತಪಸ್ವಿಯನ್ನು ಭಯಪಟ್ಟ ಆಕೆಯು ಬೇಡಿಕೊಂಡಳು.

ತಾವತ್ಪ್ರಾಪ್ತಸ್ಸದುಷ್ಟಾತ್ಮಾ ಸರ್ವಜೀವಪ್ರಬಂಧಕಃ ।
ವೃಂದಾದೇವೀ ಭಯತ್ರಸ್ತಾ ಹರಿಕಂಠಂ ಸಮಾಶ್ಲಿಷತ್ ।
ಸುಖಸ್ಪರ್ಶಭುಜಾಭ್ಯಾಂ ಸಾಽಶೋಕವಲ್ಲೀವ ಲಿಂಗಿತಾ ॥ ೩೦ ॥

॥ ಹರಿರುವಾಚ ॥

ತವಾಲಿಂಗನಭಾವೇನ ಪುನರೇವ ಭವಿಷ್ಯತಿ ।
ಶಿರಸ್ಸರ್ವಾಂಗಸಂಪನ್ನಂ ತ್ವದ್ಭರ್ತುರಧಿಕಂ ಗುಣೈಃ ॥
ಅಥ ತ್ವಂ ಪ್ರಮುದೇ ಗಚ್ಛ ಪತ್ಯರ್ಥೇ ಚಿತ್ರಶಾಲಿಕಾಂ ॥ ೩೧ ॥

॥ ನಾರದ ಉವಾಚ ॥

ಸಾ ಚಿತ್ರಶಾಲಾಮಿತ್ಯುಕ್ತ್ವಾ ವಿವೇಶ ಮುನಿನಾ ತದಾ ।
ದಿವ್ಯ ಪರ್ಯಂಕಮಾರೂಢಾ ಗೃಹ್ಯ ತಂ ತಸ್ಯ ತಚ್ಛಿರಃ ॥ ೩೨ ॥

---

೩೦. ಈಕೆಯು ಹೀಗೆನ್ನುತ್ತಿರುವಷ್ಟರಲ್ಲಿಯೇ ಆ ಪ್ರಾಣಿವಧೆಯಲ್ಲಿ ಧೀರನಾದ ಬೇಡನು ಅಲ್ಲಿಗೆ ಬಂದನು. ಆಗ ವೃಂದೆಯು ಭಯಪಟ್ಟು ಆ ತಪಸ್ವಿ ವೇಷದ ಹರಿಯು ಕತ್ತನ್ನು ಆಲಿಂಗಿಸಿಕೊಂಡಳು. ಆಕೆಯು ಆ ಕೋಮಲವಾದ ತೋಳುಗಳಿಂದ ಆಲಂಗಿಸಿಕೊಂಡಿರುವುನನ್ನು ನೋಡಿದರೆ ಅಶೋಕದ ಕೊಂಬೆಯನ್ನು ಆಲಂಗಿಸಿದ ಬಳ್ಳಿಯಂತೆ ಇದ್ದಿತು.

೩೧. ಹರಿಯು ಹೇಳಿದನು– ಎಲೈ ಸುಂದರಿಯೇ ! ನೀನು ಆಲಂಗನ ಮಾಡಿಕೊಂಡರೆ ನಿನ್ನ ಗಂಡನ ತಲೆಯು ಎಲ್ಲಾ ಅವಯವಗಳಿಂದಲೂ ಕೂಡಿ ಕೊಳ್ಳುತ್ತದೆ. ಅಲ್ಲದೆ ನಿನ್ನ ಗಂಡನ ಗುಣಕ್ಕಿಂತಲೂ ಹೆಚ್ಚು ಗುಣವುಳ್ಳದ್ದಾಗುತ್ತವೆ. ಆದ್ದರಿಂದ ನೀನು ನಿನ್ನ ಗಂಡನನ್ನು ಹೊಂದುವುದಕ್ಕೋಸ್ಕರ ಚಿತ್ರಶಾಲೆಗೆ ಹೋಗು.

೩೨. ನಾರದನು ಹೇಳಿದನು– ಚಿತ್ರಶಾಲೆಗೆ ಹೋಗು ಎಂದು ಋಷಿಯು ಹೇಳಿ ತಾನು ಆಕೆಯನ್ನು ಚಿತ್ರಶಾಲೆಗೆ ಕರೆದುಕೊಂಡುಹೋದನು. ಅಲ್ಲಿ ಅವಳ ಗಂಡನ ತಲೆಯಿದ್ದಿತು. ಅದನ್ನು ಹಿಡಿದುಕೊಂಡು ಅಲ್ಲಿದ್ದ ಉತ್ತಮವಾದ ಮಂಚವನ್ನು ಹತ್ತಿದಳು.

ಚಕಾರಾಧರ ಪಾನಂ ಸಾ ಮೀಲಿತಾಕ್ಷ್ಯತಿಲೋಲುಪಾ ।
ಯಾವತ್ತಾವದುದಭವತ್ ರೂಪಂ ಜಾಲಂಧರಾಕೃತಿ ॥ ೩೩ ॥

ತತ್ಕಾಂತ ಸದೃಶಾಕಾರಸ್ತದ್ವಕ್ಷಾಸ್ತದ್ವದುನ್ನತಿಃ ।
ತದ್ವಾಕ್ಯಸ್ತನ್ಮನೋ ಭಾವ ಸ್ತದಾಸೀಜ್ಜಗದೀಶ್ವರಃ ॥
ಅಥ ಸಂಪೂರ್ಣಕಾಯಂ ತಂ ಪ್ರಿಯಂ ವೀಕ್ಷ್ಯ ಜಗಾದ ಸಾ ॥ ೩೪ ॥

॥ ವೃಂದೋವಾಚ ॥

ತವ ಕುರ್ವೇ ಪ್ರಿಯಂ ಸ್ವಾಮಿನ್ ಬ್ರೂಹಿ ತ್ವಂ ಸ್ಮರಣಂ ಚ ಮೇ ॥ ೩೫ ॥

॥ ನಾರದ ಉವಾಚ ॥

ವೃಂದಾವಚನಮಾಕರ್ಣ್ಯ ಪ್ರಾಹ ಮಾಯಾಸಮುದ್ಭವಃ ॥ ೩೬ ॥

---

೩೩. ಆ ಮಂಚದ ಮೇಲೆ ಕುಳಿತು ಆ ತಲೆಯ ಅಧರ ಪಾನವನ್ನು ಮಾಡುತ್ತಾ ಆ ವೃಂದೆಯು ಅದರಲ್ಲಿಯೇ ಬಹು ಆಸಕ್ತಳಾಗಿದ್ದಳು. ಅಷ್ಟರಲ್ಲಿ ಆ ತಲೆಗೆ ಮಿಕ್ಕ ಆಕಾರಗಳೆಲ್ಲವೂ ಜಲಂಧರನಂತೆ ಬೆಳೆದವು.

೩೪. ಅದು ಅವಳ ಗಂಡನ ಆಕಾರವಾಗಿಯೇ ಇದ್ದಿತು. ಆ ಎದೆಯು ಅವನ ಎದೆಯಂತೆಯೇ ಉಬ್ಬಿಕೊಂಡು ವಿಶಾಲವಾಗಿದ್ದಿತು. ಮಾತು ಆ ಜಲಂಧರನ ಮಾತಿನಂತೆಯೂ ಅವನ ಭಾವವೆಲ್ಲವೂ ಜಲಂಧರನ ಭಾವ ದಂತೆಯೂ ಆದುವು. ಒಟ್ಟಿನಲ್ಲಿ ಅವನು ಆ ಜಗದೀಶ್ವರನಾದ ಜಲಂಧರನಂತೆಯೇ ಆದನು. ಹೀಗೆ ಗಂಡನು ಪೂರ್ತಿಯಾದ ಶರೀರವನ್ನು ಹೊಂದಿದ ಮೇಲೆ ಆ ಗಂಡನನ್ನು ಕುರಿತು ವೃಂದೆಯು ಇಂತೆಂದಳು.

೩೫. ವೃಂದೆಯು ಹೇಳಿದಳು– ಎಲೈ ಸ್ವಾಮಿಯೇ! ನಿನಗೆ ಪ್ರಿಯ ವಾದವುಗಳೆಲ್ಲವನ್ನೂ ಮಾಡುತ್ತೇನೆ. ನನಗೆ ಹಿಂದಿನ ಗುರುತುಗಳನ್ನು ಹೇಳು.

೩೬. ನಾರದನು ಹೇಳಿದನು– ವೃಂದೆಯ ಈ ಮಾತನ್ನು ಕೇಳಿ ಆ ಮಾಯಾಜಲಂಧರನು ಇಂತೆಂದನು.

|| ಮಾಯಾ ಜಲಂಧರ ಉವಾಚ ||

ಶೃಣು ದೇವಿ ಯಥಾ ಯುದ್ಧಂ ವೃತ್ತಂ ಶಂಭೋರ್ಮಯಾ ಸಹ ।
ಪ್ರಿಯೇ ರುದ್ರೇಣ ರೌದ್ರೇಣ ಚ್ಛಿನ್ನಂ ಚಕ್ರೇಣ ಮೇ ಶಿರಃ || ೩೭ ||

ತಾವತ್ತ್ವತ್ಸಿದ್ಧಿಯೋಗಾಚ್ಚ ತ್ವದ್ದೂತೇನ ಮಹಾರಣಾತ್ ।
ಛಿನ್ನಂ ತದತ್ರ ಚಾನೀತಂ ಜೀವನಂ ತೇಂಗಸಂಗತಃ || ೩೮ ||

ಪ್ರಿಯೇ ತ್ವಂ ಮದ್ವಿಯೋಗೇನ ಬಾಲೇ ಜಾತಾಸಿ ದುಃಖಿತಾ ।
ಕ್ಷಂತವ್ಯಂ ವಿಪ್ರಿಯಂ ಮಹ್ಯಂ ಯತ್ತ್ವಾಂ ತ್ಯಕ್ತ್ವಾ ರಣಂ ಗತಃ || ೩೯ ||

|| ನಾರದ ಉವಾಚ ||

ಇತ್ಯಾದಿ ವಚನೈಸ್ತೇನ ವೃಂದಾ ಸಂಸ್ಕಾರಿತಾ ತದಾ ।
ತಾಂಬೂಲೈಶ್ಚ ವಿನೋದೈಶ್ಚ ವಸ್ತ್ರಾಲಂಕರಣೈಃ ಶುಭೈಃ || ೪೦ ||

---

೩೭. ಮಾಯೆಯ ಜಲಂಧರನು ಹೇಳಿದನು– ಎಲೈ ದೇವಿಯೇ ! ಕೇಳು. ಆ ರುದ್ರನೊಡನೆ ನಾನು ಯುದ್ಧವನ್ನು ಭಯಂಕರವಾಗಿ ಮಾಡಿದೆನು, ಕೊನೆಗೆ ಆ ಭಯಂಕರನಾದ ರುದ್ರನು ಚಕ್ರದಿಂದ ನನ್ನ ತಲೆಯನ್ನು ಕತ್ತರಿಸಿದನು.

೩೮. ಅಷ್ಟರಲ್ಲಿ ನಿನ್ನ ದೂತನು ಆ ಮಹಾರಣರಂಗದಲ್ಲಿ ಕತ್ತರಿಸಿದ ನನ್ನ ತಲೆಯನ್ನು ತಂದನು. ಈಗ ಈ ತಲೆಯು ನಿನ್ನ ತಪಸ್ಸಿದ್ಧಿಯಿಂದಲೂ ಪತಿವ್ರತಾ ಮಹಿಮೆಯಿಂದಲೂ ನಿನ್ನ ಅಂಗಸಂಗದಿಂದಲೂ ಜೀವವನ್ನು ಹೊಂದಿತು.

೩೯. ಎಲೈ ಪ್ರಿಯಳೇ ! ನೀನು ನನ್ನ ಅಗಲುವಿಕೆಯಿಂದ ದುಃಖ ಗೊಂಡಿದ್ದೀಯೆ. ನಿನ್ನನ್ನು ಬಿಟ್ಟು ನಾನು ಯುದ್ಧಕ್ಕೆ ಹೋದ ಆ ಅಪರಾಧವನ್ನು ಕ್ಷಮಿಸು.

೪೦. ನಾರದನು ಹೇಳಿದನು– ಆ ಜಲಂಧರನು ಇವೇ ಮುಂತಾದ ಮಾತುಗಳನ್ನಾಡಿ ತನ್ನ ಗುರುತನ್ನು ಕೊಡಲು ತಾಂಬೂಲ, ವಸ್ತ್ರ, ಅಲಂಕಾರ, ಒಡವೆ, ಮುಂತಾದುವುಗಳಿಂದಲೂ ವಿನೋದಗಳಿಂದಲೂ ಅವರು ಸುಖಿಸಿದರು.

ಅಥ ವೃಂದಾರಿಕಾ ದೇವೀ ಸರ್ವಭೋಗಸಮನ್ವಿತಾ ।
ಪ್ರಿಯಂ ಗಾಢಂ ಸಮಾಲಿಂಗ್ಯ ಚುಚುಂಬಾತೀವ ಲೋಲುಪಾ ॥ ೪೧ ॥

ಮೋಕ್ಷಾದಪ್ಯಧಿಕಂ ಸೌಖ್ಯಂ ವೃಂದಾಮೋಹನಸಂಭವಂ ।
ಮೇನೇ ನಾರಾಯಣೋ ದೇವೋ ಲಕ್ಷ್ಮೀ ಪ್ರೇಮರಸಾಧಿಕಂ ॥ ೪೨ ॥

ವೃಂದಾ ವಿಯೋಗಜಂ ದುಃಖಂ ವಿನೋದಯತಿ ಮಾಧವೇ ।
ತತ್ಕ್ರೀಡಾ ಚಾರುವಿಲಸದ್ವಾಪಿಕಾ ರಾಜಹಂಸಕೇ ॥ ೪೩ ॥

ತದ್ರೂಪಭಾವಾತ್ಕೃಷ್ಣೋಽಸೌ ಪದ್ಮಾಯಾಂ ವಿಗತಸ್ಪೃಹಃ ।
ಅಭೂದ್ವೃಂದಾವನೇ ತಸ್ಮಿಂಸ್ತುಲಸೀ ರೂಪಧಾರಿಣೀ ॥ ೪೪ ॥

ವೃಂದಾಂಗ ಸ್ವೇದತೋ ಭೂಮ್ಯಾಂ ಪ್ರಾದುರ್ಭೂತಾತಿಪಾವನೀ ।
ವೃಂದಾಂಗಸಂಗಜಂ ಸ್ವೇದಮನುಭೂಯ ಸುಖಂ ಹರಿಃ ॥ ೪೫ ॥

---

೪೧. ಈ ರೀತಿಯಾಗಿ ಸರ್ವಭೋಗಗಳನ್ನೂ ಹೊಂದಿರುವ ಆ ವೃಂದೆಯು ಆ ಗಂಡನನ್ನು ಬಿಗಿಯಾಗಿ ಅಪ್ಪಿಕೊಂಡು ರತಿಸುಖದಲ್ಲಿ ಆಸೆಯುಳ್ಳವಳಾಗಿ ಆತನನ್ನು ಚುಂಬಿಸಿದಳು. (ಮುತ್ತಿಕ್ಕಿದಳು)

೪೨. ಈ ರೀತಿಯಾಗಿ ಹರಿಯು ಜಲಂಧರ ವೇಷವನ್ನು ಹಾಕಿ ಆ ವೃಂದೆಯಲ್ಲಿ ಸುಖಿಸುತ್ತಿರಲು ಆಕೆಯ ಮೋಹದಿಂದ ಉಂಟಾದ (ಸುರತ) ಸೌಖ್ಯವು ಮೋಕ್ಷದ ಸುಖಕ್ಕಿಂತಲೂ ಹೆಚ್ಚಿನದಾಗಿದ್ದಿತು. ಮತ್ತು ಆ ಸೌಖ್ಯವು ಲಕ್ಷ್ಮಿಯ ಪ್ರೀತಿಯ ಸೌಖ್ಯಕ್ಕಿಂತಲೂ ಹೆಚ್ಚಿನದೂ ಆಗಿದ್ದಿತು.

೪೩–೪೪. ಈ ರೀತಿಯಾಗಿ ವಿಷ್ಣುವು ವೃಂದೆಯ ಕ್ರೀಡೆಯೆಂಬ ಕೊಳದಲ್ಲಿ ಓಡಾಡಿಕೊಂಡು ಸುಖಿಸುವ ರಾಜಹಂಸ ಪಕ್ಷಿಯಾಗಿ ಆಕೆಯ ವಿರಹದುಃಖವನ್ನು ನಾಶಮಾಡಿ ಸುಖವಾಗಿದ್ದು ಆಕೆಯ ರೂಪಲಾವಣ್ಯಗಳಿಂದ ಮೋಹಿತನಾಗಿ ಲಕ್ಷ್ಮಿಯಲ್ಲಿನ ಮೋಹವನ್ನೂ ಕೂಡಾ ಬಿಟ್ಟುಬಿಟ್ಟನು. ಆ ವೃಂದೆಯು ಕೂಡಾ ಆ ವನದಲ್ಲಿ ತುಳಸಿಯ ರೂಪವನ್ನು ಹೊಂದಿ ಇದ್ದಳು.

೪೫–೪೭. ವೃಂದೆಯ ಆ ಬೆವರಿನಿಂದ ಭೂಮಿಯಲ್ಲಿ ಈ ತುಳಸಿ ಹುಟ್ಟಿ ಅದೇ ವೃಂದೆಯ ರೂಪವಾಯಿತು. ಎಲ್ಲರಿಗೂ ಅತ್ಯಂತ ಪಾವನವಸ್ತುವಾಗಿದೆ.

ದಿನಾನಿ ಕತಿಚಿನ್ಮೇನೇ ಶಿವಕಾರ್ಯಂ ಜಗತ್ಪತಿಃ ।
ಏಕದಾ ಸುರತಸ್ಥಾನೇ ಸ್ವಾಂಸಕಂಠೇ ಜಗತ್ಪತಿಂ　　|| ೪೬ ||

ವೃಂದಾ ದದರ್ಶ ಸಂಲಗ್ನಂ ದ್ವಿಭುಜಂ ಪುರುಷೋತ್ತಮಂ ।
ತಂ ದೃಷ್ಟ್ವಾ ಪ್ರಾಹ ಸಾ ಕಂಠಾದ್ವಿಮುಚ್ಯ ಭುಜಬಂಧನಂ　　|| ೪೭ ||

|| ವೃಂದೋವಾಚ ||

ಕಥಂ ತಾಪಸರೂಪೇಣ ತ್ವಂ ಮಾಂ ಮೋಹಿತುಮಾಗತಃ　　|| ೪೮ ||

|| ನಾರದ ಉವಾಚ ||

ನಿಶಮ್ಯವಚನಂ ತಸ್ಯಾಃ ಸಾಂತ್ವಯನ್ ಪ್ರಾಹ ತಾಂ ಹರಿಃ　　|| ೪೯ ||

|| ಹರಿರುವಾಚ ||

ಶೃಣು ವೃಂದಾರಿಕೇ ತ್ವಂ ಮಾಂ ವಿದ್ಧಿ ಲಕ್ಷ್ಮೀಮನೋಹರಂ ।
ತವ ಭರ್ತಾ ಹರಂ ಜೇತುಂ ಗೌರೀಮಾನಯಿತುಂ ಗತಃ　　|| ೫೦ ||

---

ಈ ರೀತಿಯಾಗಿ ವೃಂದೆಯ ಸಂಗವನ್ನು ಹರಿಯು ಶಿವನ ಕಾರ್ಯಕ್ಕೋಸ್ಕರ ಅನುಭವಿಸುತ್ತಾ ಕೆಲವು ದಿನಗಳನ್ನು ಕಳೆದು ಆ ಶಿವನ ಕೆಲಸವನ್ನು ಆಗು ಮಾಡಿದನು. ಹೀಗೆ ಸುರತ ಸುಖದಲ್ಲಿ ಕಾಲವನ್ನು ಕಳೆಯುತ್ತಾ ಇರಲು ಒಂದು ದಿನ ಕುತ್ತಿಗೆಯನ್ನು ಅಪ್ಪಿಕೊಂಡಿರುವಾಗ ವೃಂದೆಯು ಆ ಜಗತ್ಪತಿಯಾದ ವಿಷ್ಣುವಿನ ಕತ್ತಿನಲ್ಲಿ ಶ್ರೀವತ್ಸವೆಂಬ ಮಚ್ಚೆಯನ್ನು ನೋಡಿದಳು. ಒಡನೆಯೇ ಕೈಗಳನ್ನು ತೆಗೆದುಕೊಂಡು ಈತನು ಎರಡು ಕೈಗಳನ್ನು ಹೊಂದಿ ಮಾಯೆಯಿಂದ ರಮಿಸುತ್ತಿರುವ ವಿಷ್ಣುವೆಂದು ತಿಳಿದಳು. ಆಗ ಅವನನ್ನು ಕುರಿತು ಇಂತೆಂದಳು.

೪೮. ವೃಂದೆಯು ಹೇಳಿದಳು– ಎಲೈ ವಿಷ್ಣುವೇ ! ನೀನು ತಪಸ್ವಿಯ ರೂಪದಿಂದ ನನ್ನನ್ನು ವಂಚಿಸಿ ರಮಿಸುವುದಕ್ಕೆ ಬರಲು ಕಾರಣವೇನು ?

೪೯. ನಾರದನು ಹೇಳಿದನು– ವೃಂದೆಯ ಆ ಮಾತನ್ನು ಕೇಳಿ ಆಕೆಯನ್ನು ಸಮಾಧಾನಪಡಿಸುತ್ತಾ ಹರಿಯು ಇಂತೆಂದನು.

೫೦. ಹರಿಯು ಹೇಳಿದನು–ಎಲೈ ವೃಂದಾರಿಕೆಯೇ ! ಕೇಳು. ನಾನು ಲಕ್ಷ್ಮೀರಮಣನೆಂದು ತಿಳಿ. ನಿನ್ನ ಗಂಡನು ಹರನನ್ನು ಜಯಿಸಿ ಗೌರಿಯನ್ನು ತೆಗೆದುಕೊಂಡು ಬರಲು ಹೋಗಿರುವನು.

ಅಹಂ ಶಿವಃ ಶಿವಶ್ಚಾಹಂ ಪೃಥಕ್ತ್ವೇನ ವ್ಯವಸ್ಥಿತೌ ।
ಜಾಲಂಧರೋ ಹತಸ್ಸಂಖ್ಯೇ ಭಜ ಮಾಮಧುನಾನಘೇ ॥ ೫೧ ॥

॥ ನಾರದ ಉವಾಚ ॥

ಇತಿ ವಿಷ್ಣೋರ್ವಚಶ್ಶ್ರುತ್ವಾ ವಿಷಣ್ಣವದನಾಭವತ್ ।
ತತೋ ವೃಂದಾರಿಕಾ ರಾಜನ್ ಕುಪಿತಾ ಪ್ರತ್ಯುವಾಚ ಹ ॥ ೫೨ ॥

॥ ವೃಂದೋವಾಚ ॥

ರಣೇ ಬದ್ಧೋಽಸಿ ಯೇನ ತ್ವಂ ಜೀವನ್ಮುಕ್ತಃ ಪಿತುರ್ಗಿರಾ ।
ವಿವಿಧೈಃ ಸತ್ಕೃತೋ ರತ್ನೈರ್ಯುಕ್ತಂ ತಸ್ಯ ಹೃತಾ ವಧೂಃ ॥ ೫೩ ॥

ಪತಿಧರ್ಮಸ್ಯ ಯೋ ನಿತ್ಯಂ ಪರದಾರರತಃ ಕಥಂ ।
ಈಶ್ವರೋಽಪಿ ಕೃತಂ ಭುಂಕ್ತೇ ಕರ್ಮೇತ್ಯಾಹುರ್ಮನೀಷಿಣಃ ॥ ೫೪ ॥

---

೫೧- ಎಲೈ ವೃಂದೆಯೇ ! ನಾನೇ ಶಿವನು. ಶಿವನೇ ನಾನು. ಆದರೆ ದೇಹಮಾತ್ರ ಬೇರೆ ಬೇರೆಯಾಗಿ ಇದ್ದೇವೆ. ನಿನ್ನ ಗಂಡನಾದ ಜಲಂಧರನನ್ನು ಯುದ್ಧದಲ್ಲಿ ಶಿವನು ಕೊಂದನು. ಇನ್ನು ಮೇಲೆ ನೀನು ನನ್ನನ್ನು ರಮಿಸುತ್ತಾ ಸುಖವಾಗಿರು.

೫೨. ನಾರದನು ಹೇಳಿದನು– ವೃಂದೆಯು ವಿಷ್ಣುವಿನ ಈ ಮಾತನ್ನು ಕೇಳಿ ದುಃಖದಿಂದ ಕಂಗೆಟ್ಟಳು. ಅನಂತರ ಈ ವಿಷ್ಣುವಿನ ಕೆಟ್ಟ ಕೆಲಸದಿಂದ ಕೋಪಗೊಂಡು ಇಂತೆಂದಳು.

೫೩- ವೃಂದೆಯು ಹೇಳಿದಳು– ಎಲೈ ವಿಷ್ಣುವೇ ! ಯುದ್ಧದಲ್ಲಿ ಆ ಜಲಂಧರನು ನಿನ್ನನ್ನು ಜಯಿಸಿ ಸೆರೆಹಿಡಿದನು. ಆಗ ಆ ಜಲಂಧರನ ತಂದೆಯಾದ ಸಮುದ್ರರಾಜನು ಅಳಿಯನೆಂದು ನಿನ್ನನ್ನು ಬಿಡಿಸಿದನು. ಆಗ ನೀನು ಬದುಕಿಕೊಂಡು ಹೋದೆ. ಆಗಲೂ ಕೂಡ ಆ ಜಲಂಧರನು ಭಾವನೆಂದು ತಿಳಿದು ನಿನ್ನನ್ನು ಅವಮಾನಿಸದೆ ಅನೇಕ ರತ್ನಗಳನ್ನು ಕೊಟ್ಟು ಗೌರವಿಸಿದನು. ಅಂತಹವನ ಹೆಂಡತಿಯನ್ನು ನೀನು ಹೀಗೆ ಅಪಹರಿಸಬಹುದೇ ?

೫೪. ನೀನು ಧರ್ಮಕ್ಕೆಲ್ಲಾ ಒಡೆಯನು. ಇಂತಹ ನೀನೇ ಪರಸ್ತ್ರೀಯಲ್ಲಿ ಆಸಕ್ತನಾಗಬಹುದೇ ? ಈಶ್ವರನೂ ಕೂಡಾ ತಾನು ಮಾಡಿದ ಕೆಟ್ಟಕೆಲಸಗಳಿಗೆ ಫಲವನ್ನು ಹೊಂದಿಯೇ ಹೊಂದುವನೆಂದು ತಿಳಿದವರು ಹೇಳುತ್ತಾರೆ.

ಅಹಂ ಮೋಹಂ ಯಥಾ ನೀತಾ ತ್ವಯಾ ಮಾಯಾ ತಪಸ್ವಿನಾ ।
ತಥಾ ತವ ವಧೂಂ ಮಾಯಾತಪಸ್ವೀ ಕೋಽಪಿ ನೇಷ್ಯತಿ ॥ ೫೫ ॥

॥ ನಾರದ ಉವಾಚ ॥

ಇತಿ ಶಪ್ತಸ್ತಯಾ ವಿಷ್ಣುಃ ಜಗಾಮಾದೃಶ್ಯತಾಂ ಕ್ಷಣಾತ್ ।
ಸಾ ಚಿತ್ರಶಾಲಾ ಪರ್ಯಂಕಃ ಸ ಚ ತೇಽಥ ಪ್ಲವಂಗಮಾಃ ॥ ೫೬ ॥

ನಷ್ಟಂ ಸರ್ವಂ ಹರೌ ಯಾತಿ ವನಂ ಶೂನ್ಯಂ ವಿಲೋಕ್ಯ ಸಾ ।
ತದಾ ಪ್ರಾಹ ಸಖೀಂ ಪಶ್ಯ ಜಿಹ್ಮಂ ತದ್ವಿಷ್ಣುನಾ ಕೃತಂ ॥ ೫೭ ॥

ತ್ಯಕ್ತಂ ಪುರಂ ಗತಂ ರಾಜ್ಯಂ ಕಾಂತಃ ಸಂದೇಹತಾಂ ಗತಃ ।
ಅಹಂ ವನೇ ವಿದಿತ್ವೈತತ್ಕ್ವ ಯಾಮಿ ವಿಧಿನಿರ್ಮಿತಾ ॥ ೫೮ ॥

ಮನೋರಥಾನಾಂ ವಿಷಯಮಭೂನ್ಮೇ ಪ್ರಿಯದರ್ಶನಂ ।
ಪ್ರಾಹ ನಿಶ್ವಸ್ಯ ಚೈವಾಳಿಂ ರಾಜ್ಞೀ ವೃಂದಾತಿದುಃಖಿತಾ ॥ ೫೯ ॥

---

೫೫. ಮಾಯೆಯಿಂದ ಋಷಿವೇಷವನ್ನು ಹಾಕಿಕೊಂಡು ಬಂದು ನೀನು ನನ್ನನ್ನು ಹೇಗೆ ಅಪಹರಿಸಿದೆಯೋ ಹಾಗೆಯೇ ಒಬ್ಬ ಮಾಯಾತಪಸ್ವಿಯು ನಿನ್ನ ಹೆಂಡತಿಯನ್ನು ಅಪಹರಿಸಿಕೊಂಡು ಹೋಗಲಿ.

೫೬–೫೭. ನಾರದನು ಹೇಳಿದನು– ಆ ವೃಂದೆಯು ಹೀಗೆ ಶಪಿಸಲು ವಿಷ್ಣುವು ಅಲ್ಲಿಯೇ ಮಾಯವಾದನು. ವಿಷ್ಣುವು ಹೊರಟುಹೋಗಲು ಒಡನೆಯೇ ಆ ಚಿತ್ರಶಾಲೆ, ಮಂಚ, ಅಲ್ಲಿದ್ದ ಕಪಿಗಳೇ ಮುಂತಾದ ಆಶ್ರಮದ ಪ್ರಾಣಿಗಳು, ಆ ಆಶ್ರಮ ಎಲ್ಲವೂ ಮಾಯವಾಯಿತು. ಕೊನೆಗೆ ಒಂದು ನಿರ್ಜನವಾದ ಅರಣ್ಯವು ನಿಂತಿತು. ಆಗ ಆ ವೃಂದೆಯು ಸಖಿಯನ್ನು ಕುರಿತು ಎಲೈ ಸಖಿಯೇ! ವಿಷ್ಣುವು ಮಾಡಿದ ಕಪಟವಿದ್ಯೆಯನ್ನು ನೋಡಿದೆಯಾ ?

೫೮-೫೯. ಎಲೈ ಸಖಿಯೇ ! ಊರನ್ನು ಬಿಟ್ಟೆನು. ರಾಜ್ಯವು ಹೋಯಿತು. ಗಂಡನು ಬದುಕಿರುವನೋ ಇಲ್ಲವೋ ತಿಳಿಯದು. ನಾನಾದರೋ ಈ ಕಾಡಿನಲ್ಲಿ ಹೀಗೆ ಬಿದ್ದಿರುವೆನು. ಈಗ ಎಲ್ಲಿ ಹೋಗಲಿ ? ದೈವ ವಿಲಾಸವು ಮಾಡಿದುದನ್ನು ನೋಡಿದೆಯಾ ? ಯಾವಾಗಲೂ ನನ್ನ ಮನೋರಥವೆಲ್ಲವೂ ನನ್ನ ಪ್ರಿಯನಾದ ಜಲಂಧರನನ್ನು ನೋಡುವುದೇ ಆಗಿದ್ದಿತು. ಎಂಬುದಾಗಿ ರಾಣಿಯಾದ ಆ ವೃಂದೆಯು ಸಖಿಯನ್ನು ಕುರಿತು ಬಹು ದುಃಖದಿಂದ ಹೇಳಿದಳು.

ಮಮ ಪ್ರಾಪ್ತಂ ಹಿ ಮರಣಂ ತ್ವಂ ಯಾಹಿ ಸ್ಮರದೂತಿಕೇ ।
ಇತ್ಯುಕ್ತ್ವಾ ಸಾ ತದಾ ಪ್ರಾಹ ಮಮ ತ್ವಂ ಪ್ರಾಣರೂಪಿಣೀ ॥ ೬೦ ॥

ತಸ್ಯಾಸ್ತಥೋಕ್ತಮಾಕರ್ಣ್ಯ ಇತಿಕರ್ತವ್ಯತಾಂ ತತಃ ।
ವನೇ ನಿಶ್ಚಿತ್ಯ ಸಾ ವೃಂದಾ ಗತ್ವಾ ತತ್ರ ಮಹತ್ಸರಃ ॥ ೬೧ ॥

ವಿಹಾಯ ದುಃಖಮಕರೋದ್ಗಾತ್ರಕ್ಷಾಳನಮಂಬುನಾ ।
ತೀರೇ ಪದ್ಮಾಸನಂ ಬಧ್ವಾ ಕೃತ್ವಾ ನಿರ್ವಿಷಯಂ ಮನಃ ॥ ೬೨ ॥

ಶೋಷಯಾಮಾಸ ದೇಹಂ ಸ್ವಂ ವಿಷ್ಣುಸಂಗೇನದೂಷಿತಂ ।
ತಪಶ್ಚಚಾರ ಸಾತ್ಯುಗ್ರಂ ನಿರಾಹಾರಾ ಸಖೀಸಮಂ ॥ ೬೩ ॥

ಗಂಧರ್ವಲೋಕತೋ ವೃಂದಾಮಥಾಗತ್ಯಾಪ್ಸರೋ ಗಣಃ ।
ಪ್ರಾಹ ಯಾಹೀತಿ ಕಲ್ಯಾಣಿ ಸ್ವರ್ಗಂ ಮಾ ತ್ಯಜ ವಿಗ್ರಹಂ ॥ ೬೪ ॥

---

೬೦. ಎಲೈ ಸ್ಮರದೂತಿಯೇ ! ನನಗೆ ಸಾವೇ ಉತ್ತಮವು. ಅದು ಸಮೀಪಿಸಿದೆ. ನೀನು ಹೊರಟುಹೋಗು. ಎನ್ನಲು ಆ ಸಖಿಯು ಎಲೈ ರಾಣಿಯೇ ! ನೀನು ನನಗೆ ಪ್ರಾಣಸ್ವರೂಪಳು. ಆದುದರಿಂದ ನಾನು ನಿನ್ನನ್ನು ಬಿಟ್ಟು ಹೋಗುವುದಿಲ್ಲ.

೬೧. ಆ ಸಖಿಯು ಹೀಗೆ ಹೇಳಿದುದನ್ನು ಕೇಳಿ ತಾನು ಏನು ಮಾಡಬೇಕೆಂಬುದನ್ನು ನಿರ್ಧರಿಸಿಕೊಂಡು ಆ ವನದಲ್ಲಿ ಹುಡುಕುತ್ತಾ ಅಲ್ಲಿದ್ದ ಒಂದು ಸರೋವರದ ಬಳಿಗೆ ಹೋದಳು.

೬೨-೬೩. ದುಃಖವನ್ನು ಬಿಟ್ಟು ಮೈಯ್ಯನ್ನು ಚೆನ್ನಾಗಿ ತೊಳೆದುಕೊಂಡು ಸ್ನಾನಮಾಡಿದಳು. ಅನಂತರ ಆ ದಡದಲ್ಲಿ ಬಂದು ಪದ್ಮಾಸನವನ್ನು ಹಾಕಿಕೊಂಡು ಮನಸ್ಸನ್ನು ನಿರ್ವಿಷಯ ಸಮಾಧಿಯಲ್ಲಿ ನಿಲ್ಲಿಸಿ ತಪಸ್ಸುಮಾಡಲು ಮೊದಲು ಮಾಡಿದಳು. ಈ ತಪಸ್ಸಿನಿಂದ ವಿಷ್ಣುವಿನಿಂದ ಕೆಡಿಸಲ್ಪಟ್ಟ ಆ ದೇಹವು ಶೋಷಿಸುವಂತೆ ಮಾಡುತ್ತಾ ಆಹಾರವನ್ನು ತೊರೆದು ಸಖಿಯೊಡನೆ ಉಗ್ರವಾದ ತಪಸ್ಸನ್ನು ಮಾಡಿದಳು.

೬೪. ಇದನ್ನು ತಿಳಿದು ಗಂಧರ್ವಲೋಕದಿಂದ ಅಪ್ಸರಸ್ತ್ರೀಯರು ಬಂದು ಎಲೈ ಕಲ್ಯಾಣಿಯೇ ! ಸ್ವರ್ಗಕ್ಕೆ ಹೋಗೋಣ, ನಡೆ, ಈ ದೇಹವನ್ನು ನಾಶ ಮಾಡಿಕೊಳ್ಳಬೇಡ, ಎಂದರು.

**ಗಾಂಧರ್ವಂ ಶಸ್ತ್ರಮೇತತ್ರಿಭುವನವಿಜಯಿ ಶ್ರೀಪತಿಸ್ತೋಷಮುಗ್ರ್ಯಂ**
**ನೀತೋ ಯೇನೇಹ ವೃಂದೇ ತ್ಯಜಸಿ ಕಥಮಿದಂ ತದ್ವಪುಃ ಪ್ರಾಪ್ತಕಾಮಂ!**
**ಕಾಂತಂ ತೇ ವಿದ್ಧಿ ಶೂಲಿಪ್ರವರಶರಹತಂ ಪುಣ್ಯಲಭ್ಯಸ್ಯ ಭೂಷಾ**
**ಸ್ವರ್ಗಸ್ಯ ತ್ವಂ ಭವಾದ್ಯ ದ್ರುತಗತಿ ಚ ವಿಮಾನಂ ಚಂಡಿ ಭದ್ರೇ ಭಜ ತ್ವಂ**
**|| ೬೫ ||**

**ಶ್ರುತ್ವಾ ಶಾಸ್ತ್ರಂ ವಧೂನಾಂ ಜಲಧಿಜದಯಿತಾ ವಾಕ್ಯಮಾಹ ಪ್ರಹಸ್ಯ**
**ಸ್ವರ್ಗಾದಾಹೃತ್ಯ ಮುಕ್ತಾ ತ್ರಿದಶಪತಿ ವಧೂಶ್ಚಾತಿವೀರೇಣ ಪತ್ಯಾ |**
**ಆದೌ ಪಾತ್ರಂ ಸುಖಾನಾಮಹಮಮರ ಜಿತಾ ಪ್ರೇಯಸೀ ತದ್ವಿಯುಕ್ತಾ**
**ನಿರ್ದೂಷ್ಯಾ ತದ್ಗತಿಷ್ಯೇ ಪ್ರಿಯಮಮೃತಗತಂ ಪ್ರಾಪ್ನುಯಾಂ ಯೇನಚೈವ**
**|| ೬೬ ||**

---

೬೫. ಎಲೈ ವೃಂದೆಯೇ! ನಿನ್ನ ಶರೀರವು ಮನ್ಮಥನಿಗೆ ಮೂರು ಲೋಕವನ್ನೂ ಜಯಿಸತಕ್ಕ ಶಸ್ತ್ರವು. ಒಳ್ಳೆಯ ಗಂಧರ್ವರ ಸಂಗೀತವಿದ್ಯೆಯಿಂದ ಕೂಡಿರುವುದು. ಶ್ರೀಪತಿಯಾದ ವಿಷ್ಣುವಿಗೆ ಸಂತೋಷವನ್ನುಂಟುಮಾಡುವುದರಲ್ಲಿ ಎಲ್ಲವಕ್ಕಿಂತಲೂ ಮೊದಲನೆಯದಾಗಿದೆ. ಕೇಳಿದುವೆಲ್ಲವೂ ಸಿಕ್ಕುತ್ತವೆ. ಇಂತಹ ಈ ಶರೀರವನ್ನು ನೀನೇಕೆ ಬಿಡುತ್ತೀಯೆ? ಎಲೈ ಪುಣ್ಯವಂತಳೇ! ನಿನ್ನ ಗಂಡನನ್ನು ಶಿವನು ಶರಗಳಿಂದ ಹೊಡೆದು ಕೊಂದನು. ಸ್ವರ್ಗಕ್ಕೆ ಕರೆದುಕೊಂಡು ಹೋಗಲು ಈ ವಿಮಾನವು ಬಂದಿರುತ್ತದೆ. ನೀನು ವ್ಯರ್ಥವಾಗಿ ಹಟವನ್ನು ಮಾಡದೆ ಈ ವಿಮಾನವನ್ನು ಹತ್ತು ಎಂದರು.

೬೬. ಅಪ್ಸರ ಸ್ತ್ರೀಯರ ಈ ಶಾಸ್ತ್ರಾನುಸಾರವಾದ ಮಾತನ್ನು ಆ ಜಲಂಧರನ ಹೆಂಡತಿಯು ಕೇಳಿ ನಗುತ್ತಾ "ಎಲೈ ಸುಂದರಿಯರೇ! ನೀವು ಕರೆಯುವ ಸ್ವರ್ಗದಿಂದಲೇ ಅತಿ ವೀರನಾದ ನನ್ನ ಗಂಡನು ಸ್ವರ್ಗಾಧಿಪತಿಯಾದ ದೇವೇಂದ್ರನ ಹೆಂಡತಿಯನ್ನು ಇಲ್ಲಿಗೆ ಎಳೆದುಕೊಂಡು ತಂದಿದ್ದು ಅನಂತರ ಬಿಟ್ಟುಬಿಟ್ಟನು. ದೇವತೆಗಳನ್ನು ಜಯಿಸಿದ ಆ ಜಲಂಧರನಿಂದ ಮೊದಲು ಉತ್ತಮೋತ್ತಮವಾದ ಸುಖಗಳನ್ನು ಹೊಂದಿ ಈಗ ಅವನನ್ನು ಬಿಟ್ಟು ಹೇಗಿರಲಿ? ನಾನೂ ಕೂಡ ತಪಸ್ಸಿನಿಂದಲೇ ಪಾಪಗಳನ್ನು ಕಳೆದುಕೊಂಡು ಉತ್ತಮಲೋಕವನ್ನು ಹೊಂದಿರುವ ಆ ಪ್ರಿಯನನ್ನು ಹೊಂದಲು ಯತ್ನಿಸುತ್ತೇನೆ." ಎಂದಳು.

ಇತ್ಯುಕ್ತ್ವಾ ಸಸಖೀ ವೃಂದಾ ವಿಸಸರ್ಜಾಪ್ಸರೋ ಗಣಾನ್ ।
ತತ್ಪ್ರೀತಿ ಪಾಶಬದ್ಧಾಸ್ತೇ ನಿತ್ಯಮಾಯಾಂತಿ ಯಾಂತಿ ಚ ॥ ೬೭ ॥

ಯೋಗಾಭ್ಯಾಸೇನ ವೃಂದಾಥ ದಗ್ಧ್ವಾ ಜ್ಞಾನಾಗ್ನಿನಾ ಗುಣಾನ್ ।
ವಿಷಯೇಭ್ಯಸ್ಸಮಾಹೃತ್ಯ ಮನಃ ಪ್ರಾಪ ತತಃ ಪರಂ ॥ ೬೮ ॥

ದೃಷ್ಟ್ವಾ ವೃಂದಾರಿಕಾಂ ತತ್ರ ಮಹಾಂತಶ್ಚಾಪ್ಸರೋಗಣಾಃ ।
ತುಷ್ಟುವುರ್ನಭಸಸ್ತುಷ್ಟಾ ವವೃಷುಃ ಪುಷ್ಪವೃಷ್ಟಿಭಿಃ ॥ ೬೯ ॥

ಶುಷ್ಕಕಾಷ್ಠಚಯಂ ಕೃತ್ವಾ ತತ್ರ ವೃಂದಾ ಕಳೇಬರಂ ।
ವಿಧಾಯಾಗ್ನಿಂ ಚ ಪ್ರಜ್ವಾಲ್ಯ ಸ್ಮರದೂತಿರ್ವಿವೇಶ ತಂ ॥ ೭೦ ॥

ದಗ್ಧವೃಂದಾಂಗರಜಸಾ ಬಿಂಬವದ್ಗೋಲಕಾಭಕಂ ।
ಕೃತ್ವಾ ತದ್ಭಸ್ಮನಃ ಶೇಷಂ ಮಂದಾಕಿನ್ಯಾಂ ವಿಚಿಕ್ಷಿಪುಃ ॥ ೭೧ ॥

---

೬೭. ವೃಂದೆಯು ಈ ರೀತಿ ಉತ್ತರಕೊಟ್ಟು ಅವರೆಲ್ಲರನ್ನೂ ಕಳುಹಿಸಿಬಿಟ್ಟಳು. ಆದರೆ ಅಪ್ಸರಸ್ತ್ರೀಯರು ಆಕೆಯಲ್ಲಿನ ಪ್ರೀತಿಯಿಂದ ಪ್ರತಿದಿನವೂ ಬಂದು ಹೋಗುತ್ತಿದ್ದರು.

೬೮. ಈ ವೃಂದೆಯು ಯೋಗಾಭ್ಯಾಸಮಾಡುತ್ತಾ ಜ್ಞಾನವೆಂಬ ಅಗ್ನಿಯಿಂದ ಪ್ರಾಕೃತವಾದ ಗುಣಗಳನ್ನು ಸುಟ್ಟು ಮನಸ್ಸನ್ನು ವಿಷಯಗಳಲ್ಲಿ ಪ್ರಸರಿಸದಂತೆ ಸ್ವಾಧೀನದಲ್ಲಿಟ್ಟುಕೊಂಡು ತಪಸ್ಸಿನ ಪರಾಕಾಷ್ಠತೆಯನ್ನು ಹೊಂದಿದಳು. ಮತ್ತು ಅದೇ ರೀತಿಯಲ್ಲಿ ಪರಮಾತ್ಮನಲ್ಲಿ ಐಕ್ಯಳಾದಳು. (ಯೋಗದಿಂದ ಪ್ರಾಣವನ್ನು ತ್ಯಜಿಸಿದಳು.)

೬೯–೭೦. ಈ ರೀತಿಯಾದ ವೃಂದೆಯನ್ನು ನೋಡಿ ಅಪ್ಸರಸ್ತ್ರೀಯರು ಬಹುವಾಗಿ ಸ್ತೋತ್ರಮಾಡಿದರು. ದೇವತೆಗಳು ಸಂತೋಷದಿಂದ ಮೇಲಿನಿಂದ ಹೂಮಳೆಯನ್ನು ಸುರಿಸಿದರು. ಅನಂತರ ಸ್ಮರದೂತಿಯು ಒಣಗಿದ ಸೌದೆಗಳನ್ನು ಕೂಡಿಸಿ ಚಿತೆಯನ್ನು ಮಾಡಿ ಅದರ ಮೇಲೆ ಆ ವೃಂದೆಯ ಶರೀರವನ್ನಿಟ್ಟು ಬೆಂಕಿಯನ್ನು ಹತ್ತಿಸಿ ತಾನೂ ಅದರಲ್ಲಿ ಪ್ರವೇಶಮಾಡಿದಳು.

೭೧. ಆಗ ಅಲ್ಲಿದ್ದವರು ಸುಟ್ಟುಹೋದ ಆ ವೃಂದೆಯ ದೇಹದ ಬೂದಿಯನ್ನು ಒಂದು ಗೋಲಿಯಂತೆ ಉಂಡೆಕಟ್ಟಿ ಉಳಿದ ಬೂದಿಯನ್ನು ಮಂದಾಕಿನಿಯಲ್ಲಿ ಹಾಕಿಬಿಟ್ಟರು.

ಯತ್ರ ವೃಂದಾ ಪರಿತ್ಯಜ್ಯ ದೇಹಂ ಬ್ರಹ್ಮಪಥಂ ಗತಾ ।
ಆಸೀದ್ವೃಂದಾವನಂ ತತ್ರ ಗೋವರ್ಧನ ಸಮೀಪತಃ || ೭೨ ||

ದೇವ್ಯೋಽಥ ಸ್ವರ್ಗಮೇತ್ಯ ತ್ರಿದಶಪತಿ ವಧೂಸತ್ವಸಂಪತ್ತಿಮಾಹು
ರ್ದೇವೀಭ್ಯ ಸ್ತನ್ನಿಶಮ್ಯ ಪ್ರಮುದಿತಮನಸೋರ್ನಿರ್ಜರಾದ್ಯಾಶ್ಚ ಸರ್ವೇ ।
ಶತ್ರೋಃ ಪ್ರತ್ಯಸ್ಯ ಕಸ್ಯ ಪ್ರಬಲತರ ಭಯಂ ಭೀಮಭೇರೀರ್ನಿಜಘ್ನುಃ
ಶ್ರುತ್ವಾತತ್ರಾ ಸನಸ್ಥಃ ಪರಿಜನ ನಿವಹೋ ನಾಮ ಶುಂಭಾಶುಭಸ್ಯ ||೭೩||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ವೃಂದಾಯಾಃ ಬ್ರಹ್ಮಪದ ಪ್ರಾಪ್ತಿರ್ನಾಮ ಷೋಡಶೋಽಧ್ಯಾಯಃ

---

೭೨. ಯಾವ ಜಾಗದಲ್ಲಿ ವೃಂದೆಯು ದೇಹವನ್ನು ಬಿಟ್ಟು ಬ್ರಹ್ಮಲೋಕವನ್ನು ಹೋದಿದಳೋ ಆ ಗೋವರ್ಧನ ಪರ್ವತದ ಸಮೀಪದಲ್ಲಿಯೇ ಅಲ್ಲಿ ವೃಂದಾವನವೆನ್ನಿಸಿಕೊಂಡಿತು.

೭೩. ಅನಂತರ ಈ ಅಪ್ಸರಸ್ತ್ರೀಯರು ಸ್ವರ್ಗಕ್ಕೆ ಹೋಗಿ ದೇವತೆಗಳ ಒಡೆಯನಾದ ಇಂದ್ರನ ಹೆಂಡತಿಯಾದ ಶಚೀದೇವಿಯ ಶಕ್ತಿಯನ್ನು ಕೊಂಡಾಡಲು ಮೊದಲು ಮಾಡಿದರು. ಮತ್ತು ಆ ಅಪ್ಸರಸ್ತ್ರೀಯರಿಂದ ಇದನ್ನು ದೇವತೆಗಳು ಕೇಳಿ ಸಂತೋಷಗೊಂಡರು. ಆಗ ಪ್ರಬಲತರನಾದ ಜಲಂಧರನ ಹೆದರಿಕೆಯನ್ನು ಬಿಟ್ಟು ದೇವ ದುಂದುಭಿಗಳನ್ನು ಬಡಿದರು. ಈ ಸೈನ್ಯದ ಭಾರವೆಲ್ಲವನ್ನೂ ವಹಿಸಿಕೊಂಡಿದ್ದ ಆ ಶುಂಭಾಸುರನು ಆಸನವಲ್ಲಿ ಕುಳಿತು ಆ ಭೇರಿಯ ಧ್ವನಿಯನ್ನು ಕೇಳಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ವೃಂದೆಯ ಬ್ರಹ್ಮಪದಪ್ರಾಪ್ತಿ ಎಂಬ ಹದಿನಾರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಸಪ್ತದಶೋಽಧ್ಯಾಯಃ ॥



॥ ಯುಧಿಷ್ಠಿರ ಉವಾಚ ॥

ಕಥಂ ಜಾಲಂಧರೋ ಗೌರೀಂ ಹರರೂಪಧರೋ ಮುನೇ ।
ದೃಷ್ಟ್ವಾ ಚಕಾರ ಕಿಂ ತತ್ರ ತನ್ಮೇ ಕಥಯ ವಿಸ್ತರಾತ್ ॥ ೧ ॥

॥ ನಾರದ ಉವಾಚ ॥

ಯದಾ ಮಾಯಾ ಶಿವಸ್ತತ್ರ ಪ್ರಾರ್ಥಯದ್ಗಿರಿಜಾಂ ಪ್ರತಿ ।
ತತಃ ಸಾ ಚುಕ್ಷುಭೇ ರಾಜನ್ ಕಿಂಚಿನ್ನೋವಾಚ ತಂ ಪ್ರತಿ ॥ ೨ ॥

ಅನಾತುರಸ್ಯ ದೇವಸ್ಯ ಪ್ರಾಪ್ತಸ್ಯ ತಪಸಾ ಮಯಾ ।
ನ ಯುಕ್ತಮಿತಿ ನಿಶ್ಚಿತ್ಯ ಪಾರ್ವತೀ ನಾಹ ತಂ ಪ್ರತಿ ॥ ೩ ॥

---

### ಹದಿನೇಳನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು– ಎಲೈ ನಾರದನೇ ! ಶಿವನ ರೂಪವನ್ನು ಧರಿಸಿದ್ದ ಆ ಜಲಂಧರನು ಗೌರಿಯನ್ನು ನೋಡಿ ಏನು ಮಾಡಿದನು? ಎಂಬುದನ್ನು ವಿಸ್ತಾರವಾಗಿ ಹೇಳು.

೨. ನಾರದನು ಹೇಳಿದನು- ಕಪಟ ಶಿವನು ಗಿರಿಜೆಯನ್ನು ರತಿಸುಖಕ್ಕೆ ಪ್ರಾರ್ಥಿಸಲು ಆಕೆಯು ಮನಸ್ಸಿನಲ್ಲಿ ಬಹುದುಃಖಪಟ್ಟಳು. ಅದಕ್ಕೆ ಬದಲಾಗಿ ಏನನ್ನೂ ಹೇಳಲಿಲ್ಲ.

೩. ಈ ದೇವನು ಪ್ರಾಕೃತರಂತಿರುವುದಿಲ್ಲವೆಂದು ತಿಳಿದು ತಪಸ್ಸನ್ನು ಮಾಡಿ ಹೊಂದಿದ್ದೇನೆ. ಇದು ಇವನಿಗೆ ಯೋಗ್ಯವಾದುದಲ್ಲ, ಎಂದು ತಿಳಿದು ಅವನಿಗೆ ಏನನ್ನೂ ಹೇಳಲಿಲ್ಲ.

ಸಾ ನ ತತ್ರ ಪ್ರತೀಕಾರಂ ದೃಷ್ಟ್ವಾ ತಸ್ಯ ಚ ಪಶ್ಯತಃ ।
ನಿರ್ಗತಾ ತತ ಉತ್ಥಾಯ ದದರ್ಶಾಕಾಶವಾಹಿನೀಂ ॥ ೪ ॥

ಗಂಗಾಂ ವಾಸೋಚಿತಾಂ ಮತ್ವಾ ಭವಾನೀ ತಪಸೇ ಯಯೌ ।
ಪುರಾಪಿ ತಪಸಾ ಲಬ್ಧೋ ಮಯೇಶಸ್ಸಾಂಪ್ರತಂ ತಥಾ ॥ ೫ ॥

ಇತ್ಯಪ್ರಜಚ್ಚಿಂತಯಂತೀ ಸಖೀಭಿಃ ಸಹಿತಾ ತತಃ ।
ಪುರಃ ಕ್ಷೀರನಿಭಾಂ ಕಾಜನ್ ಪಾರ್ವತೀ ಗಗತಾತ್ಪರಂ ॥ ೬ ॥

ಮಂದಾಕಿನೀಂ ದದರ್ಶಾಥ ಪತಂತೀಂ ಮಾನಸೋತ್ತರೇ ।
ಹಾರಮಾಲಾಮಿವಾಯಾಂತೀಂ ವಿವಿಕ್ತಾಂ ಗಗನಸ್ರುಜಃ ॥ ೭ ॥

ಮಂದಾಕಿನ್ಯಾಃ ಪಯಃ ಪೂರೋ ಹ್ಯಾಕೃಷ್ಟಃ ಸ್ವರ್ಗತೋ ಯಥಾ ।
ಸ್ರುತೀನಾಂ ಪೂರಧಾರೇವ ಬ್ರಹ್ಮಣೋ ವದನಚ್ಯುತಾ ॥ ೮ ॥

---

೪. ಆ ಕಪಟ ಶಿವನು ಇವಳನ್ನೇ ನೋಡುತ್ತಿರಲು ಆತನ ಕಾರ್ಯಕ್ಕೆ ಯಾವ ವಿಧದಲ್ಲಿಯೂ ಪ್ರತಿಯಾಗಿ ಆಚರಿಸಲು ತಿಳಿಯದೆ ಇಲ್ಲಿಂದ ಹೊರಟು ಹೋಗುವುದೇ ಉತ್ತಮವೆಂದು ತಿಳಿದು ಅಲ್ಲಿಂದ ಎದ್ದು ಹೋಗುತ್ತಾ ದಾರಿಯಲ್ಲಿ ಆಕಾಶವಾಹಿನಿಯಾದ ಗಂಗೆಯನ್ನು ಕಂಡಳು.

೫. ಗಂಗೆಯ ದಡವು ತಾನು ಇರುವುದಕ್ಕೆ ಸರಿಯಾದ ಸ್ಥಳವೆಂದೂ ಅಲ್ಲಿದ್ದು ತಪಸ್ಸನ್ನು ಮಾಡಿ ಹಿಂದೆ ತಪಸ್ಸಿನಿಂದ ಆತನನ್ನು ಹೊಂದಿದಂತೆ ಈಗಲೂ ಹೊಂದಬೇಕೆಂದೂ ಯೋಚಿಸಿದಳು.

೬–೭. ಹೀಗೆಂದು ಯೋಚಿಸಿ ಸಖಿಯೊಡನೆ ಅಲ್ಲಿಂದ ಹೊರಟಳು. ಎದುರಿಗೇನೇ ಆಕಾಶವೆಂಬ ಹೂದಂಡೆಯಿಂದ ಒಂಟಿಯಾಗಿ ನೇತಾಡುತ್ತಾ ಬೀಳುತ್ತಿರುವ ಒಂಟಿಹಾರದಂತೆ ಮಾನಸೋತ್ತರ ಪರ್ವತದಲ್ಲಿ ಬೀಳುತ್ತಿರುವ ಹಾಲಿನಂತಿರುವ ಗಂಗಾನದಿಯನ್ನು ನೋಡಿದಳು.

೮. ಮೇಲಿನಿಂದ ಬೀಳುತ್ತಿರುವ ಈ ಮಂದಾಕಿನಿಯ ಪ್ರವಾಹವು ಸ್ವರ್ಗದಿಂದ ಎಳೆಯಲ್ಪಟ್ಟಿದ್ದಾಗಿ ಬೀಳುತ್ತಿದ್ದಿತು. ಇದನ್ನು ನೋಡಿದರೆ ಬ್ರಹ್ಮನ ಬಾಯಿಂದ ಹೊರಕ್ಕೆ ಬೀಳುತ್ತಿರುವ ಶ್ರುತಿಗಳ ಪ್ರವಾಹದಂತಿದ್ದಿತ್ತು.

ದೃಷ್ಟ್ವಾನುಮುದಿತಾ ಗಂಗಾಂ ಸ್ನಾತ್ವಾ ಚಾಳಿ ಸಮನ್ವಿತಾ ।
ಸಂಪೂಜ್ಯ ಸ್ವತನುಂ ಪಶ್ಚಾನ್ನಿವಿಷ್ಟಾ ಸ್ವರ್ಣದೀತಟೇ ॥
ಪರಸ್ಪರಮಥಾಲೋಕ್ಯ ಗೌರೀ ಪ್ರಾಹ ಸಖೀಂ ಜಯಾಂ ॥ ೯ ॥

॥ ಗೌರ್ಯುವಾಚ ॥

ತ್ವಂ ಗಚ್ಛ ಮದ್ವಪುಃ ಕೃತ್ವಾ ತತ್ಸಮೀಪಂ ಸಖಿ ಶೃಣು ।
ಜಾನೀಹಿ ತತ್ವಂ ಕಿಂ ಶಂಭುಃ ಯದ್ವಾ ಚಾನ್ಯೋ ಭವಿಷ್ಯತಿ ॥ ೧೦ ॥

ಯದ್ಯಸೌ ತ್ವಾಂ ಸಮಾಲಿಂಗ್ಯ ಕುರುತೇ ಚುಂಬನಾದಿಕಂ ।
ತದಾ ಮಯಾಂ ಸಮಾಸ್ಥಾಯ ಜಾನೀಹ್ಯಸುರಮಾಗತಂ ॥ ೧೧ ॥

ಯದಿ ಚೇತ್ತ್ವಾಂ ಪ್ರತಿಬ್ರೂಯತ್ ಮನ್ನಿಮಿತ್ತಂ ಶುಭಾಶುಭಂ ।
ಅಸಂಶಯಂ ಪಿನಾಕೀ ಸ್ಯಾತ್ ಅತ್ರಾಗತ್ಯ ಬ್ರವೀಹಿ ಮಾಂ ॥ ೧೨ ॥

---

೯. ಆ ಗಂಗೆಯನ್ನು ನೋಡಿ ಸಂತೋಷಗೊಂಡು ಅದರಲ್ಲಿ ಸ್ನಾನಮಾಡಿ ಸಖಿಯರನ್ನೂ ಸ್ನಾನಮಾಡಲು ಹೇಳಿ ಅನಂತರ ತನ್ನ ದೇಹವನ್ನು ಅಲಂಕರಿಸಿ ಕೊಂಡು ಆ ನದಿಯ ದಡದಲ್ಲಿ ಕುಳಿತುಕೊಂಡಳು. ಒಬ್ಬರಿಗೊಬ್ಬರು ನೋಡಿ ಕೊಳ್ಳುತ್ತಾ ಹಾಗೆಯೇ ಗೌರಿಯು ಸಖಿಯನ್ನು ಕುರಿತು ಇಂತೆಂದಳು.

೧೦. ಗೌರಿಯು ಹೇಳಿದಳು– ನೀನು ನನ್ನ ವೇಷವನ್ನು ಹಾಕಿಕೊಂಡು ಆತನ ಸಮೀಪಕ್ಕೆ ಹೋಗು. ಅವನು ನಿಜವಾಗಿಯೂ ಶಿವನೇ ? ಇಲ್ಲವೇ ಬೇರೆಯವನೇ ? ಎಂಬುದನ್ನು ಸರಿಯಾಗಿ ತಿಳಿದುಕೋ.

೧೧. ಆತನು ನಿನ್ನನ್ನು ಆಲಂಗಿಸಿಕೊಂಡು ಚುಂಬನವೇ ಮೊದಲಾದವು ಗಳನ್ನು ಮಾಡಿದರೆ ಆಗ ನೀನು ಮಾಯೆಯಿಂದ ಆ ದೈತ್ಯನು ಬಂದಿರುವನೆಂದು ತಿಳಿ.

೧೨. ಆತನು ನಿನ್ನನ್ನು ಗುರ್ತಿಸಿ ನನ್ನ ವಿಷಯವಾಗಿ ಒಳ್ಳೇದು ಕೆಟ್ಟದ್ದು ಆದ ವಿಷಯಗಳನ್ನು ಹೇಳಿದರೆ ಆಗ ಅವನು ಶಿವನೆಂದೇ ತಿಳಿ. ಒಡನೆಯೇ ಇಲ್ಲಿಗೆ ಬಂದು ನನಗೆ ತಿಳಿಸು.

|| ನಾರದ ಉವಾಚ ||

ಇತ್ಯಾದಿಷ್ಟಾ ಜಯಾ ದೇವ್ಯಾ ಗತೌ ಗಂಗಾಧರಾಂತಿಕಂ ।
ತಾಮಾಯಾಂತೀಂ ಸ ದೃಷ್ಟ್ವಾ ಚ ಭೃಶಂ ಮನ್ಮಥಪೀಡಿತಃ || ೧೩ ||

ಚಕಾರಾಲಿಂಗನಂ ತಸ್ಯಾಃ ಗೌರೀರೂಪೇಣ ಭಾವಯನ್ ।
ತತೋ ಜಾಲಂಧರಸ್ಸದ್ಯೋ ವೀರ್ಯಂ ಸ್ವಂ ಪ್ರಮುಮೋಚ ಹ || ೧೪ ||

ಅಲ್ಪೇಂದ್ರಿಯಶ್ಚ ಸಂಜಾತೋ ವೇಗತಃ ಕುರುನಂದನ ।
ತಯಾ ಸ ಪ್ರೋದಿತೋ ದೈತ್ಯೋ ನ ತ್ವಂ ರುದ್ರೋ ಭವಿಷ್ಯಸಿ || ೧೫ ||

ಅಲ್ಪವೀರ್ಯೋಽಧಮಾಚಾರೋ ನಾಹಂ ಗೌರೀ ಹ ತತ್ಸಖೀ ।
ಇತ್ಯುಕ್ತ್ವಾ ನಿಜಮಾಸ್ಥಾಯ ರೂಪಂ ಸಾ ಪ್ರಾಹ ತಂ ಪುನಃ || ೧೬ ||

ಅನೇನ ಬಲಪಾತೇನ ಹತಸ್ತ್ವಂ ಹಿ ಪಿನಾಕಿನಾ ।
ಇತಿ ಜ್ಞಾತ್ವಾ ಚ ಸಂಪ್ರಾಪ್ತಾ ತತ್ರ ಗತ್ವಾಬ್ರವೀದುಮಾಂ || ೧೭ ||

---

೧೩–೧೪. ನಾರದನು ಹೇಳಿದನು- ದೇವಿಯು ಹೀಗೆ ಹೇಳಲು ಜಯೆಯು ಈ ರೀತಿಯಾಗಿ ವೇಷವನ್ನು ಹಾಕಿಕೊಂಡು ಕಪಟ ಶಿವನ ಹತ್ತಿರಕ್ಕೆ ಬಂದಳು. ಅವಳನ್ನು ಗೌರಿಯೆಂದೇ ತಿಳಿದು ಮನ್ಮಥಬಾಧೆಯಿಂದ ಬಹಳ ಪೀಡಿತನಾಗಿ ಆಲಂಗಿಸಿಕೊಂಡನು. ಒಡನೆಯೇ ಆ ಜಲಂಧರನು ತನ್ನ ವೀರ್ಯವನ್ನು ಕಳೆದು ಕೊಂಡನು. (ವೀರ್ಯಸ್ಖಲನವಾಯಿತು)

೧೫–೧೭. ಹೀಗೆ ವೀರ್ಯವನ್ನು ಕಳೆದುಕೊಂಡುದರಿಂದ ವೀರ್ಯವೂ ಸ್ವಲ್ಪವೇ ನಿಂತು ವೇಗದಲ್ಲಿಯೂ ಕಡಿಮೆಯಾದನು. ಆಗ ಆ ಜಯೆಯು ಅಯ್ಯಾ ! ನೀನು ದೈತ್ಯನೇ ಹೊರತು ರುದ್ರನಲ್ಲ. ನಿನ್ನ ವೀರ್ಯವು ಸ್ವಲ್ಪವಾದುದು. ನೀನು ದುರಾಚಾರಿಯಾದ ದೈತ್ಯನು. ನಾನೂ ಪಾರ್ವತಿಯಲ್ಲ. ಅವಳ ಸಖಿಯು. ಆ ಜಯೆಯು ಹೀಗೆಂದು ಹೇಳಿ ತನ್ನ ಮೊದಲಿನ ರೂಪವನ್ನು ಹೊಂದಿ ಎಲೈ ದೈತ್ಯನೇ ! ಈ ರೀತಿಯಾಗಿ ನೀನು ಬಲವನ್ನು ಕಳೆದು ಕೊಂಡುದರಿಂದ ನಿನ್ನನ್ನು ಶಿವನು ಕೊಂದಂತೆಯೇ ಸರಿ. ನೀನು ಬದುಕಿರಲಾರೆ ಎಂದು ಹೇಳಿ ಉಮೆಯಿದ್ದಲ್ಲಿಗೆ ಬಂದು ಅವಳನ್ನು ಕುರಿತು ಇಂತೆಂದಳು.

|| ಜಯೋವಾಚ ||

ದೇವಿ ಜಾಲಂಧರೋಹ್ಯೇಷಃ ನ ಶಂಭುಸ್ತವ ವಲ್ಲಭಃ || ೧೮ ||

|| ನಾರದ ಉವಾಚ ||

ತತೋ ಭಯಾರ್ತಾ ಹರವಲ್ಲಭಾಭೂದ್ದ್ರುತಂ
ವಿವೇಶಾಥ ಸರೋಜಮಧ್ಯೇ ।
ಸಖ್ಯೋ ಭ್ರಮರ್ಯಃ ಕಮಲೇಷು
ಜಾತಾ ಭಯೇನ ಜಾಲಂಧರಜೇನ ರಾಜನ್ || ೧೯ ||

ಅತ್ರಾಂತರೇ ವನಗತಾಮದೃಷ್ಟ್ವಾ ತಾಂ ನೃಪಾಂಗನಾಂ ।
ಭೀತಾಸ್ತು ರಕ್ಷಕಾಸ್ತಸ್ಯಾಃ ಸತ್ವರಂ ರಣಮಾಯಯುಃ || ೨೦ ||

ರಣೇರ್ಣವಜರೂಪೇಣ ಯುಧ್ಯಂತಂ ಶಂಭುನಾದ್ಭುತಂ ।
ಶುಂಭಾಸುರಂ ವಿಲೋಕ್ಯೋಚುಸ್ತೇ ಹೃತಾ ರಾಜವಲ್ಲಭಾ || ೨೧ ||

---

೧೮. ಜಯೆಯು ಹೇಳಿದಳು– ಎಲೈ ಪಾರ್ವತಿಯೇ ! ಅವನು ಜಲಂಧರನು. ನಿನ್ನ ವಲ್ಲಭನಾದ ಶಿವನಲ್ಲ.

೧೯. ನಾರದನು ಹೇಳಿದನು– ಆಗ ಮತ್ತೇನು ಮಾಡುವನೋ ಆ ಜಲಂಧರನು ಎಂದು ಭಯಪಟ್ಟು ಪಾರ್ವತಿಯು ಆ ನದಿಯಲ್ಲಿ ಇರುವ ಕಮಲಗಳಲ್ಲಿ ಸೇರಿಕೊಂಡಳು. ಸಖಿಯರು ಕೂಡಾ ದುಂಬಿಗಳಾಗಿ ಅವಳ ಜೊತೆಯಲ್ಲಿ ನಿಂತರು.

೨೦. ಇತ್ತ ವೃಂದೆಯು ಕಾಡಿಗೆ ಹೋಗಿ ಬಾರದಿದ್ದುದನ್ನು ತಿಳಿದು ಎಲ್ಲಾ ಕಡೆಯಲ್ಲಿಯೂ ಹುಡುಕಿ ಆಕೆಯನ್ನು ಕಾಣದೆ ಭಯಪಟ್ಟು ಜಲಂಧರನಿಗೆ ತಿಳಿಸಲು ಆಕೆಯ ಆಳುಗಳು ಯುದ್ಧರಂಗಕ್ಕೆ ಜಾಗ್ರತೆಯಾಗಿ ಬಂದರು.

೨೧. ಯುದ್ಧದಲ್ಲಿ ಜಲಂಧರನ ರೂಪದಿಂದ ಅದ್ಭುತವಾಗಿ ಯುದ್ಧ ಮಾಡುತ್ತಿರುವ ಶುಂಭಾಸುರನನ್ನು ನೋಡಿ ಅವರು ಆ ವೃಂದೆಯು ಹೊರಟು ಹೋದ ಸಮಾಚಾರವನ್ನು ತಿಳಿಸಿದರು.

**ತತಃ ಶುಂಭೇನ ತೇ ಪೃಷ್ಟಾಸ್ತಂ ನತ್ವೋಚುಃ ಸಸಾಧ್ವಸಾಃ ।**
**ಆತ್ಮನಃ ಪರಿಹಾರಾರ್ಥೇ ವಿಷ್ಣುಮಿತ್ಯಸುರೇಶ್ವರಂ ॥ ೨೨ ॥**

**ಶ್ರುತ್ವಾ ವೃಂದಾಂ ಹೃತಾಂ ತ್ರಸ್ತೋ ರುದ್ರಾತ್ತ್ಯಕ್ತ್ವಾಥ ಸಂಗರಂ ।**
**ಶುಂಭೇನ ಪ್ರೇಷಿತೌ ಚಂಡಮುಂಡೌ ಜಾಲಂಧರಂ ಪ್ರತಿ ॥ ೨೩ ॥**

**ಮಾನಸೋತ್ತರಮಾಸಾದ್ಯ ದಾನವೌ ವೇಗವತ್ತರೌ ।**
**ಹರರೂಪಧರಂ ದೈತ್ಯಮೂಚತುರ್ವಿಟಪಾಂತರೇ ॥ ೨೪ ॥**

**॥ ಚಂಡಮುಂಡಾ ಊಚತುಃ ॥**

**ಕಿಂ ತಯಾ ನೃಪಶಾರ್ದೂಲ ವಿದೇಶಂ ಗತಯಾ ಶ್ರಿಯಾ ।**
**ಅರಯೋ ಯಾಂ ನ ಪಶ್ಯಂತಿ ಬಂಧುಭಿರ್ಯಾ ನ ಭುಜ್ಯತೇ ॥ ೨೫ ॥**

**ಜಿತಃ ಶುಂಭೋ ಹತಂ ಸೈನ್ಯಂ ದೇವ ರುದ್ರೇಣ ತೇ ರಣೇ ।**
**ಏಹ್ಯೇಹಿ ಕುರು ಸಂಗ್ರಾಮಂ ನ ತ್ವಂ ಪ್ರಾಪ್ಸ್ಯೋಷಿ ಪಾರ್ವತೀಂ ॥ ೨೬ ॥**

---

೨೨. ಶುಂಭನು ಪೂರ್ತಿಯಾಗಿ ವಿಚಾರಿಸಲು ಅವರು ಹೆದರುತ್ತಾ ಅವನಿಗೆ ನಮಸ್ಕರಿಸಿ ತಾವು ತಪ್ಪಿಸಿಕೊಳ್ಳಲು ವಿಷ್ಣುವಿನ ಮೇಲೆ ಹೇಳಿದರು.

೨೩. ವಿಷ್ಣುವು ವೃಂದೆಯನ್ನು ಅಪಹರಿಸಿರುವುದನ್ನು ಕೇಳಿ ಶುಂಭನು ರುದ್ರನೊಡನೆ ಮಾಡುತ್ತಿದ್ದ ಯುದ್ಧವನ್ನು ಬಿಟ್ಟು ಬಂದು ಚಂಡಮುಂಡರೆಂಬ ದೈತ್ಯರನ್ನು ಕರೆದು ಅವರಿಗೆ ಎಲ್ಲವನ್ನೂ ತಿಳಿಸಿ ಜಲಂಧರನ ಬಳಿಗೆ ಕಳುಹಿಸಿದನು.

೨೪. ಆ ಚಂಡಮುಂಡರು ವೇಗವಾಗಿ ಮಾನಸೋತ್ತರ ಪರ್ವತಕ್ಕೆ ಬಂದು ಹರರೂಪವನ್ನು ಹೊಂದಿರುವ ಆ ಜಲಂಧರನಿಗೆ ಒಂದು ಮರದ ಮರೆಯಲ್ಲಿ ಎಲ್ಲವನ್ನೂ ಹೇಳಿದರು.

೨೫. ಚಂಡಮುಂಡರು ಹೇಳಿದರು– ಎಲೈ ರಾಜಶ್ರೇಷ್ಠನಾದ ಜಲಂಧರ ಮಹಾಪ್ರಭುವೇ ! ಲಕ್ಷ್ಮಿಯು ನಮ್ಮನ್ನು ಬಿಟ್ಟು ಬೇರೆ ಹೊರಟುಹೋದರೆ ಉಪಯೋಗವೇನು ? ಆಕೆಯು ಇನ್ನೂ ಶತ್ರುಗಳ ವಶವಾಗಿಲ್ಲ. ನಮ್ಮಲ್ಲಿಯೂ ಇಲ್ಲ.

೨೬. ಶುಂಭನು ಯುದ್ಧದಲ್ಲಿ ಸೋತುಹೋದನು. ಸೈನ್ಯವೆಲ್ಲವನ್ನೂ ರುದ್ರನು ಯುದ್ಧದಲ್ಲಿ ಕೊಂದನು. ಬಾ. ಬಾ ಯುದ್ಧವನ್ನು ಮಾಡು. ನಿನಗೆ ಪಾರ್ವತಿಯು ಸಿಕ್ಕುವುದಿಲ್ಲ.

ಪಂಚಾನನಸ್ಯ ಮಹಿಷೀಂ ಕಥಂ ಪ್ರಾಪ್ನೋತಿ ಜಂಬುಕಃ ।
ಅಂಧಕಾರಃ ಕಥಂ ರಾಜನ್ ಪ್ರಾಪ್ನೋತಿ ಸವಿತುಃ ಪ್ರಭಾಂ || ೨೭ ||

ತತ್ರ ಜಾಲಂಧರಾತ್ಪೀಠಾದ್ಧೃತಾ ರಾಜ್ಞೀ ಮುರಾರಿಣಾ ।
ಇತಿ ಸಂಶ್ರೂಯತೇ ವಾರ್ತಾ ತಸ್ಮಾತ್ತ್ವಂ ಕುರು ಸಂಗರಂ || ೨೮ ||

ರಣೇಶ್ವರಂ ವಿಜಿತ್ಯಾಶು ಭವ ಸರ್ವೇಶ್ವರೇಶ್ವರಃ ।
ಅಥವಾ ಶಿವನಾರಾಚೈಃ ಖಂಡಿತೋ ಯಾಸಿ ತತ್ಪದಂ || ೨೯ ||

|| ನಾರದ ಉವಾಚ ||

ಇತಿ ಜಾಲಂಧರಶ್ಶ್ರುತ್ವಾ ಭಾಷಿತಂ ಚಂಡಮುಂಡಯೋಃ ।
ನಿಸ್ಸಸಾರ ಗಿರೇಸ್ತಸ್ಮಾತ್ಸಕ್ರೋಧೋ ರಕ್ತಲೋಚನಃ || ೩೦ ||

ಚಂಡಮುಂಡೌ ಸಮಾಶ್ವಾಸ್ಯ ತ್ಯಕ್ತ್ವಾ ರೂಪಂ ಹರಸ್ಯ ಚ ।
ಗಚ್ಛನ್ ಜಾಲಂಧರೋ ಮಾರ್ಗೇ ದುರ್ವಾರಣಮುವಾಚ ಹ || ೩೧ ||

---

೨೭. ಸಿಂಹದ ಹೆಂಡತಿಯನ್ನು ನರಿಯು ಹೊಂದಲು ಸಾಧ್ಯವೇ ? ಎಲೈ ರಾಜನೇ ! ಸೂರ್ಯನ ಬೆಳಕನ್ನು ಕತ್ತಲೆಯು ಹೊಂದಲು ಸಾಧ್ಯವೇ ? ಅವೆರಡೂ ಇಲ್ಲ.

೨೮. ಅಲ್ಲಿ ನಿನ್ನ ಜಲಂಧರ ಪೀಠದಿಂದ ನಿನ್ನ ಹೆಂಡತಿಯಾದ ವೃಂದೆಯನ್ನು ವಿಷ್ಣುವು ಕದ್ದುಕೊಂಡು ಹೋದನೆಂದು ಹೇಳುತ್ತಿದ್ದಾರೆ. ಆದ್ದರಿಂದ ಈಕೆಯನ್ನು ಬಿಟ್ಟು ಬಂದು ಯುದ್ಧವನ್ನು ಮಾಡು.

೨೯. ಬಂದು ಯುದ್ಧಮಾಡಿ ಶಿವನನ್ನು ಗೆದ್ದು ಆ ಸರ್ವೇಶ್ವರನಾದ ಈಶ್ವರನಿಗೂ ಒಡೆಯನಾಗು. ಅದಾಗದಿದ್ದರೆ ಆ ಶಿವನ ಬಾಣದಿಂದ ಪೆಟ್ಟನ್ನು ತಿಂದು ಮೃತನಾಗಿ ಆ ಶಿವನ ಪದವನ್ನು ಹೊಂದು.

೩೦. ನಾರದನು ಹೇಳಿದನು– ಜಲಂಧರನು ಚಂಡಮುಂಡರು ಹೇಳಿದ ಈ ಮಾತನ್ನು ಕೇಳಿ ಕೋಪದಿಂದ ಕಣ್ಣುಗಳನ್ನು ಕೆಂಪಗೆಮಾಡಿಕೊಂಡು ಆ ಮಾನಸೋತ್ತರ ಪರ್ವತದಿಂದ ಹೊರಟನು.

೩೧. ಆಗ ಆ ಜಲಂಧರನು ಹೊರಟು ತನ್ನ ಶಿವರೂಪವನ್ನು ಬಿಟ್ಟು ಆ ಚಂಡಮುಂಡರನ್ನು ಸಮಾಧಾನಪಡಿಸಿದನು. ದಾರಿಯಲ್ಲಿ ಬರುತ್ತಾ ದುರ್ವಾರಣನನ್ನು ಕುರಿತು ಇಂತೆಂದನು.

|| ಜಾಲಂಧರ ಉವಾಚ ||

ಪಶ್ಯ ದುರ್ವಾರಣೇದಾನೀಂ ತತ್ರ ಯದ್ವಿಷ್ಣುನಾ ಕೃತಂ |
ಮಾಯಾಮಾಶ್ರಿತ್ಯ ಸಾ ರಾಜ್ಞೀ ವೃಂದಾ ನೀತಾತ್ಮನಃ ಪದಂ || ೩೨ ||

ಗೃಹೇ ಸ್ಥಿತಸ್ಯ ಜಾಮಾತುಃ ವಿಶ್ವಸೇನ್ನೈವ ಬುದ್ಧಿಮಾನ್ |
ನೂನಂ ತಸ್ಮೈ ಪ್ರದತ್ವಾ ಚ ಕನ್ಯಕಾಂ ವಿಸೃಜೇದ್ಬುಧಃ || ೩೩ ||

ಜಾಮಾತರಂ ಗೃಹೇ ನೈವ ಸ್ಥಾಪಯೇತ್ಸರ್ವಥಾ ನರಃ |
ಧನದಾರಾದಿಕಂ ಸರ್ವಂ ಸ ಗೃಹ್ಣಾತಿ ಶನೈಃ ಶನೈಃ || ೩೪ ||

|| ದುರ್ವಾರಣ ಉವಾಚ ||

ರಾಜನ್ ಯತ್ಕ್ರಿಯತೇ ಕರ್ಮ ತತ್ತಥೈವ ತು ಯುಜ್ಯತೇ |
ತ್ವಂ ಹರ್ತುಮಾಗತೋ ಗೌರೀಂ ಹರಿಣಾ ತೇ ಹೃತಾ ವಧೂಃ || ೩೫ ||

---

೩೨. ಜಲಂಧರನು ಹೇಳಿದನು– ಎಲೈ ದುರ್ವಾರಣನೇ ! ವಿಷ್ಣುವು ಆ ಜಲಂಧರಪೀಠದಲ್ಲಿ ಮಾಡಿದ ಕೆಲಸವನ್ನು ನೋಡಿದೆಯಾ ? ಮಾಯೆಯಿಂದ ಬಂದು ಆ ರಾಣಿಯಾದ ವೃಂದೆಯನ್ನು ತನ್ನ ಮನೆಗೆ ಕದ್ದುಕೊಂಡು ಹೋದನಲ್ಲ?

೩೩. ಬುದ್ಧಿವಂತನಾದವನು ಮನೆಯಲ್ಲಿರುವ ಅಳಿಯನನ್ನು ನಂಬ ಬಾರದು. ಹೆಣ್ಣನ್ನು ಕೊಟ್ಟು ಅವನಿಗೆ ಮದುವೆಯಾದ ಮೇಲೆ ಬೇರೆ ಎಲ್ಲಿಗಾದರೂ ಅವಳೊಡನೆ ಕಳುಹಿಸಿಬಿಡಬೇಕು. ಇದು ಖಂಡಿತ.

೩೪. ಮನುಷ್ಯನು ಅಳಿಯನನ್ನು ಮನೆಯಲ್ಲಿ ಖಂಡಿತವಾಗಿಯೂ ಇಟ್ಟು ಕೊಳ್ಳಬಾರದು. ಇದ್ದರೆ ಅವನು ನಿಧಾನವಾಗಿ ಹಣ ಹೆಂಡರು ಎಲ್ಲವನ್ನೂ ಸ್ವಾಧೀನಪಡಿಸಿಕೊಳ್ಳುತ್ತಾನೆ.

೩೫. ದುರ್ವಾರಣನು ಹೇಳಿದನು– ಎಲೈ ದೊರೆಯೇ ! ಯಾವನು ಯಾವ ಕೆಲಸವನ್ನು ಮಾಡುತ್ತಾನೆಯೋ ಅದರಂತೆಯೇ ಅದು ಅವನಿಗೆ ಫಲಿಸುತ್ತದೆ. ನೀನು ಶಿವನ ಹೆಂಡತಿಯನ್ನು ಅಪಹರಿಸಲು ಹೋಗಿದ್ದೆ. ಅದರಂತೆಯೇ ನಿನ್ನ ಹೆಂಡತಿಯನ್ನು ಮತ್ತೊಬ್ಬರು ಅಪಹರಿಸಿದರು.

ತಸ್ಯ ಸ್ಪಷ್ಟವಚಶ್ಶ್ರುತ್ವಾ ಕ್ಷಣಂ ಮೌನೀ ವ್ಯಚಿಂತಯತ್ || ೩೬ ||

|| ಜಾಲಂಧರ ಉವಾಚ ||

ಕಿಂ ಪ್ರಯಾಮಿ ಹರಂ ಜೇತುಮಥವಾ ಹರಿಮುಲ್ಬಣಂ |
ಕಾರ್ಯದ್ವಯೇ ಸಮುತ್ಪನ್ನೇ ಯತ್ಪರಂ ತತ್ಪ್ರಕಥ್ಯತಾಂ || ೩೭ ||

|| ದುರ್ವಾರಣ ಉವಾಚ ||

ಯದಿ ಯಾಸಿ ಹರಿಂ ಜೇತುಂ ಹರಃ ಪೃಷ್ಠೇ ಹನಿಷ್ಯತಿ |
ಹಸಿಷ್ಯಂತಿ ರಣೇ ಶೂರಾ ಯಾತುಂ ರುದ್ರೋ ನ ದಾಸ್ಯತಿ || ೩೮ ||

ತಸ್ಮಾತ್ಪಶುಪತಿಂ ಜಿತ್ವಾ ಕೃತ್ವಾ ತಂ ವಶ್ಯಮಾತ್ಮನಃ |
ಪಶ್ಚಾತ್ಪ್ರಯಾಹಿ ಗೋವಿಂದಂ ಯದಿ ಜಾನಾಸಿ ತತ್ಪದಂ || ೩೯ ||

---

೩೬. ಜಲಂಧರನು ಆ ದುರ್ವಾರಣನ ಸ್ಪಷ್ಟವಾದ ಮಾತನ್ನು ಕೇಳಿ ಕ್ಷಣ ಕಾಲ ಏನನ್ನೂ ಹೇಳದೆ ಯೋಚಿಸಿದನು.

೩೭. ಜಲಂಧರನು ಹೇಳಿದನು– ಎಲೈ ದುರ್ವಾರಣನೇ ! ಈಗ ಹರನನ್ನು ಗೆಲ್ಲಲು ಯುದ್ಧಕ್ಕೆ ಹೋಗಲೇ ? ಅಥವಾ ಅಯೋಗ್ಯನಾದ ಹರಿಯನ್ನು ಶಿಕ್ಷಿಸಲು ಹೊರಡಲೇ ? ಈ ರೀತಿಯಾಗಿ ಬೇರೆ ಬೇರೆ ಜಾಗದಲ್ಲಿ ಬೇರೆ ಬೇರೆ ಕೆಲಸಗಳು ಒಂದೇ ಕಾಲದಲ್ಲಿ ಪ್ರಾಪ್ತವಾಗಿವೆ. ಈಗ ಏನು ಮಾಡಲಿ ? ನೀನು ನಿಶ್ಚಯಿಸಿ ಹೇಳು.

೩೮. ದುರ್ವಾರಣನು ಹೇಳಿದನು– ಹರಿಯನ್ನು ನೀನು ಜಯಿಸುವುದಕ್ಕೆ ಹೊರಟರೆ ಹರನು ಹಿಂದಿನಿಂದ ನಿನ್ನನ್ನು ಹೊಡೆಯುತ್ತಾ ಬರುವನು. ಇದನ್ನು ನೋಡಿದರೆ ಯುದ್ಧವಿಶಾರದರು ನಗುತ್ತಾರೆ. ನೀನು ಹರಿಯ ಮೇಲೆ ಯುದ್ಧಕ್ಕೆ ಹೋಗಲು ಹರನು ಅವಕಾಶವನ್ನು ಕೊಡುವುದಿಲ್ಲ.

೩೯. ಆದ್ದರಿಂದ ಮೊದಲು ಹರನೊಡನೆ ಯುದ್ಧಮಾಡಿ ಅವನನ್ನು ಗೆದ್ದು ನಿನಗೆ ಅಧೀನನನ್ನಾಗಿ ಮಾಡಿಕೊಂಡು ಆ ಮೇಲೆ ಆ ವಿಷ್ಣುವು ಎಲ್ಲಿರುವನು ಎಂಬುದನ್ನು ತಿಳಿದರೆ ಅವನ ಮೇಲೆ ಯುದ್ಧಕ್ಕೆ ಹೊರಡು.

ಅಧುನಾ ಸತ್ವರಂ ವೀರ ಯಾಹಿ ದೈತ್ಯಾನ್ಮಹಾಬಲಾನ್ ।
ರಣಂ ಕುರು ಮಹಾಘೋರಂ ಯಥಾ ಸಂಪೂಜ್ಯಸೇ ಬುಧೈಃ ॥ ೪೦ ॥

॥ ನಾರದ ಉವಾಚ ॥

ದೇಶಕಾಲೋಚಿತಂ ಶ್ರುತ್ವಾ ದುರ್ವಾರಣವಚಸ್ತದಾ ।
ಯಯೌ ಜಾಲಂಧರೋ ಯೋದ್ಧುಂ ಸಹ ರುದ್ರೇಣ ಯೋಗಿನಾ ॥ ೪೧ ॥

ಇತಿ ಶ್ರೀ ಪದ್ಮಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಜಾಲಂಧರಸ್ಯ ಮಾಯಾರೂಪ ಪರಿತ್ಯಾಗೋ ನಾಮ ಸಪ್ತದಶೋಽಧ್ಯಾಯಃ

---

೪೦. ಎಲೈ ವೀರನೇ ! ಈಗ ನೀನು ತಡಮಾಡದೆ ಶೂರರಾದ ನಿನ್ನ ಸೈನ್ಯದವರನ್ನು ಸೇರಿಕೋ. ಮತ್ತು ರಣಪಂಡಿತರು ಹೊಗಳುವ ರೀತಿಯಲ್ಲಿ ಯುದ್ಧವನ್ನು ಮಾಡು.

೪೧. ನಾರದನು ಹೇಳಿದನು– ದೇಶಕ್ಕೂ ಕಾಲಕ್ಕೂ ಯೋಗ್ಯವಾದ ದುರ್ವಾರಣನ ಈ ಮಾತನ್ನು ಕೇಳಿ ಜಲಂಧರನು ಆ ಯೋಗಿಯಾದ ಶಿವನೊಡನೆ ಯುದ್ಧಮಾಡಲು ಹೊರಟನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ಜಲಂಧರನ ಮಾಯಾರೂಪ ಪರಿತ್ಯಾಗವೆಂಬ ಹದಿನೇಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಅಷ್ಟಾದಶೋऽಧ್ಯಾಯಃ ॥



॥ ನಾರದ ಉವಾಚ ॥

**ಅಥ ಜಾಲಂಧರೋऽಪಶ್ಯತ್ ಕಬಂಧಚಯಭೀಷಣಂ ।**
**ರಣಂ ರುಧಿರ ಮಾಂಸೌಘಮಜ್ಜಾಮೇದೋऽಸ್ಥಿದುರ್ಗಮಂ ॥ ೧ ॥**

**ತತ್ರ ಜಾಲಂಧರೋ ದೈತ್ಯಃ ಪ್ರಿಯಾಹರಣ ದುಃಖಿತಃ ।**
**ರಣೇ ವಿಲೋಕಯಾಮಾಸ ವೃಷಸ್ಥಂ ಪಾರ್ವತೀಪತಿಂ ॥ ೨ ॥**

**ಘೋರಾಹಿಭೋಗೇನ ವಿಭೂಷಿತಾಂಗಂ**
**ಜಟಾಕಲಾಪೇ ಶಶಿಭೂಷಯಾಂಕಿತಂ ।**
**ನೇತ್ರಾಗ್ನಿಕೀಲೋಪರಿ ಶೋಭಿತಾಂಗಂ**
**ಬಿಭ್ರಾಣಮೀಶಂ ನ ದದರ್ಶ ಸಿಂಧುಜಃ ॥ ೩ ॥**

---

## ಹದಿನೆಂಟನೆಯ ಅಧ್ಯಾಯವು

೧-೨. ಇತ್ತ ಜಲಂಧರನು ಯುದ್ಧಭೂಮಿಗೆ ಬಂದು ಅಲ್ಲಿ ಭಯಂಕರವಾದ ಮುಂಡಗಳನ್ನೂ, ರಕ್ತ, ಮಾಂಸ, ಕೊಬ್ಬು, ಮೇದಸ್ಸು, ಮೂಳೆಗಳು ಬಹುವಾಗಿ ಬಿದ್ದಿರುವುದನ್ನೂ ನೋಡಿದನು. ಹೆಂಡತಿಯನ್ನು ವಿಷ್ಣುವು ಕದ್ದುಕೊಂಡು ಹೋಗಿರುವುದರಿಂದ ಬಹು ದುಃಖಗೊಂಡಿರುವ ಆ ಜಲಂಧರನು ಯುದ್ಧರಂಗದಲ್ಲಿ ಎತ್ತಿನಮೇಲೆ ಯುದ್ಧಮಾಡುತ್ತಿರುವ ಶಿವನನ್ನು ನೋಡಿದನು.

೩. ಕ್ರೂರವಾದ ಸರ್ಪಗಳ ಅಲಂಕಾರವನ್ನು ಹೊಂದಿರುವ, ಜಟೆಗಳ ಮಧ್ಯದಲ್ಲಿ ಚಂದ್ರಕಲೆಯಿಂದ ಪ್ರಕಾಶಿಸುವ, ಬೆಂಕಿಯಿರುವ ಕಣ್ಣಿನಿಂದಲೂ, ಮೂಳೆಗಳಿಂದ ಕೂಡಿರುವ ರುಂಡಮಾಲೆಯಿಂದಲೂ ದೇಹದಲ್ಲೆಲ್ಲಾ ಅಲಂಕೃತನಾಗಿರುವ, ಆ ಈಶ್ವರನನ್ನು ಈ ಸಿಂಧುವಿನ ಮಗನಾದ ಜಲಂಧರನು ನೋಡಿದನು.

ಶೀಘ್ರಂ ಸ್ವರಥಮಾರುಹ್ಯ ಸಮುದ್ರತನಯೋ ರುಷಾ ।
ಸಂಕ್ಷೇಪಾತ್ಪ್ರಾಹ ತಂ ಶುಂಭಂ ತಾಪಸೋ ನಾಹತಸ್ತ್ವಯಾ ॥ ೪ ॥

ಪ್ರಾಹ ಜಾಲಂಧರಂ ಶುಂಭಃ ತಾಪಸೇನ ಮಹತ್ಕೃತಂ ।
ಹಂತುಂ ನ ಶಕ್ಯತೇಽಸ್ಮಾಭಿಃ ಹರಃ ಸಂಗ್ರಾಮದುರ್ಜಯಃ ॥ ೫ ॥

ಇತಿ ಶುಂಭೋಕ್ತಮಾಕರ್ಣ್ಯ ಸಿಂಧುಜಃ ಕ್ರೋಧಮೂರ್ಛಿತಃ ।
ಹರಂ ಪದ್ಮಸಹಸ್ರೇಣ ದೈತ್ಯಸೈನ್ಯೇನ ಸಂವೃತಃ ॥ ೬ ॥

ಗೃಹೀತ್ವಾ ಕಾಲಕೇದಾರಂ ಧನುರ್ಜಾಲಂಧರೋ ಯಯೌ ।
ಬಾಣಾಂಸ್ತೀಕ್ಷ್ಣಾನತಿಸ್ಥೂಲಾಂಲ್ಲೋಹಸ್ತಂಭಾಂಸ್ತಥಾ ಬಹೂನ್ ॥೭॥

ಮುಮೋಚ ಯುಧಿ ದುರ್ಧರ್ಷೋ ವರ್ಷನ್ಮೇಘ ಇವಾಗಮೇ ।
ಆಯಾಂತಂ ರುರುಧುಸ್ಸಿಂಧುಸೂನುಂ ಶಂಭುಗಣಾ ಯುಧಿ ॥ ೮ ॥

---

೪. ಅವನನ್ನು ನೋಡಿದೊಡನೆಯೇ ಕೋಪಗೊಂಡು ಜಲಂಧರನು ತನ್ನ ರಥವನ್ನೇರಿ ತರಿಸಿ ಹತ್ತಿ ಶುಂಭನನ್ನು ನೋಡಿ, ಎಲೈ ಶುಂಭನೇ! ನೀನು ಈ ತಾಪಸನನ್ನು ಕೊಂದು ಹಾಕಲಿಲ್ಲವಲ್ಲ! ಎಂದು ಒಂದೇ ಮಾತಿನಿಂದ ಅವನನ್ನು ನಿಂದಿಸಿದನು.

೫. ಆಗ ಜಲಂಧರನನ್ನು ಕುರಿತು ಶುಂಭನು ಈ ತಾಪಸನು ಬಹು ಘೋರವಾಗಿ ಯುದ್ಧ ಮಾಡುತ್ತಿರುವನು. ನಾವು ಇವನನ್ನು ಕೊಲ್ಲಲು ಸಾಧ್ಯವಿಲ್ಲ. ಈ ಹರನು ಯುದ್ಧದಲ್ಲಿ ಸೋಲುವುದಿಲ್ಲ.

೬–೯. ಶುಂಭನು ಹೀಗೆ ಹೇಳಲು ಜಲಂಧರನು ಕೋಪಗೊಂಡು ಜೊತೆಯಲ್ಲಿ ಸಾವಿರ ಪದ್ಮಸಂಖ್ಯೆಯ ಸೈನ್ಯವನ್ನು ಕರೆದುಕೊಂಡು ಕಾಲಕೇದಾರವೆಂಬ ತನ್ನ ಧನುಸ್ಸನ್ನು ಹಿಡಿದುಕೊಂಡು ಯುದ್ಧಕ್ಕೆ ಹೊರಟನು. ಆಗ ಕೋಪಗೊಂಡ ಆ ಜಲಂಧರನು ಹರಿತವಾದ ದಪ್ಪವಾದ ಬಾಣಗಳನ್ನೂ ಅನೇಕವಾದ ಕಬ್ಬಿಣದ ಕಂಬಿಗಳನ್ನೂ ಮೇಘವು ಮಳೆಯನ್ನು ಸುರಿಸುವಂತೆ ಆ ಹರನಮೇಲೆ ಸುರಿಸಿದನು. ಯುದ್ಧಕ್ಕೆ ಬರುತ್ತಿರುವ ಜಲಂಧರನನ್ನು ನೋಡಿ ಆ ಶಂಭುವಿನ ಗಣಗಳು

ತತೋ ರುದ್ರೇಣ ರೌದ್ರೈಶ್ಚ ಶರೌಘೈಸ್ತಾಡಿತೋ ರುಷಾ ।
ರುದ್ರಬಾಣೈಸ್ತದಾ ತಸ್ಯ ಕವಚಂ ಭುವಿ ಪಾತಿತಂ ॥ ೯ ॥

ವಿವರ್ಮಾऽಪಿ ಬಭೌ ಸೋऽಥ ಮೇಘಮುಕ್ತೋ ಯಥಾऽಚಲಃ ।
ಪುನರ್ಜಾಲಂಧರಸ್ಯಾಂಗಂ ಶಂಭುನಾ ಕೀಲಿತಂ ಶರೈಃ ॥ ೧೦ ॥

ರುಧಿರಂ ಬಹು ಸುಸ್ರಾವ ಜಾಲಂಧರಶರೀರತಃ ।
ತೇನಾಶ್ರು ರುಧಿರೌಘೇನ ಪ್ಲಾವಿತಾ ಸಕಲಾಮಹೀ ॥ ೧೧ ॥

ತತೋ ದೇವಾ ಭಯಂ ಜಗ್ಮುಃ ದಾನವಾಶ್ಚ ಚಕಂಪಿರೇ ।
ತ್ಯಕ್ತ್ವಾ ತೇ ಪ್ರಮಥಾ ವೀರ ರಣಭೂಮಿಂ ಪ್ರದುದ್ರುವುಃ ॥ ೧೨ ॥

ನದ್ಯಾ ಇವ ಪರಾ ಮೂರ್ತಿಃ ಪ್ರಸೃತಾ ಸರ್ವತೋऽಪಿ ಚ ।
ಅಥಾಹಾರ್ಣವಜೋ ರುದ್ರಂ ಧನುರ್ಧರವರೋಹ್ಯಸಿ ॥ ೧೩ ॥

---

ಅವನನ್ನೇ ಮುತ್ತಿದುವು. ಆಗ ರುದ್ರನು ಕೋಪಗೊಂಡು ಬಾಣಗಳ ಮಳೆಯನ್ನೇ ಸುರಿಸಿದನು. ಅದರಿಂದ ಆತನ ಕವಚವು ಕತ್ತರಿಸಿ ನೆಲದಲ್ಲಿ ಬಿದ್ದುಹೋಯಿತು.

೧೦. ಕವಚವು ಬಿದ್ದುಹೋದರೂ ಕೂಡ ಆ ಜಾಲಂಧರನು ಮೇಘಗಳು ಹೊರಟುಹೋದ ಪರ್ವತದಂತೆ ರಂಜಿಸಿದನು. ಮತ್ತೆ ಹರನು ಬಾಣಗಳನ್ನು ಬಿಟ್ಟು ಅವನ ಮೈಯನ್ನು ಆ ಬಾಣಗಳು ಮುಚ್ಚಿಕೊಳ್ಳುವಂತೆ ಮಾಡಿದನು.

೧೧. ಜಲಂಧರನ ಶರೀರದಿಂದ ಬಹುವಾಗಿ ರಕ್ತವು ಸುರಿಯಿತು. ಆ ರಕ್ತದ ನೀರಿನಿಂದ ಭೂಮಿಯೆಲ್ಲವೂ ನೆನೆದು ಹೋಯಿತು.

೧೨. ಆಗ ದೇವತೆಗಳು ಭಯಪಟ್ಟರು. ದಾನವರು ನಡುಗಿದರು. ಪ್ರಮಥ ಗಣಗಳು ರಣಭೂಮಿಯನ್ನೇ ಬಿಟ್ಟು ಓಡಿದುವು.

೧೩. ಆ ನೆಲವೆಲ್ಲದರಲ್ಲಿಯೂ ಬೇರೆ ಬೇರೆಯಾಗಿ ರಕ್ತದ ನದಿಗಳು ಎಲ್ಲಾ ಕಡೆಗಳಲ್ಲಿಯೂ ಹರಿಯುತ್ತಿದ್ದವು. ಆಗ ಜಲಂಧರನು ರುದ್ರನನ್ನು ಕುರಿತು ಎಲೈ ರುದ್ರನೇ! ನೀನು ಬಿಲ್ಲಾಳುಗಳಲ್ಲಿ ಉತ್ತಮನಾಗಿದ್ದೀಯೆ.

ಇದಾನೀಂ ತತ್ಕರಿಷ್ಯಾಮಿ ಯೇನ ಗಚ್ಛಸಿ ಸಂಕ್ಷಯಂ ।
ಇತ್ಯುಕ್ತ್ವಾ ಕಾಲಕೇದಾರಂ ಸಶರಂ ಪ್ರತಿಗೃಹ್ಯ ತತ್ ॥ ೧೪ ॥

ಶೀಘ್ರಂ ಸಂಪೂರಯಾಮಾಸ ಶರೈರ್ನಾನಾವಿಧೈಶ್ಶಿವಂ ।
ಶಿವಸ್ಸಹಸ್ರಕೋಟೀಭಿಃ ಪೂರಿತಾಂಗೋ ರಣೇ ಬಭೌ ॥ ೧೫ ॥

ವಿಹಂಗನ್ಯೈರ್ಯಥಾಕಾಶಂ ವೃಕ್ಷೈರಿವ ಮಹಾಗಿರಿಃ ।
ದೈತ್ಯಮುಕ್ತೈಸ್ತಥಾ ಬಾಣೈಃ ದೃಷ್ಟ್ವಾ ವ್ಯಾಪ್ತಂ ಮಹೇಶ್ವರಂ ॥ ೧೬ ॥

ವೀರಭದ್ರಸ್ತಥಾ ಕೋಪಾತ್ ಜಾಲಂಧರಮುಧಾವತ ।
ಅಪೀಡಯುದಮೇಯಾತ್ಮಾ ಸಮುದ್ರತನಯಂ ಬಲೀ ॥ ೧೭ ॥

ಜಾಲಂಧರೋಽಥ ಸಂಕ್ರುದ್ಧೋ ವಿಧ್ಯನ್ಬಾಣೈಸ್ಸಹಸ್ರಶಃ ।
ಧನುಶ್ಶರಾನ್ರಥಂ ಛತ್ರಂ ಸಾರಥಿಂ ತಿಲಶಶ್ಶರೈಃ ॥ ೧೮ ॥

ಚಕಾರ ವೀರಭದ್ರಸ್ಯ ಸಿಂಧುಸೂನುಃ ಪ್ರತಾಪವಾನ್ ।
ವೀರಭದ್ರೋಽಥ ವಿರಥೋ ಹತವಾನ್ಗದಯಾಬ್ಧಿಜಂ ॥ ೧೯ ॥

---

೧೪–೧೫. ಎಲೈ ಶಿವನೆ! ಈಗ ನೀನು ನಾಶವಾಗುವಂತೆ ಕೆಲಸವನ್ನು ಮಾಡುತ್ತೇನೆ. ಹೀಗೆಂದು ಹೇಳಿ ಜಲಂಧರನು ತನ್ನ ಕಾಲಕೇದಾರವೆಂಬ ಬಿಲ್ಲನ್ನು ತೆಗೆದುಕೊಂಡು ಬಾಣಗಳನ್ನು ಹೂಡಿ ಶೀಘ್ರವಾಗಿ ಬಿಟ್ಟನು. ಆ ನಾನಾ ಬಗೆಯಾದ ಶರಗಳು ಸಾವಿರಗಟ್ಟಲೆಯಾಗಿ ಆ ಶಿವನ ದೇಹದಲ್ಲಿ ಚುಚ್ಚಿ ಕೊಂಡುವು. ಇದರಿಂದ ಶಿವನು ರಣರಂಗದಲ್ಲಿ ಪ್ರಕಾಶಿಸಿದನು.

೧೬-೨೩. ಪಕ್ಷಿಗಳಿಂದ ಆಕಾಶವೂ ಮರಗಳಿಂದ ದೊಡ್ಡ ಪರ್ವತವೂ ಮುಚ್ಚಿಕೊಳ್ಳುವಂತೆ ಆ ಜಲಂಧರನು ಬಿಟ್ಟ ಬಾಣಗಳಿಂದ ಮಹೇಶ್ವರನು ಮುಚ್ಚಿ ಕೊಂಡಿರುವುದನ್ನು ನೋಡಿ ವೀರಭದ್ರನು ಕೋಪದಿಂದ ಜಲಂಧರನ ಮೇಲೆ ಬಿದ್ದನು. ಆ ವೀರಭದ್ರನು ಬಾಣಗಳಿಂದ ಜಲಂಧರನನ್ನು ಬಹುವಾಗಿ ನೋಯಿಸಿ ದನು. ಆಗ ಜಲಂಧರನು ಕೋಪಗೊಂಡು ಆ ವೀರಭದ್ರನ ಮೇಲೆ ಸಾವಿರಾರು ಬಾಣಗಳನ್ನು ಬಿಡುತ್ತ ಅವನ ಧನುಸ್ಸನ್ನೂ ಬಾಣಗಳನ್ನೂ ರಥವನ್ನೂ ಛತ್ರಿಯನ್ನೂ ಸಾರಥಿಯನ್ನೂ ಚೂರು ಚೂರು ಮಾಡಿದನು. ವೀರಭದ್ರನು ರಥವನ್ನು ಕಳೆದುಕೊಂಡು ಕೈಯ್ಯಲ್ಲಿ ಗದೆಯನ್ನು ತೆಗೆದುಕೊಂಡು ಜಲಂಧರನನ್ನು

ತಯೈವ ಗದಯಾ ಸೋಽಪಿ ತಂ ಹತ್ವಾಪಾತಯದ್ಭುವಿ ।
ಗದಾ ಪ್ರಹಾರ ಪತಿತಂ ತಮಾಲೋಕ್ಯಾಽತಿಮೂರ್ಛಿತಂ ॥ ೨೦ ॥

ಮಣಿಭದ್ರೋಽಥ ಸಮರೇ ಜಾಲಂಧರಮಧಾವತ ।
ಅತಿಕ್ರುದ್ಧಂ ತಮಾಯಾಂತಂ ದೃಷ್ಟ್ವಾ ದೈತ್ಯೋ ಮಹಾರಣೇ ॥ ೨೧ ॥

ಶರೈರ್ವ್ಯಸ್ತೋಪಕರಣಂ ಸ ಚಕಾರ ನದೀಸುತಃ ।
ಅಥ ಮೂರ್ಛಾಂ ಪರಿತ್ಯಜ್ಯ ಉತ್ತಸ್ಥೌ ಸಿಂಹವನ್ನದನ್ ॥ ೨೨ ॥

ವೀರಭದ್ರಸ್ತತಃ ಕೋಪಾತ್ ಮಣಿಭದ್ರಃ ಪ್ರತಾಪವಾನ್ ।
ಜಘ್ನತುಃ ಪರ್ವತಾಭ್ಯಾಂ ತೌ ವ್ಯೋಮಸ್ಥಂ ತಟಿನೀಸುತಂ ॥ ೨೩ ॥

ತದಂಗೇ ಪತಿತೌ ದೃಷ್ಟ್ವಾ ಪರ್ವತೌ ತೌ ವಿನದ್ಯ ಚ ।
ಜಘಾನ ಮುಷ್ಟಿಪಾತೇನ ವೀರಭದ್ರೋ ನದೀಸುತಂ ॥ ೨೪ ॥

ಮಣಿ ಭದ್ರಶ್ಚರಣಯೋಃ ಧೃತ್ವಾ ಸಾಗರನಂದನಂ ।
ಸ್ಯಂದನಾದ್ಭ್ರಾಮಯಾಮಾಸ ತದದ್ಭುತಮಿವಾಽಭವತ್ ॥ ೨೫ ॥

---

ಹೊಡೆದನು. ಆ ಜಲಂಧರನು ಅದೇ ಗದೆಯನ್ನು ಕಿತ್ತುಕೊಂಡು ಆ ವೀರಭದ್ರನನ್ನು ಹೊಡೆದು ಕೆಳಗೆ ಕೆಡವಿದನು. ಗದೆಯ ಏಟಿನಿಂದ ವೀರಭದ್ರನು ಮೂರ್ಛೆಗೊಂಡು ಕೆಳಗೆ ಬಿದ್ದುದನ್ನು ನೋಡಿ ಮಣಿಭದ್ರನೆಂಬುವನು ಜಲಂಧರನ ಮೇಲೆ ಬಿದ್ದನು. ಬಹುವಾಗಿ ಕೋಪಗೊಂಡು ಬರುತ್ತಿರುವ ಮಣಿಭದ್ರನನ್ನು ಜಲಂಧರನು ನೋಡಿ ಬಾಣಗಳಿಂದ ಅವನ ರಥ ಸಾರಥಿ ಬಿಲ್ಲು ಬಾಣಗಳನ್ನು ಕತ್ತರಿಸಿ ತನ್ನನ್ನು ಹೊಡೆಯಲು ಯಾವ ಸಾಧನವೂ ಇಲ್ಲವಂತೆ ಮಾಡಿದನು. ಅನಂತರ ಮೂರ್ಛೆಯಿಂದ ಎಚ್ಚೆತ್ತ ವೀರಭದ್ರನೂ ಸಿಂಹದಂತೆ ಘರ್ಜಿಸುತ್ತಾ ಬಂದನು. ಮತ್ತು ಮಣಿಭದ್ರನೂ ಸೇರಿಕೊಂಡನು. ಇವರಿಬ್ಬರೂ ಬೆಟ್ಟಬೆಟ್ಟಗಳನ್ನೇ ಕಿತ್ತುತಂದು ಆ ರಥದಮೇಲೆ ಕುಳಿತಿರುವ ಜಲಂಧರನನ್ನು ಹೊಡೆದರು.

೨೪. ಆ ಬೆಟ್ಟಗಳು ಜಲಂಧರನಮೇಲೆ ಬಿದ್ದುದನ್ನು ನೋಡಿ ಇಬ್ಬರೂ ಘರ್ಜಿಸಿದರು. ಮತ್ತು ವೀರಭದ್ರನು ಅವನನ್ನು ವಜ್ರಮುಷ್ಟಿಯಿಂದ ಹೊಡೆದನು.

೨೫. ಆಗ ಮಣಿಭದ್ರನು ಜಲಂಧರನ ಕಾಲನ್ನು ಹಿಡಿದುಕೊಂಡು ರಥದಿಂದ ಎಳೆದು ಗರ್ರನೆ ತಿರುಗಿಸಿದನು. ಇದು ಆಶ್ಚರ್ಯವಾಗಿದ್ದಿತು.

**ಮಣಿಭದ್ರಗೃಹೀತೋಽಪಿ ದೈತ್ಯರಾಟ್ ಸ ಮಹಾಬಲಃ ।**
**ಹತ್ವಾ ಚರಣಘಾತೇನ ಮಣಿಭದ್ರಮಪಾತಯತ್ ॥ ೨೬ ॥**

**ಜಾಲಂಧರೋ ಮಹಾಬಾಹುರ್ವೀರಭದ್ರಂ ಚ ಮುಷ್ಟಿನಾ ।**
**ಅಥಾಗತಃ ಪರಿವೃತೋ ಗಣೈರ್ವೈ ನಂದಿಕೇಶ್ವರಃ ॥ ೨೭ ॥**

**ಶುಂಭಸ್ತಮಾಗತಂ ದೃಷ್ಟ್ವಾ ರುರೋಧ ಸಹ ಸೈನಿಕೈಃ ।**
**ದ್ವಂದ್ವಯುದ್ಧೈರಥಾಜಗ್ಮುಃ ಗಣಾ ದೈತ್ಯಾಃ ಪರಸ್ಪರಂ ॥ ೨೮ ॥**

**ಶುಂಭಃ ಶಿಲಾದಜಂ ರಾಹುರ್ಮಹಾಕಾಲಂ ರಣೇ ಯಯೌ ।**
**ಕೋಲಾಹಲಂ ನಿಶುಂಭೋಽಥ ಕೇತುಃ ಕಾಲಮಧಾವತ ॥ ೨೯ ॥**

**ಶೈಲೋದರೋ ಗುಹಂ ಜಂಭೋ ಮಾಲ್ಯವಂತಂ ಮಹಾಬಲಃ ।**
**ಮಹಾಪಾರ್ಶ್ವೋ ಯಯೌ ಚಂಡಂ ಚಂಡೀಸೋ ರೋಮಕಂಟಕಂ॥೩೦॥**

---

೨೬. ಮಣಿಭದ್ರನು ತನ್ನ ಕಾಲುಗಳನ್ನು ಹಿಡಿದು ತಿರುಗಿಸುತ್ತಿದ್ದರೂ ಮಹಾಬಲಿಷ್ಠನಾದ ಆ ಜಲಂಧರನು ಆ ಮಣಿಭದ್ರನನ್ನು ಕಾಲುಗಳಿಂದಲೇ ಒದೆದು ಕೆಳಗೆ ಕೆಡವಿದನು.

೨೭. ಅನಂತರ ಆ ಜಲಂಧರನು ವೀರಭದ್ರನನ್ನು ಮುಷ್ಟಿಯಿಂದ ಹೊಡೆದನು. ಇದನ್ನು ನೋಡಿ ನಂದಿಕೇಶ್ವರನು ಗಣಗಳಿಂದ ಕೂಡಿಕೊಂಡು ಬಂದನು.

೨೮. ಆ ನಂದಿಕೇಶ್ವರನು ಬಂದುದನ್ನು ನೋಡಿ ಶುಂಭನು ಸೈನ್ಯಗಳನ್ನು ತೆಗೆದುಕೊಂಡು ಬಂದನು. ಆಗ ಪ್ರಥಮಗಣಗಳಿಗೂ ದೈತ್ಯರಿಗೂ ದ್ವಂದ್ವ ಯುದ್ಧವು ನಡೆಯಿತು.

೨೯–೩೧. ಶುಂಭನು ಶೈಲಾದಿಯನ್ನೂ, ರಾಹುವು ಮಹಾಕಾಲನನ್ನೂ, ನಿಶುಂಭನು ಕೋಲಾಹಲನನ್ನೂ, ಕೇತುವು ಕಾಲನನ್ನೂ, ಶೈಲೋದರನು ಗುಹನನ್ನೂ, ಜಂಭನು ಮಾಲ್ಯವಂತನನ್ನೂ, ಮಹಾಪಾರ್ಶ್ವನು ಚಂಡನನ್ನೂ ಚಂಡೀಶನು ರೋಮಕಂಟಕನನ್ನೂ, ವಿಕಲಾಸನು ಭೃಂಗಿಯನ್ನೂ,

ವಿಕಲಾಸ್ಯೋಽಥ ವೈ ಭೃಂಗಿಮುರುನೇತ್ರೋ ವಿನಾಯಕಂ ।
ಏವಂ ದೈತ್ಯೇಶ್ವರೈಸ್ಸಾರ್ಧಂ ಗಣಾನಾಮಧಿಪಾ ಯಯುಃ ॥ ೩೧ ॥

ಅಥಶುಂಭಾಯುಧೈರ್ಬಾಣೈಃ ಪ್ರಹತಶ್ಚ ಶಿಲಾದಜಃ ।
ಪೂರ್ಣೇಚಕಾರಾದ್ರಿಶೃಂಗೈಃ ಕಪಿಕುಂಡೋ ಮಹತ್ತರೈಃ ॥ ೩೨ ॥

ಶುಂಭಸ್ತೇನಾರ್ದಿತಃ ಶಕ್ತ್ಯಾ ಶೈಲಾದಿಂ ಚ ಜಘಾನ ತಂ ।
ಮಹಾಕಾಲೋ ಜಘಾನಾಽಥ ತಂ ರಾಹುಂ ರಣಮೂರ್ಧನಿ ॥ ೩೩ ॥

ಶಕ್ತ್ಯಾಥ ತಸ್ಯ ಹತವಾನ್ ಸ್ಯಂದನಂ ಸ ಮಹಾದ್ರಿಣಾ ।
ಕೋಲಾಹಲೋ ಹತಃ ಶಕ್ತ್ಯಾ ನಿಶುಂಭೇನ ಪ್ರತಾಪವಾನ್ ॥ ೩೪ ॥

ಶಕ್ತಿಂ ಗೃಹೀತ್ವಾ ಹ್ಯನದತ್ ರಥಂ ಸಾರಥಿನಾ ಸಹ ।
ವಿರಥೇನಾಽಥ ದೈತ್ಯೇನ ಭೃಶಂ ಕ್ರುದ್ಧೇನ ಸಂಯುಗೇ ॥ ೩೫ ॥

---

ಉರುನೇತ್ರನು ವಿನಾಯಕನನ್ನೂ, ಈ ರೀತಿಯಾಗಿ ದೈತ್ಯೇಶ್ವರರೊಡನೆ ಗಣಾಧಿಪತಿಗಳು ಮತ್ತೆ ಯುದ್ಧಕ್ಕೆ ನಿಂತರು.

೩೨. ಶುಂಭನು ಆಯುಧಗಳಿಂದಲೂ ಬಾಣಗಳಿಂದಲೂ ಶಿಲಾದಜನನ್ನು ಹೊಡೆದನು. ಶೈಲಾದಿಯು ದಪ್ಪವಾದ ಕೋಡುಗಲ್ಲುಗಳನ್ನು ತಂದು ಆ ಶುಂಭನನ್ನು ಹೊಡೆದು ಅವನ ಬಾಣ ಆಯುಧಗಳನ್ನು ನಾಶಮಾಡಿದನು.

೩೩. ಶುಂಭನು ಆ ಪರ್ವತಶಿಖರಗಳಿಂದ ನೊಂದವನಾಗಿ ಶೈಲಾದಿಯನ್ನು ಶಕ್ತ್ಯಾಯುಧದಿಂದ ಹೊಡೆದನು. ಇತ್ತ ಮಹಾಕಾಲನು ಯುದ್ಧದಲ್ಲಿ ರಾಹುವನ್ನು ಹೊಡೆದನು.

೩೪–೩೬. ಅನಂತರ ರಾಹುವು ಒಂದು ಪರ್ವತವನ್ನು ತೆಗೆದುಕೊಂಡು ಆ ಮಹಾಕಾಲನ ರಥವನ್ನು ಹೊಡೆದನು. ಆ ಮೇಲೆ ಕೋಲಾಹಲನನ್ನು ನಿಶುಂಭನು ಶಕ್ತ್ಯಾಯುಧದಿಂದ ಹೊಡೆದನು. ಕೋಲಾಹಲನು ಆ ಶಕ್ತ್ಯಾಯುಧವನ್ನು ಹಿಡಿದುಕೊಂಡು ನಿಶುಂಭನ ರಥವನ್ನೂ ಸಾರಥಿಯನ್ನೂ ಹೊಡೆದನು. ರಥವನ್ನು ನಾಶಮಾಡಿಕೊಂಡ ನಿಶುಂಭನು ಕೋಪಗೊಂಡು

**ಕೋಲಾಹಲೋಽಸುರೇಂದ್ರೇಣ ಸಹಸ್ರಫಣಿನಾ ಹತಃ ।**
**ತಂ ಹತ್ವಾ ಚಾಽತಿವೇಗೇನ ರಥಂ ಚಾನ್ಯಮುಪಾಗತಃ　　|| ೩೬ ||**

**ಫಣಿಚಕ್ರಹತಃ ಸಂಖ್ಯೇ ಕ್ಷಣಾನ್ಮೂರ್ಛಾಂ ವಿಹಾಯ ಚ ।**
**ಸ್ವರಥಾಚ್ಚೀಘ್ರಮುತ್ತೀರ್ಯ ಗೃಹೀತ್ವಾ ಖಡ್ಗಚರ್ಮಣೀ　　|| ೩೭ ||**

**ಸರ್ವಂ ಚಕ್ರೇ ನಿಶುಂಭಸ್ಯ ಸ ರಥಾದ್ಯಸಿನಾ ಪೃಥಕ್ ।**
**ಪುನಃ ಸ್ವರಥಮಾರುಹ್ಯ ದೈತ್ಯಂ ಬಾಣೈರತಾಡಯತ್　　|| ೩೮ ||**

**ನಿಶುಂಭೋಽಪ್ಯತಿರೋಷಾಚ್ಚ ತತ್ಪರಾಕ್ರಮವಿಸ್ಮಿತಃ ।**
**ಶಕ್ತ್ಯಾಮಹಾಬಲಸ್ತಸ್ಯ ರಥಂ ಸಾಶ್ವಂ ನ್ಯಸೂದಯತ್　　|| ೩೯ ||**

**ಕೋಲಾಹಲೋ ರಥೇ ಧಾವನ್ ನಿಶುಂಭಂ ವಿರಥೋ ಬಲೀ ।**
**ಗತಃ ಸ ವಿರಥಂ ಚಕ್ರೇ ಸರಥಂ ಭುಜಬಂಧನಾತ್　　|| ೪೦ ||**

---

ಕೋಲಾಹಲನನ್ನು ಸಹಸ್ರಫಣಿ ಎಂಬ ಚಕ್ರದಿಂದ ಹೊಡೆದನು. ನಿಶುಂಭನು ಚಕ್ರದಿಂದ ಕೋಲಾಹಲನನ್ನು ಯೊಡೆದು ಬೇರೆ ರಥದಲ್ಲಿ ಕುಳಿತನು. ಒಡನೆಯೇ ಕೋಲಾಹಲನು ಮೂರ್ಛೆಹೊಂದಿದನು. ಸ್ವಲ್ಪ ಹೊತ್ತಿನಲ್ಲಿಯೇ ಮೂರ್ಛೆಯು ತಿಳಿಯಲು ತನ್ನ ರಥದಿಂದ ಬೇಗನೆ ಇಳಿದು ಖಡ್ಗಚರ್ಮಗಳನ್ನು ಕೈಯ್ಯಲ್ಲಿ ಹಿಡಿದು ಆ ಕತ್ತಿಯಿಂದ ನಿಶುಂಭನ ರಥ ಮುಂತಾದುವುಗಳೆಲ್ಲವನ್ನೂ ಕತ್ತರಿಸಿ ಬೇರೆ ಬೇರೆ ಮಾಡಿದನು. ಮತ್ತೆ ಕೋಲಾಹಲನು ರಥದ ಮೇಲಕ್ಕೆ ಹತ್ತಿ ಬಾಣಗಳಿಂದ ನಿಶುಂಭನನ್ನು ಹೊಡೆದನು. ಅವನ ಪರಾಕ್ರಮದಿಂದ ಆಶ್ಚರ್ಯಗೊಂಡ ನಿಶುಂಭನು ಕೋಪದಿಂದ ಶಕ್ತ್ಯಾಯುಧವನ್ನು ತೆಗೆದುಕೊಂಡು ಆ ಕೋಲಾಹಲನ ರಥ ಕುದುರೆಗಳನ್ನು ನಾಶಮಾಡಿದನು.

೪೦. ಹೀಗೆ ರಥವನ್ನು ಕಳೆದುಕೊಂಡ ಕೋಲಾಹಲನು ಓಡಿಹೋಗಿ ಕೈಯ್ಯಿನ ಹೊಡೆತದಿಂದಲೇ ಆ ನಿಶುಂಭನ ರಥವನ್ನು ನಾಶಮಾಡಿದನು.

ಕೇತುಪುಚ್ಛಂ ಗೃಹೀತ್ವಾ ಚ ಭ್ರಾಮಯಾಮಾಸ ಚಾಂಬರೇ ।
ಕಾಲಶ್ಚಿಕ್ಷೇಪ ಸೋಪ್ಯದ್ರಿಂ ಸ ಚಿಚ್ಛೇದ ಗಿರಿಂ ಜವಾತ್ ॥ ೪೧ ॥

ತಂ ನಗಂ ಚೂರ್ಣಿತಂ ದೃಷ್ಟ್ವಾ ತಾಡಯಾಮಾಸ ಮುಷ್ಟಿನಾ ।
ಕಾಲಶ್ಚೂರ್ಣಿತಸರ್ವಾಂಗಃ ಕೇತುನಾ ಪ್ರಾದ್ರವದ್ಭಯಾತ್ ॥ ೪೨ ॥

ಶೈಲೋದರೋ ರಣೇ ಸ್ಕಂದಂ ಜಘಾನ ಗದಯಾ ಹೃದಿ ।
ಷಡಾನನೋಽಪಿ ತಂ ಶಕ್ತ್ಯಾ ಹತ್ವಾ ಭೂಮಾವಪಾತಯತ್ ॥ ೪೩ ॥

ಶಕ್ತಿಪ್ರಹಾರೇಣ ಮೃತಂ ದಾನವಂ ವೀಕ್ಷ್ಯ ಷಣ್ಮುಖಃ ।
ಜಗರ್ಜ ತತ್ರ ವೈ ಚಿತ್ರಂ ಯಥಾ ಕ್ರೌಂಚೇ ವಿದಾರಿತೇ ॥ ೪೪ ॥

ಮಾಲ್ಯವಾನಥ ಬಾಣೌಘೈರ್ಜಂಭಮಭ್ಯದ್ರವದ್ರಣೇ ।
ಜಂಭೋಽಪಿ ಸಾಯಕೈಸ್ತೀಕ್ಷ್ಣೈರ್ಭಿತ್ವಾ ತಂ ಮೂರ್ಛಿತಂ ಜಹೌ ॥ ೪೫ ॥

---

೪೧. ಕಾಲನು ಕೇತುವಿನ ಬಾಲವನ್ನು ಹಿಡಿದುಕೊಂಡು ಆಕಾಶದಲ್ಲಿ ಗಿರ್ರನೇ ಸುತ್ತಿಸಿ ಎಸೆದನು. ಆಮೇಲೆ ಕೇತುವು ಒಂದು ಬೆಟ್ಟವನ್ನು ತಂದು ಕಾಲನ ಮೇಲೆ ಎಸೆದನು. ಆ ಕಾಲನು ಆ ಬೆಟ್ಟವನ್ನು ಪುಡಿಪುಡಿಯಾಗಿ ಮಾಡಿದನು.

೪೨. ಆ ಬೆಟ್ಟವು ಪುಡಿಪುಡಿಯಾದುದನ್ನು ನೋಡಿ ಕೇತುವು ಮುಷ್ಟಿಯಿಂದ ಕಾಲನನ್ನು ಜಜ್ಜಿದನು. ಕೇತುವಿನಿಂದ ಜಜ್ಜಿಸಿಕೊಂಡ ಕಾಲನು ಭಯದಿಂದ ಓಡಿದನು.

೪೩. ಶೈಲೋದರನು ಯುದ್ಧದಲ್ಲಿ ಗದೆಯಿಂದ ಸ್ಕಂದನಿಗೆ ಎದೆಯಮೇಲೆ ಹೊಡೆದನು. ಆ ಸ್ಕಂದನೂ ಶಕ್ತ್ಯಾಯುಧದಿಂದ ಆ ಶೈಲೋದರನನ್ನು ಹೊಡೆದು ಭೂಮಿಯಲ್ಲಿ ಕೆಡವಿದನು.

೪೪. ಶಕ್ತ್ಯಾಯುಧದ ಏಟಿನಿಂದ ಶೈಲೋದರನು ಸತ್ತುದನ್ನು ನೋಡಿ ಷಣ್ಮುಖನು ಕ್ರೌಂಚಪರ್ವತವನ್ನು ಸೀಳಿದಾಗ ಗರ್ಜಿಸಿದಂತೆ ಗರ್ಜಿಸಿದನು.

೪೫. ಮಾಲ್ಯವಂತನು ಬಾಣಗಳನ್ನು ಬಿಡುತ್ತಾ ಜಂಭಾಸುರನ ಮೇಲೆ ಬಿದ್ದನು. ಜಂಭಾಸುರನೂ ಕೂಡ ಬಾಣದಿಂದ ಆ ಮಾಲ್ಯವಂತನನ್ನು ಮೂರ್ಛೆಗೆಡವಿ ಅವನನ್ನು ಬಿಟ್ಟು ಹೋದನು.

ಮಹಾಪಾರ್ಶ್ವೋ ರಥಂ ಧೃತ್ವಾ ಬಾಣೌಘೈರ್ವಾಜಿವರ್ಜಿತಂ ।
ಲೀಲಯೈವ ಚ ಖೇ ನೀತ್ವಾ ವ್ಯಶ್ವಂ ಚಂಡಮಪಾತಯತ್ ॥ ೪೬ ॥

ವ್ಯಶ್ವಂ ರಥಂ ವಿಲೋಕ್ಯಾಽಥ ತತಶ್ಚಂಡೋಽಗ್ರಹೀದ್ಗದಾಂ ।
ಆಪತಂತಂ ಮಹಾಪಾರ್ಶ್ವಂ ಚಂಡಸ್ತಂ ಗದಯಾ ಹನತ್ ॥ ೪೭ ॥

ಅಚಿಂತ್ಯೈವ ಗದಾಪಾತಂ ಸೋಽಸುರೋಭೃಶದಾರುಣಃ ।
ಪ್ರಹೃತ್ಯ ಮುಷ್ಟಿನಾ ಚಂಡಂ ಪಾತಯಾಮಾಸ ಭೂತಲೇ ॥ ೪೮ ॥

ಚಂಡೀಶಶಸ್ತ್ರಾಭಿಹತೋ ರೋಮಕಂಠೋ ಮಹಾಸುರಃ ।
ಚಂಡೀಶಂ ಪಾದಯೋರ್ಧೃತ್ವಾ ರಥಮೂರ್ಧ್ನಿ ನ್ಯಪಾತಯತ್ ॥ ೪೯ ॥

ಪಪಾತ ಸಹಸಾ ಭೂಮೌ ಯಯೌ ತಂ ಭೀಷಣೇಕ್ಷಣಂ ।
ಉರುನೇತ್ರೇಣ ಸಮರೇ ಹತೋ ಲಂಬೋದರಃ ಶರೈಃ ॥ ೫೦ ॥

---

೪೬. ಮಹಾಪಾರ್ಶ್ವನು ಬಾಣಗಳಿಂದ ಚಂಡನ ರಥದ ಕುದುರೆಗಳನ್ನು ನಾಶಮಾಡಿ ರಥವನ್ನು ಬಹು ಸರಾಗವಾಗಿ ಅಂತರಿಕ್ಷಕ್ಕೆ ಎಸೆದು ಆ ಚಂಡನನ್ನು ಕೆಡವಿದನು.

೪೭. ಚಂಡನು ತನ್ನ ರಥದಲ್ಲಿ ಕುದುರೆಗಳಿಲ್ಲದಿರುವುದನ್ನು ನೋಡಿ ಗದೆಯನ್ನು ತೆಗೆದುಕೊಂಡು ಬಂದನು. ಮೇಲೆ ಬೀಳಲು ಬರುತ್ತಿರುವ ಆ ಮಹಾಪಾರ್ಶ್ವನನ್ನು ಗದೆಯಿಂದ ಹೊಡೆದನು.

೪೮. ಮಹಾಪಾರ್ಶ್ವನು ಆ ಗದೆಯಿಂದ ಬಿದ್ದ ಏಟನ್ನು ಲೆಕ್ಕಿಸದೆ ಮುಷ್ಟಿಯಿಂದಲೇ ಹೊಡೆದು ಚಂಡನನ್ನು ಕೆಳಗೆ ಕೆಡಹಿದನು.

೪೯. ಚಂಡೀಶನ ಶಸ್ತ್ರದ ಏಟನ್ನು ತಿಂದ ಮಹಾಸುರನಾದ ರೋಮಕಂಠನು ಆ ಚಂಡೀಶನ ಕಾಲುಗಳನ್ನು ಹಿಡಿದುಕೊಂಡು ಆ ರಥಕ್ಕೆ ಹೊಡೆದನು.

೫೦. ಕೆಳಗೆ ಬಿದ್ದ ಚಂಡೀಶನು ಆ ಕೋಪಗೊಂಡ ರೋಮಕಂಠನ ಮೇಲೆ ಮತ್ತೆ ಹೋದನು. ಇತ್ತ ಉರುನೇತ್ರನು ಯುದ್ಧದಲ್ಲಿ ವಿನಾಯಕನನ್ನು ಬಾಣಗಳಿಂದ ಹೊಡೆದನು.

ದಂತೇನೋರಸಿ ತಂ ಹತ್ವಾ ಪಾತಯಾಮಾಸ ಭೂತಲೇ ।
ಉರುನೇತ್ರಃ ಕ್ಷಣಾಚ್ಛಾಂತಿ ಮಾಗತ್ಯಾಖು ರಥಂ ಕ್ಷಣಾತ್ ॥ ೫೧ ॥

ಜಘಾನ ಮುದ್ಗರೇಣಾಸೌ ಮೂರ್ಧ್ನಿ ಸಿಂದೂರಮಂಡಿತೇ ।
ಗಣೇಶ್ವರಃ ಪಟ್ಟಿಶೇನ ಜಘಾನೋರಸಿ ದಾನವಂ ॥ ೫೨ ॥

ತಸ್ಮುಖಾದಥನಿಷ್ಕ್ರಾಂತೋ ನವಶೀರ್ಷೋಽಸುರೋ ಮಹಾನ್ ।
ಅಷ್ಟಾದಶಭುಜೈಃ ರಾಜನ್ ಸೋಽಪ್ಯಧಾವತ ಶಾಂಕರಂ ॥ ೫೩ ॥

ನವಶೀರ್ಷೋರುನೇತ್ರಾಭ್ಯಾಂ ರಣೇ ರುದ್ಧೋ ವಿನಾಯಕಃ ।
ಜರ್ಜರೀಕೃತದೇಹೋಽಪಿ ಜಗ್ರಾಹ ಪರುಶುಂ ರುಷಾ ॥ ೫೪ ॥

ತೇನ ಚಿಚ್ಛೇದ ಶಸ್ತ್ರಾಣಿ ತಯೋರಾಜೌ ಗಣೇಶ್ವರಃ ।
ರುದ್ಧಂ ಗಣೇಶ್ವರಂ ದೃಷ್ಟ್ವಾ ತಾಭ್ಯಾಂ ಸಂಖ್ಯೇಽಥ ಷಣ್ಮುಖಃ ॥ ೫೫ ॥

---

೫೧–೫೨. ಆಗ ಗಣೇಶನು ದಂತಗಳಿಂದ ಉರುನೇತ್ರನ ಎದೆಗೆ ತಿವಿದು ಕೆಳಗೆ ಕೆಡವಿದನು. ಅನಂತರ ಉರುನೇತ್ರನು ಕ್ಷಣಕಾಲದಲ್ಲಿಯೇ ಸುಧಾರಿಸಿ ಕೊಂಡು ಗಣೇಶನನ್ನು ಚಂದ್ರವನ್ನು ಬಳಿದುಕೊಂಡಿರುವ ತಲೆಯ ಮೇಲೆ ಮುದ್ಗರದಿಂದ ಹೊಡೆದನು. ಅನಂತರ ಗಣೇಶನು ಪಟ್ಟಿಶಾಯುಧದಿಂದ ಆ ರಾಕ್ಷಸನ ಎದೆಗೆ ಹೊಡೆದನು.

೫೩. ಆಗ ಆ ಉರುನೇತ್ರನ ಬಾಯಿಂದ ಒಂಭತ್ತು ತಲೆಗಳೂ ಹದಿನೆಂಟು ಭುಜಗಳೂ ಉಳ್ಳ ಬಲಿಷ್ಠನಾದ ರಾಕ್ಷಸನು ಹುಟ್ಟಿ ಗಣೇಶನ ಮೇಲೆ ಬಿದ್ದನು.

೫೪. ನವಶೀರ್ಷ ಉರುನೇತ್ರರು ಯುದ್ಧದಲ್ಲಿ ವಿನಾಯಕನನ್ನು ಹೊಡೆದು ದೇಹವನ್ನು ನಜ್ಜುಗುಜ್ಜುಮಾಡಿದರು. ಆದರೂ ಗಣೇಶನು ಚೇತರಿಸಿಕೊಂಡು ಕೋಪದಿಂದ ಕೊಡಲಿಯನ್ನು ಹಿಡಿದನು.

೫೫–೫೬. ಗಣೇಶನು ಆ ಕೊಡಲಿಯಿಂದ ಯುದ್ಧದಲ್ಲಿ ಅವರ ಶಸ್ತ್ರಗಳನ್ನು ಕತ್ತರಿಸಿದನು. ಇವರಿಬ್ಬರೂ ಗಣೇಶನೊಡನೇ ಯುದ್ಧಮಾಡುವುದನ್ನು ನೋಡಿ

ಶೀಘ್ರಮಾಗತ್ಯ ಸೇನಾನೀರ್ಜಘಾನ ನವಶೀರ್ಷಕಂ ।
ನವಶೀರ್ಷಂ ರಣೇ ಹತ್ವಾ ಉರುನೇತ್ರಮುಧಾವತ || ೫೬ ||

ಸ್ಕಂದಃ ಸ್ವಶಕ್ತಿಘಾತೇನ ಪಾತಯಾಮಾಸ ತಂ ನೃಪ ।
ಪಶ್ಯನ್ ಜಾಲಂಧರಃ ಸ್ಕಂದಂ ಯಯೌ ಸೈನ್ಯೇನ ಸಂವೃತಃ || ೫೭ ||

ಪುತ್ರಪ್ರೀತ್ಯಾಸುರಾನ್ಹಂತುಂ ಸಗಣಃ ಶಂಕರೋಽಪಿ ಚ ।
ತತೋ ಘೋರತರಂ ಯುದ್ಧಮಭೂದದ್ಭುತಸೈನ್ಯಯೋಃ || ೫೮ ||

ಹರಸಿಂಧುಜಯೋರ್ಯುದ್ಧೇ ಗತಪ್ರಾಣೇ ಚ ರೋದಸೀ ।
ಅಥ ಜಾಲಂಧರಃ ಕ್ರುದ್ಧಃ ಬಾಣಂ ಸಂಧಾಯ ದಾರುಣಂ || ೫೯ ||

ಸಹಸ್ರಶತಸಂಖ್ಯಾಕೈಃ ಪತ್ರೈಃ ಸರ್ವತ್ರಭೂಷಿತಂ ।
ದೈತ್ಯೇಂದ್ರಸ್ತೇನ ಬಾಣೇನ ಲಲಾಟೇಽತಾಡಯಚ್ಛಿವಂ || ೬೦ ||

---

ಷಣ್ಮುಖನು ಅಲ್ಲಿಗೆ ಬಂದು ನವಶೀರ್ಷಕನನ್ನು ಹೊಡೆದು ಕೊಂದು ಅನಂತರ ಉರುನೇತ್ರನನ್ನು ಎದುರಿಸಿದನು.

೫೭. ಆಗ ಸ್ಕಂದನು ತನ್ನ ಶಕ್ತ್ಯಾಯುಧದ ಏಟಿನಿಂದ ಆ ಉರುನೇತ್ರನನ್ನು ಕೆಡಹಿದನು. ಇದನ್ನು ಜಲಂಧರನು ನೋಡಿ ಸೇನೆಯೊಡನೆ ಅಲ್ಲಿಗೆ ಬಂದನು.

೫೮. ಮಗನ ಮೇಲಿನ ಪ್ರೀತಿಯಿಂದ ದೈತ್ಯರನ್ನು ಕೊಲ್ಲಲು ಶಂಕರನು ಪ್ರಮಥಗಣಗಳೊಡನೆ ಅಲ್ಲಿಗೆ ಬಂದನು. ಆಗ ಆ ಎರಡು ಸೈನ್ಯಗಳಿಗೂ ಘೋರವಾದ ಯುದ್ಧವು ನಡೆಯಿತು.

೫೯–೬೦. ಹೀಗೆ ಹರ ಜಲಂಧರರಿಗೆ ಯುದ್ಧನಡೆಯುತ್ತಿರಲು ಭೂಮ್ಯಾಕಾಶಗಳು ಸ್ತಬ್ಧವಾಗಿದ್ದುವು. ಅನಂತರ ಜಲಂಧರನು ಕೋಪಗೊಂಡು ಸಾವಿರಾರು ಪತ್ರಗಳಿಂದ ಅಲಂಕೃತವಾದ ಕ್ರೂರವಾದ ಬಾಣವನ್ನು ಧನುಸ್ಸಿನಲ್ಲಿ ಹೂಡಿ ಆ ಬಾಣದಿಂದ ಶಿವನ ಹಣೆಯನ್ನು ಹೊಡೆದನು.

ಮುಮುಜ್ಜಾಪುಂಖಮುರ್ಯಾವಂ ಲಲಾಟೇ ಶಂಕರಸ್ಯ ಚ ।
ಭಾಲೇ ಶಶಾಂಕವಜ್ಜೃಂಭೋಃ ಸ ರರಾಜ ಮಹಾಪ್ರಭಃ ॥ ೬೧ ॥

ಯಥಾದಿತ್ಯೋ ಹಿ ಘರ್ಮಾಂತೇ ಸಂಧ್ಯಾಕಾಲೇಽಂಬುದಾಗಮೇ ।
ಅಥ ರುದ್ರೋ ಮಹಾಬಾಣಂ ಜಗ್ರಾಹ ಜ್ವಲನೋಪಮಂ ॥ ೬೨ ॥

ಯಸ್ಯ ವೇಗೇ ತು ಪವನಃ ಫಲೇ ಯಸ್ಯಾಗ್ನಿಭಾಸ್ಕರೌ ।
ಕಾಲೋ ಗ್ರಂಥಿಷು ಸರ್ವೇಷು ಶರೇ ದೇವೀ ಧರಾ ಸ್ಥಿತಾ ॥ ೬೩ ॥

ಹರಸ್ತೇನ ಶರೇಣಾಶು ವಿವ್ಯಾಧ ಹೃದಿ ಸಿಂಧುಜಂ ।
ತೇನ ಬಾಣಪ್ರಹಾರೇಣ ರುಧಿರೌಘಪರಿಪ್ಲುತಃ ॥ ೬೪ ॥

ಪಪಾತ ಶರಭಿನ್ನಾಂಗೋ ವಜ್ರಾಹತ ಇವಾಚಲಃ ।
ತದಾ ದೈತ್ಯಾಸ್ಸಮಾಕ್ರಂದನ್ ಜಗರ್ಜುಃ ಪ್ರಮಥಾಸ್ತಥಾ ॥ ೬೫ ॥

---

೬೧. ಆ ಬಾಣವು ಬುಡದವರೆಗೂ ಆ ಶಂಕರನ ಹಣೆಯಲ್ಲಿ ನೆಟ್ಟು ಕೊಂಡಿತು. ಅದನ್ನು ನೋಡಿದರೆ ಶಂಭುವಿನ ಹಣೆಯಲ್ಲಿ ಚಂದ್ರನಿದ್ದಂತೆ ಆ ಬಾಣವು ಪ್ರಕಾಶಿಸಿತು.

೬೨–೬೩. ಬಿಸಿಲು ಕಾಲದ ಕೊನೆಯಲ್ಲಿ ಮೋಡಗಳು ಬಂದಿರುವಾಗ ಸಂಧ್ಯಾಕಾಲದ ಸಮಯದಲ್ಲಿ ಸೂರ್ಯನು ಪ್ರಕಾಶಿಸುವಂತೆ ಆ ಬಾಣವು ಪ್ರಕಾಶಿಸಿತು. ಅನಂತರ ರುದ್ರನು ಅಗ್ನಿಗೆ ಸದೃಶವಾದ ಒಂದು ಬಾಣವನ್ನು ಹೂಡಿದನು. ಅದರ ವೇಗದಲ್ಲಿ ವಾಯುವೂ ಹರಿತವಾದ ಬಾಯಲ್ಲಿ ಅಗ್ನಿ ಸೂರ್ಯರೂ ಗಂಟುಗಳಿರುವಲ್ಲೆಲ್ಲಾ ಕಾಲನೂ ಆ ಬಾಣದ ಎಲ್ಲಾ ಕಡೆಯಲ್ಲೂ ಭಾರಕ್ಕೋಸ್ಕರ ಭೂಮಿಯೂ ನಿಂತರು.

೬೪–೬೬. ಹರನು ಆ ಬಾಣದಿಂದ ಜಲಂಧರನ ಎದೆಗೆ ಹೊಡೆದನು. ಆ ಬಾಣದ ಏಟಿನಿಂದ ಆ ದೈತ್ಯನ ಎದೆಯು ಸೀಳಿ ಮೈಯೆಲ್ಲವೂ ರಕ್ತವಾಗಿ ವಜ್ರಾಯುಧದ ಏಟಿನಿಂದ ಬಿದ್ದ ಪರ್ವತದಂತೆ ಕೆಳಕ್ಕೆ ಬಿದ್ದನು. ಆಗ ದೈತ್ಯರೆಲ್ಲರೂ ಅತ್ತರು. ಪ್ರಮಥರೆಲ್ಲರೂ ಗರ್ಜಿಸಿದರು. ಜಲಂಧರನು ಮೂರ್ಛೆ

ಸಿಂಧುಜಂ ಮೂರ್ಛಿತಂ ದೃಷ್ಟ್ವಾ ರುರುಧುರ್ದಾನವಾಶ್ಶಿವಂ ।
ರಕ್ಷಾರ್ಥಮುದ್ಯತಾಃ ಕೇಚಿತ್ ಕೇಚಿತ್ತಂ ಪರಿತಃ ಸ್ಥಿತಾಃ ॥ ೬೬ ॥

ಯಾವಜ್ಜಾಲಂಧರೋ ಮೂರ್ಛಾಂ ಪ್ರಾಪ್ತೋ ವಿಜಯನಂದನ ।
ತಾವದ್ರುದ್ರೇಣ ನಾರಾಚೈಃ ಹತಾ ಜಾಲಂಧರೀ ಚಮೂಃ ॥ ೬೭ ॥

ಚಿರಾಜ್ಜಾಲಂಧರಸ್ತ್ಯಕ್ತ್ವಾ ಮೂರ್ಛಾಂ ಸೈನ್ಯಂ ಹತಂ ನೃಪ ।
ದೃಷ್ಟ್ವಾ ಭಯಾನ್ವಿತಃ ಸೇನಾಂ ವಿಕೀರ್ಣಾಂ ಚ ತಥಾ ರಣೇ ॥ ೬೮ ॥

ತತಃ ಕಾವ್ಯಂ ಸ ಸಸ್ಮಾರ ಮನಸಾ ಪರಮಂ ಗುರುಂ ।
ಸ್ಮೃತಸ್ತೇನ ತ್ವರನ್ಪ್ರಾಪ್ತಃ ಕವಿರ್ಜಾಲಂಧರಂ ಪ್ರತಿ ॥
ಸ್ವಸ್ತಿಕೃತ್ವಾ ಜಗಾದಾಥ ಭಾರ್ಗವಸ್ಸಿಂಧುನಂದನಂ ॥ ೬೯ ॥

॥ ಭಾರ್ಗವ ಉವಾಚ ॥

ಕಿಂ ಕರೋಮಿ ಮಹಾರಾಜ ತವ ಕಾರ್ಯಂಮಹಾಬಲ ॥ ೭೦ ॥

---

ಹೋದುದನ್ನು ನೋಡಿ ದಾನವರು ಶಿವನನ್ನು ಮುತ್ತಿಗೆಹಾಕಿದರು. ಕೆಲವರು ಆ ಜಲಂಧರನ ಉಪಚಾರಕ್ಕೆ ನಿಂತರು. ಮತ್ತೆ ಕೆಲವರು ಅವನ ಸುತ್ತಲೂ ನಿಂತರು.

೬೭. ಎಲೈ ಧರ್ಮರಾಜನೇ ! ಈ ಜಲಂಧರನು ಮೂರ್ಛೆಬಿದ್ದಿರುವ ಸಮಯದಲ್ಲೇ ಶಿವನು ಆತನ ಸೈನ್ಯವೆಲ್ಲವನ್ನೂ ಬಾಣಗಳಿಂದ ಹೊಡೆದನು.

೬೮. ಬಹಳ ಹೊತ್ತಿನ ಮೇಲೆ ಜಲಂಧರನಿಗೆ ಮೂರ್ಛೆತಿಳಿದು ಎಚ್ಚರವು ಆಯಿತು. ಆಗ ತನ್ನ ಸೈನ್ಯವೆಲ್ಲವೂ ಏಟು ತಿಂದು ಸತ್ತಿರುವುದನ್ನೂ ಭಯದಿಂದ ರಣರಂಗವನ್ನು ಬಿಟ್ಟು ಓಡುತ್ತಿರುವುದನ್ನೂ ನೋಡಿ ಭಯಗೊಂಡನು.

೬೯. ಆಗ ಜಲಂಧರನು ಪರಮ ಗುರುವಾದ ಶುಕ್ರಾಚಾರ್ಯನನ್ನು ಮನಸ್ಸಿನಿಂದಲೇ ಸ್ಮರಿಸಿದನು. ಹಾಗೆ ಸ್ಮರಿಸಿದೊಡನೆಯೇ ಅವಸರದಿಂದ ಆ ಶುಕ್ರನು ಜಲಂಧರನ ಬಳಿಗೆ ಓಡಿಬಂದನು. ಬಂದು "ಸ್ವಸ್ತಿ" ಎಂದು ಹೇಳಿ ಆ ಜಲಂಧರನನ್ನು ಕುರಿತು ಇಂತೆಂದನು.

೭೦. ಶುಕ್ರನು ಹೇಳಿದನು– ಎಲೈ ಮಹಾರಾಜನೂ ಮಹಾ ಬಲನೂ ಆದ ಜಲಂಧರನೇ ! ಈಗ ನಾನು ನಿನಗೇನು ಮಾಡಲಿ ? ಹೇಳು.

|| ನಾರದ ಉವಾಚ ||

ಇತಿ ಕಾವ್ಯವಚಃ ಶ್ರುತ್ವಾ ಭಾರ್ಗವಂ ಬಹುಮಾನಯನ್ ।
ನತ್ವಾ ಗುರುಮುವಾಚಾಽಥ ರಾಜನ್ ಜಾಲಂಧರಸ್ತಥಾ || ೭೧ ||

|| ರಾಜೋವಾಚ ||

ಜೀವಯೈತಾನ್ ಮೃತಾನ್ ದೈತ್ಯಾನ್ ಕವೇ ಸರ್ವಾನ್ ಸಮಂತತಃ||೭೨

|| ನಾರದ ಉವಾಚ ||

ಇತ್ಯುಕ್ತಸ್ಸಿಂಧುಜೇನಾಜೌ ಸೈನ್ಯಂ ತತ್ರ ವ್ಯಲೋಕಯತ್ ।
ಪಂಚವಿಂಶತ್ಸಹಸ್ರಾಣಿ ಯೋಜನಾನಾಂ ಪ್ರಮಾಣತಃ || ೭೩ ||

ದೈತ್ಯಾಂಗರಥಸಂಕೀರ್ಣಂ ಹ್ಯುಪರ್ಯುಪರಿ ಪಾರ್ಥಿವ ।
ಉಚ್ಛ್ರಾಯೇ ಪಂಚನವತಿಂ ಯೋಜನಾನಿ ಮಹೀಚಿತಂ || ೭೪ ||

ಯೋಧವಾಹನದೇಹೌಘೈಃ ಅವಪೂರ್ಣಾಂ ಧರಾಂ ತತಃ ।
ಮಂತ್ರೋದಕೇನ ಚಾಭ್ಯುಕ್ಷ್ಯ ದೈತ್ಯಾನುತ್ಥಾಪಯತ್ಕವಿಃ || ೭೫ ||

---

೭೧. ನಾರದನು ಹೇಳಿದನು– ಜಲಂಧರನು ಶುಕ್ರನ ಈ ಮಾತನ್ನು ಕೇಳಿ ಆತನನ್ನು ಗೌರವಿಸುತ್ತ ಅವನಿಗೆ ನಮಸ್ಕರಿಸಿ ಅನಂತರ ಇಂತೆಂದನು.

೭೨. ರಾಜನು ಹೇಳಿದನು– ಎಲೈ ಶುಕ್ರಾಚಾರ್ಯನೇ ! ಈರೀತಿ ಎಲ್ಲಾ ಕಡೆಯಲ್ಲಿಯೂ ಬಿದ್ದಿರುವ ಈ ದೈತ್ಯರನ್ನೆಲ್ಲಾ ಬದುಕಿಸು.

೭೩. ನಾರದನು ಹೇಳಿದನು– ಜಲಂಧರನು ಹೀಗೆ ಹೇಳುತ್ತಲೂ ಆಗ ಶುಕ್ರನು ಇಪ್ಪತ್ತೈದು ಸಾವಿರದ ಯೋಜನಗಳ ವಿಸ್ತೀರ್ಣಕ್ಕೆ ಸತ್ತು ಬಿದ್ದಿರುವ ದೈತ್ಯ ಸೈನ್ಯವನ್ನು ನೋಡಿದನು.

೭೪–೭೫. ದೈತ್ಯರ ದೇಹ, ರಥ, ಇವುಗಳೆಲ್ಲವೂ ಒಂದರಮೇಲೊಂದು ಬಿದ್ದಿದ್ದುವು. ಇವುಗಳ ಉದ್ದವು ತೊಂಭತ್ತೈದು ಯೋಜನಗಳಿದ್ದವು. ಈ ರೀತಿ ಯೋಧರು, ವಾಹನಗಳು ಇವುಗಳಿಂದ ಕೂಡಿರುವ ಭೂಮಿಯನ್ನು ಆ ಶುಕ್ರನು ಮಂತ್ರದ ನೀರಿನಿಂದ ಚುಮುಕಿಸಿ ಎಬ್ಬಿಸಿದನು.

ಯಾವದ್ರುದ್ರೋ ಜಟಾಜೂಟಂ ಬಬಂಧ ಭುಜಗೈರ್ದೃಢಂ ।
ತಾವತ್ಕಾವ್ಯೇನ ತತ್ಸೈನ್ಯಂ ಮಂತ್ರೇಣೋತ್ಥಾಪಿತಂ ನೃಪ ॥ ೭೬ ॥

ವ್ಯಾಘ್ರಾ ಯಥಾ ಕೇಸರಿಣಂ ಗಜೇಂದ್ರಂ ಸೂಕರಾ ಯಥಾ ।
ಆಗತಾನ್ದಾನವಾನ್ ದೃಷ್ಟ್ವಾ ಚಿಂತಯಾಮಾಸ ಶಂಕರಃ ॥ ೭೭ ॥

ಕಿಮೇತದಿಹ ಸಂಯಾತಂ ಮೃತಾನ್ಸೃಜತಿ ಕುತ್ರಚಿತ್ ।
ದದರ್ಶ ಚಿಂತಯನ್ಕಾವ್ಯಂ ಇತಿ ತಸ್ಮಿನ್ರಣೇ ಭವಃ ॥ ೭೮ ॥

ಜೀವಯಂತಂ ರಣೇ ದೈತ್ಯಾನ್ ಧಾವಂತಂ ವೇಗವತ್ತರಂ ।
ತತಃ ಕ್ರುದ್ಧೋ ಮಹಾದೇವಃ ಶುಕ್ರಂ ಹಂತುಂ ಮನೋ ದಧೇ ॥ ೭೯ ॥

ತ್ರಿಶೂಲಂ ಮನಸಾಜ್ಞಾಯ ರಹಶ್ಚೋವಾಚ ತಂ ಕವಿಃ ॥ ೮೦ ॥

---

೭೬. ರುದ್ರನು ತನ್ನ ಜಟೆಯನ್ನು ಹಾವುಗಳಿಂದ ಬಿಗಿಯಾಗಿ ಕಟ್ಟುವುದರೊಳಗೆ, ಈ ಶುಕ್ರನು ದೈತ್ಯಸೈನ್ಯವೆಲ್ಲವನ್ನೂ ಮಂತ್ರದ ನೀರನ್ನು ಚುಮುಕಿಸಿ ಎಬ್ಬಿಸಿದನು.

೭೭. ಹುಲಿಗಳು ಸಿಂಹದ ಬಳಿಗೂ, ಹಂದಿಗಳು ಆನೆಯ ಬಳಿಗೂ ಬರುತ್ತಿರುವಂತೆ ತನ್ನ ಬಳಿಗೆ ಬರುತ್ತಿರುವ ಆ ಸೈನ್ಯವನ್ನು ನೋಡಿ ಶಂಕರನು ಯೋಚಿಸಿದನು.

೭೮. ಆಗ ಶಿವನು ಇದೇನಿದು ? ಏನಾಯಿತು ? ಎಲ್ಲಿಯೋ ಯಾರೋ ಇದ್ದುಕೊಂಡು ಸತ್ತವರನ್ನೆಲ್ಲಾ ಬದುಕಿಸುತ್ತಿರುವರಲ್ಲ ? ಎಂದು ಯೋಚಿಸುತ್ತ ಶುಕ್ರನು ಅಲ್ಲೆಲ್ಲಾ ಓಡಾಡುತ್ತಿರುವುದನ್ನು ಕೊನೆಗೆ ಕಂಡನು.

೭೯–೮೦. ಆ ಶುಕ್ರನು ರಣರಂಗದಲ್ಲಿ ಎಲ್ಲಾಕಡೆಗೂ ಓಡಾಡುತ್ತಾ ದೈತ್ಯರಿಗೆ ಪ್ರಾಣವನ್ನು ಸೇರಿಸುತ್ತಾ ಇದ್ದನು. ಇದನ್ನು ನೋಡಿ ಮಹಾದೇವನು ಆ ಶುಕ್ರನನ್ನು ಕೊಲ್ಲಬೇಕೆಂದು ಮನಸ್ಸುಮಾಡಿದನು. ಹೀಗೆ ಮನಸ್ಸುಮಾಡಿ ತ್ರಿಶೂಲವನ್ನು ತೆಗೆದುಕೊಳ್ಳಲು ಇದನ್ನು ನೋಡಿ ಶುಕ್ರನು ಶಂಕರನಿಗೆ ಗುಟ್ಟಾಗಿ ಇಂತೆಂದನು.

|| ಕವಿರುವಾಚ ||

ಬ್ರಾಹ್ಮಣಂ ಮಾಂ ಕಥಂ ಹಂಸಿ ಸರ್ವವಿದ್ಯಾವಿಶಾರದಂ ।
ಬ್ರಹ್ಮಹತ್ಯಾ ಮಯಿ ಹತೇ ತವ ರುದ್ರ ಭವಿಷ್ಯತಿ || ೮೧ ||

|| ನಾರದ ಉವಾಚ ||

ಇತಿ ಶ್ರುತ್ವಾ ಕವೇರ್ವಾಕ್ಯಂ ಶೂಲಂ ತತ್ಯಾಜ ಶಂಕರಃ ।
ಸ್ಮೃತ್ವಾ ತತ್ಪೂರ್ವವೃತ್ತಾಂತಂ ಯಲ್ಲಗ್ನಂ ಬ್ರಹ್ಮಣಶ್ಶಿರಃ || ೮೨ ||

ಬ್ರಾಹ್ಮಣೋ ನ ಹಿ ಹಂತವ್ಯೋ ಹರನ್ಪ್ರಾಣಾನಪಿ ಪ್ರಿಯಾನ್ ।
ಅಯಂ ತು ಜೀವಯನ್ದೈತ್ಯಾನ್ನಿಗ್ರಾಹ್ಯಸ್ಸರ್ವಥಾ ಮಯಾ || ೮೩ ||

ತಸ್ಮಾದೇನಂ ಕ್ಷಿಪಾಮ್ಯಾಶು ಸ್ತ್ರೀಯೋನೌ ದೈತ್ಯಜೀವನಂ ।
ಏವಮುಕ್ತವತಃ ಶಂಭೋಃ ತೃತೀಯನಯನಾದ್ಭುತಂ || ೮೪ ||

---

೮೧. ಶುಕ್ರನು ಹೇಳಿದನು- ನಾನು ಬ್ರಾಹ್ಮಣನು. ಅಲ್ಲದೇ ಎಲ್ಲಾ ವಿದ್ಯೆಗಳಲ್ಲಿಯೂ ಗಟ್ಟಿಗನು. ಇಂತಹ ನನ್ನನ್ನು ಹೇಗೆ ಕೊಲ್ಲುತ್ತೀಯೆ ? ಕೊಲ್ಲಬಾರದು. ನನ್ನನ್ನು ಕೊಂದರೆ, ಎಲೈ ರುದ್ರನೇ ! ನಿನಗೆ ಬ್ರಹ್ಮಹತ್ಯೆಯು ಬರುತ್ತದೆ.

೮೨. ನಾರದನು ಹೇಳಿದನು- ಆಗ ಶುಕ್ರನ ಈ ಮಾತನ್ನು ಕೇಳಿ ಶಂಕರನು ತನಗೆ ಅಂಟಿಕೊಂಡಿದ್ದ ಬ್ರಹ್ಮನ ತಲೆಯ ಸಂಬಂಧವಾದ ಪೂರ್ವ ವಿಷಯವನ್ನು ಜ್ಞಾಪಿಸಿಕೊಂಡು ಆ ಶೂಲವನ್ನು ಬಿಸುಟನು.

೮೩. ಮನುಷ್ಯನಿಗೆ ಹಿತಕರಗಳಾದ ಪ್ರಾಣಗಳನ್ನು ನಾಶಮಾಡುತ್ತಿದ್ದರೂ ಬ್ರಾಹ್ಮಣನನ್ನು ಕೊಲ್ಲಬಾರದು. ಇವನು ದೈತ್ಯರನ್ನು ಬದುಕಿಸುತ್ತಿದ್ದಾನೆ. ನಾನು ಇವನನ್ನು ಖಂಡಿತವಾಗಿ ದಂಡಿಸಬೇಕು.

೮೪-೮೫. ಆದುದರಿಂದ ದೈತ್ಯರಿಗೆ ಜೀವವನ್ನು ಕೊಡುತ್ತಿರುವ ಇವನನ್ನು ಹೆಂಗಸರ ಯೋನಿಯಲ್ಲಿ ವಾಸಿಸುವಂತೆ ಮಾಡುತ್ತೇನೆ. ಶಂಭುವು ಹೀಗೆ ಹೇಳುತ್ತಲೂ ಅವನ ಮೂರನೆಯ ಕಣ್ಣಿನಿಂದ ಒಂದು ಅದ್ಭುತವಾದ ವ್ಯಕ್ತಿಯು

ಕೃತ್ಯಾ ವಿವಾಸಾ ಚೋತ್ಪನ್ನಾ ಮುಕ್ತಕೇಶೀ ಮಹೋದರಾ ।
ಸ್ಥೂಲಲಂಬಸ್ತನೀ ಯೋನಿದಂಷ್ಟ್ರಾ ಲೋಚನಭೀಷಣಾ ॥
ಆಜ್ಞಾಪಯೇತಿ ಸ ತಯಾ ಪ್ರೋಕ್ತಸ್ತಾಮಬ್ರವೀಚ್ಛಿವಃ ॥ ೮೫ ॥

॥ ಶಿವ ಉವಾಚ ॥

ಕೃತ್ಯೇ ತ್ವಂ ದಾನವಾಚಾರ್ಯಂ ಸ್ವಯೋನೌ ಕ್ಷಿಪ ದುರ್ಮತಿಂ ।
ಯಾವಜ್ಜಾಲಂಧರಂ ಹನ್ಮಿ ತಾವದೇನಂ ಭಗೇ ವಹ ॥ ೮೬ ॥

ಹತೇ ಜಾಲಂಧರೇ ದೈತ್ಯೇ ಪಶ್ಚಾನ್ನಿಸ್ಸಾರ್ಯ ಮೋಚಯ ॥ ೮೭ ॥

॥ ನಾರದ ಉವಾಚ ॥

ಹರೇಣೋಕ್ತೇತಿ ಸಾ ಕೃತ್ಯಾ ಭಾರ್ಗವಂ ಸಮಧಾವತ ।
ಪಪಾತ ಭೂಮೌ ತಾಂ ದೃಷ್ಟ್ವಾ ಕವಿರ್ದೈತ್ಯಾಃ ಪ್ರದುದ್ರುವುಃ ॥ ೮೮ ॥

---

ಹುಟ್ಟಿತು. ಅವಳು ತಲೆಯನ್ನು ಕೆದರಿಕೊಂಡು ದೊಡ್ಡ ಹೊಟ್ಟೆಯುಳ್ಳವಳಾಗಿಯೂ, ದಪ್ಪವಾಗಿಯೂ ನೇತಾಡುತ್ತಲೂ ಇರುವ ಸ್ತನಗಳುಳ್ಳವಳಾಗಿಯೂ, ಮತ್ತು ಯೋನಿಯಲ್ಲಿ ಹಲ್ಲುಳ್ಳವಳಾಗಿಯೂ, ಹೆದರಿಕೆಯನ್ನುಂಟುಮಾಡುವ ಕಣ್ಣುಗಳುಳ್ಳವಳಾಗಿಯೂ ಇದ್ದಳು. ಹುಟ್ಟಿದೊಡನೆಯೇ ಇವಳು ಏನು ಮಾಡಬೇಕು? ಅಪ್ಪಣೆ ಕೊಡು. ಎಂದು ಶಿವನನ್ನು ಕೇಳಿದಳು.

೮೬–೮೭. ಶಿವನು ಹೇಳಿದನು–ಎಲೈ ಕೃತ್ಯೆಯೇ! ಈ ದುಷ್ಟನೂ ದಾನವರ ಆಚಾರ್ಯನೂ ಆದ ಶುಕ್ರನನ್ನು ನಾನು ಜಲಂಧರನನ್ನು ಕೊಲ್ಲುವವರೆಗೂ ನಿನ್ನ ಯೋನಿಯೊಳಗಿಟ್ಟುಕೊಂಡಿರು. ಜಲಂಧರನ ವಧೆಯಾಗುತ್ತಲೂ ಹೊರಕ್ಕೆ ಹೊರಡಿಸಿ ಅವನನ್ನು ಬಿಟ್ಟುಬಿಡು.

೮೮. ನಾರದನು ಹೇಳಿದನು–ಹರನು ಹೇಳಿದೊಡನೆಯೆ ಆ ಕೃತ್ಯೆಯು ಶುಕ್ರನನ್ನು ಹುಡುಕುತ್ತಾ ಓಡಿದಳು. ಇವಳನ್ನು ನೋಡಿ ಶುಕ್ರನು ನೆಲದಮೇಲೆ ಬಿದ್ದುಬಿಟ್ಟನು. ಮಿಕ್ಕ ದೈತ್ಯರೆಲ್ಲರೂ ಓಡಿಹೋದರು.

ಕೇಶೇಷ್ವಾಕೃಷ್ಯ ಧುನ್ವಾನಾ ನಗ್ನಮಾಲಿಂಗ್ಯ ಭಾರ್ಗವಂ ।
ಯೋನೌ ದಧಾರ ಸಾ ಕೃತ್ಯಾ ಹಸಂತೀ ಜಯನಂದನ ॥ ೮೯ ॥

ಭಗೇ ಕ್ಷಿಪ್ತಂ ಗುರುಂ ದೃಷ್ಟ್ವಾ ಯಾವಜ್ಜಾಲಂಧರೋಽಸುರಃ ।
ಸಂದಧೇ ಮಾರ್ಗಣಾಂ ಸ್ತಾವತ್ಸಾ ಕೃತ್ಯಾಽದೃಶ್ಯತಾಂ ಗತಾ ॥ ೯೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಶುಕ್ರಯೋನಿಪ್ರವೇಶೋ ನಾಮ ಅಷ್ಟಾದಶೋಽಧ್ಯಾಯಃ

---

೮೯. ಆ ಶುಕ್ರನ ಜುಟ್ಟನ್ನು ಹಿಡಿದುಕೊಂಡು ಒದರುತ್ತಿರಲು ಅವನ ಬಟ್ಟೆಗಳೆಲ್ಲವೂ ಬಿದ್ದುಹೋದುವು. ಅವನು ಬೆತ್ತಲೆಯಾಗಿರಲು ಆ ಕೃತ್ಯೆಯು ನಗುತ್ತ ಅವನನ್ನು ಯೋನಿಯಲ್ಲಿಟ್ಟುಕೊಂಡಳು.

೯೦. ಈ ಕೃತ್ಯೆಯು ಗುರುವಾದ ಶುಕ್ರಾಚಾರ್ಯನನ್ನು ಯೋನಿಯಲ್ಲಿಟ್ಟುಕೊಂಡುದನ್ನು ನೋಡಿ ಜಲಂಧರನು ಬಾಣಗಳನ್ನು ಬಿಟ್ಟು ಆ ಕೃತ್ಯೆಯನ್ನು ಹೊಡೆಯುತ್ತಿರಲು ಆಕೆಯು ಕಣ್ಣಿಗೆ ಕಾಣದಂತೆ ಹೊರಟುಹೋದಳು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ಶುಕ್ರನ ಯೋನಿಪ್ರವೇಶ ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನವಿಂಶೋಽಧ್ಯಾಯಃ ॥



॥ ನಾರದ ಉವಾಚ ॥

**ಅಥ ಜಾಲಂಧರಃ ಪ್ರಾಹ ರಕ್ಷಾತ್ಮಾನಮಿತಶ್ಶಿವಂ ।**
**ಶಿವಾದ್ಯ ತ್ವಾಂ ಕ್ಷಿಪಾಮ್ಯಾಶು ಯತ್ರಾಸ್ತಿ ಮಧುಸೂದನಃ ॥ ೧ ॥**

**ಪಶ್ಚಾದ್ಬ್ರಹ್ಮಾಣಮಾಕೃಷ್ಯ ಪಾತಯಿಷ್ಯಾಮಿ ಸಾಗರೇ ।**
**ಯದಾ ಮಯಾ ಧೃತಾ ಯೂಯಂ ತದಾ ಸರ್ವೇಶ್ವರೋ ಹ್ಯಹಂ॥ ೨ ॥**

**ಇತ್ಯುಕ್ತ್ವಾ ಸೈನ್ಯಸಂಭಾರಂ ನ್ಯಸ್ಯ ಶುಂಭಾಸುರಾದಿಷು ।**
**ಭಟೈರ್ಗುಪ್ತಂ ನಿಶುಂಭಾದ್ಯೈಶ್ಚ ತುರಂಗಮನಂತಕಂ ॥ ೩ ॥**

---

### ಹತ್ತೊಂಭತ್ತನೆಯ ಅಧ್ಯಾಯವು

೧. ನಾರದನು ಹೇಳಿದನು- ಜಲಂಧರನು ಶಿವನನ್ನು ಕುರಿತು ಎಲೈ ಶಿವನೇ ! ನಿನ್ನ ಉತ್ತಮವಾದ ಆತ್ಮನನ್ನು ಕಾಪಾಡಿಕೋ ? ಮಧುಸೂದನನು ಇರುವಲ್ಲಿಗೆ ನಿನ್ನನ್ನು ಎಸೆಯುತ್ತೇನೆ.

೨. ಆಮೇಲೆ ಬ್ರಹ್ಮನನ್ನು ಎಳೆದು ತಂದು ಸಮುದ್ರದಲ್ಲಿ ಕೆಡವುತ್ತೇನೆ. ನಿಮ್ಮ ಮೂರು ಜನರನ್ನೂ ನಾನು ಹಿಡಿದುಬಿಟ್ಟರೆ ಆಮೇಲೆ ನಾನು ಸರ್ವೇಶ್ವರನೆ ಆಗುತ್ತೇನೆ.

೩. ಹೀಗೆಂದು ಹೇಳಿ ನಿಶುಂಭಾದಿ ಶೂರರಿಂದ ಕಾಪಾಡಲ್ಪಡಬಹುವಾದ ಸೈನ್ಯವನ್ನು ಶುಂಭನೇ ಮುಂತಾದವರ ಅಧೀನಕ್ಕೆ ಒಪ್ಪಿಸಿದನು-

ಶುಂಭೋ ನಿಶುಂಭಃ ಫೇಂಕಾರೋ ಭೇರುಂಡೋ ಧೂಮ್ರಲೋಚನಃ ।
ಕೇತುರ್ಬಿಡಾಲಜಂಘಶ್ಚ ರಾಹುರ್ದುರ್ವಾರಣೋ ಮಯಃ ॥ ೪ ॥

ಕಾಲಾಸುರೋಽಥ ಲವಣೋ ಭೂಮಿರೇತೋಂಧಕಾಸುರಃ ।
ರಕ್ತವೀರ್ಯಾದಯಶ್ಚಂಡೋ ಮುಂಡಶ್ಚ ದೈತ್ಯಪುಂಗವಾಃ ॥ ೫ ॥

ಸರ್ವಾನೇವೋದ್ಯತಾನ್ದೃಷ್ಟ್ವಾ ಸಾಂಖ್ಯೇ ದಾನವಪುಂಗವಾನ್ ।
ರುರುಧುಸ್ಸಮರೇ ರಾಜನ್ ವೀರಭದ್ರಾದಯೋ ಗಣಾಃ ॥ ೬ ॥

ತತೋ ಯುದ್ಧಮಭೂದ್ಘೋರಂ ತುಮುಲಂ ರೋಮಹರ್ಷಣಂ ।
ಪತಂತಿ ಪ್ರಮಥಾ ಯತ್ರ ದೈತ್ಯಾಶ್ಚಾಪಿ ಕ್ಷಯಾತುರಾಃ ॥ ೭ ॥

ಅಥ ಶುಂಭಾದಿಭಿರ್ದೈತ್ಯೈಃ ಸರ್ವಶಸ್ತ್ರೈರ್ಮಹಾಮೃಧೇ ।
ಹತಾಃ ಪೇತುರ್ಗಣಾಶ್ಚಾನ್ಯೇ ಪಲಾಯಾಂಚಕ್ರಿರೇ ನೃಪ ॥ ೮ ॥

ಗಣಾನ್ನಿರ್ಜಿತ್ಯ ಸಮರೇ ರುರುಧುರ್ದಾನವಾಶ್ಶಿವಂ ।
ವರ್ಷಂತಃ ಶರಧರಾಭಿಃ ಘನಾ ಮೇರುಗಿರಿಂ ಯಥಾ ॥ ೯ ॥

---

೪–೬. ಶುಂಭ, ನಿಶುಂಭ, ಫೇಂಕಾರ, ಭೇರುಂಡ, ಧೂಮ್ರಲೋಚನ, ಕೇತು, ಬಿಡಾಲಜಂಘ, ರಾಹು, ದುರ್ವಾರಣ, ಮಯ, ಕಾಲಾಸುರ, ಲವಣ, ಭೂಮಿರೇತ, ಅಂಧಕಾಸುರ, ರಕ್ತವೀರ್ಯ, ಚಂಡ, ಮುಂಡ ಇವರೆಲ್ಲರೂ ಯುದ್ಧಕ್ಕೆ ಸಿದ್ಧರಾಗಿರುವುದನ್ನು ನೋಡಿ ವೀರಭದ್ರಾದಿ ಪ್ರಮಥಗಣಗಳು ಅವರನ್ನು ಎದುರಿಸಿದರು.

೭. ಅನಂತರ ಘೋರವಾಗಿ ರೋಮಾಂಚವನ್ನುಂಟು ಮಾಡುವ ತುಮುಲ ಯುದ್ಧವು ನಡೆಯಿತು. ಪ್ರಮಥಗಣಗಳು ಹೋದೆಡೆಯಲ್ಲೆಲ್ಲಾ ದೈತ್ಯರು ನಾಶವಾಗುತ್ತಿದ್ದರು.

೮. ಅನಂತರ ಬಿಲ್ಲಾಳುಗಳಲ್ಲಿ ಉತ್ತಮರಾದ ಶುಂಭನೇ ಮುಂತಾದ ದೈತ್ಯರು ಅನೇಕ ಪ್ರಮಥರನ್ನು ಕೊಂದರು. ಕೆಲವರು ಓಡಿಹೋಗುತ್ತಿದ್ದರು.

೯. ಈ ದಾನವರು ಗಣಗಳನ್ನು ಜಯಿಸಿ ಮೋಡಗಳು ಮೇರುಪರ್ವತದ ಮಳೆಯನ್ನು ಸುರಿಸುವಂತೆ ಬಾಣಗಳ ಮಳೆಯನ್ನು ಸುರಿಸುತ್ತ ಶಂಕರನನ್ನು ಮುತ್ತಿದರು.

ತತಃ ಪಿನಾಕಮಾಕೃಷ್ಯ ವೃಷಭೋಪರಿ ಭೈರವಃ ।
ಜಘಾನ ಬಾಣನಿವಹೈರ್ದಾನವಾನ್ಸಮರಾಂಗಣೇ ॥ ೧೦ ॥

ತೀಕ್ಷ್ಣಾಗ್ರೈಸ್ತು ಕ್ಷುರಪ್ರಖ್ಯೈರ್ದಾನವಾನಹನದ್ಬಲೀ ।
ಕೇಚಿನ್ನಂದೀ ಪ್ರಹಾರೇಣ ಪೇತುಸ್ಸಂಗ್ರಾಮ ಮೂರ್ಧನಿ ॥ ೧೧ ॥

ಬಾಣೈಶ್ಚ ಜರ್ಜರಾನ್ಕೃತ್ವಾ ಕುಂಭಾದೀನ್ವೃಷಭಧ್ವಜಃ ।
ಶೇಷಂ ಸೈನ್ಯಂ ಜಘಾನಾಶು ಶಸ್ತ್ರಾಸ್ತ್ರೈಸ್ಸಮರಾಂಗಣೇ ॥ ೧೨ ॥

ಗಜೈರ್ನರೈರ್ಹಯೈರ್ವ್ಯಾಪ್ತಂ ಪತಿತೈಸ್ಸಮರಾಂಗಣಂ ।
ಬಭೂವ ವಜ್ರನಿರ್ಭಿನ್ನೈಃ ಪರ್ವತೈರಿವ ಭೂತಲಂ ॥ ೧೩ ॥

ಅಥ ಮಾಯಾಮಯೀಂ ಗೌರೀಂ ವಿದಧೇ ಸಿಂಧುನಂದನಃ ।
ಸೌಂದರ್ಯಗುಣಸಂಪನ್ನಾಂ ಸರ್ವಾಲಂಕಾರ ಭೂಷಿತಾಂ ॥
ಜಯಾಂ ಮಾಯಾಮಯೀಂ ಕೃತ್ವಾ ತಾಮುವಾಚಾಬ್ಧಿನಂದನಃ ॥ ೧೪ ॥

---

೧೦–೧೧. ಅನಂತರ ಬಸವನ ಮೇಲೆ ಶಿವನು ಕುಳಿತು ಪಿನಾಕವೆಂಬ ಧನುಸ್ಸನ್ನು ಎಳೆಯುತ್ತಾ ಬಾಣಗಳ ಮಳೆಯಿಂದ ಯುದ್ಧದಲ್ಲಿ ದಾನವರನ್ನು ಕೊಂದನು. ಈ ರೀತಿಯಾಗಿ ಶಿವನು ಚೂಪಾದ ಬಾಣಗಳಿಂದ ದಾನವರನ್ನು ಕೊಂದನು. ನಂದಿಯ ಏಟಿನಿಂದಲೂ ಕೆಲವರು ಯುದ್ಧದಲ್ಲಿ ಮಡಿದರು.

೧೨–೧೩. ಹೀಗೆ ಶಿವನು ಬಾಣಗಳಿಂದ ಕುಂಭನೇ ಮುಂತಾದವರನ್ನು ಜಜ್ಜಿ ನುಗ್ಗು ನುಗ್ಗು ಮಾಡಿ ಉಳಿದ ಸೈನ್ಯವನ್ನು ಶಸ್ತ್ರಗಳಿಂದಲೂ ಅಸ್ತ್ರಗಳಿಂದಲೂ ಕೊಂದನು. ವಜ್ರಾಯುಧದಿಂದ ಕತ್ತರಿಸಲ್ಪಟ್ಟ ಪರ್ವತಗಳಿಂದ ಭೂಮಿಯು ಮುಚ್ಚಿಕೊಂಡಿದ್ದಂತೆ, ಆನೆ, ಕುದುರೆ, ಮನುಷ್ಯರು ಸತ್ತು ಬಿದ್ದಿರುವುದರಿಂದ ಯುದ್ಧ ಭೂಮಿಯು ಮುಚ್ಚಿಕೊಂಡಿದ್ದಿತು.

೧೪. ಅನಂತರ ಜಲಂಧರನು ಮಾಯೆಯಿಂದ ಉಮೆಯನ್ನು ಸೃಷ್ಟಿಸಿದನು. ಸೌಂದರ್ಯವತಿಯಾಗಿಯೂ ಸಮಸ್ತಗುಣಗಳಿಂದಲೂ ಕೂಡಿದವಳಾಗಿಯೂ ಎಲ್ಲಾ ಅಲಂಕಾರದಿಂದಲೂ ಭೂಷಿತಳಾಗಿಯೂ ಇರುವಂತೆ ಸೃಷ್ಟಿಸಿದನು. ಆಕೆಯ ಸಖಿಯಾದ ಜಯೆಯನ್ನೂ ಸೃಷ್ಟಿಸಿ ಆಕೆಯನ್ನು ಕುರಿತು ಆ ಜಲಂಧರನು ಇಂತೆಂದನು.

|| ಜಾಲಂಧರ ಉವಾಚ ||

ಗಚ್ಛ ತ್ವಂ ಪುರತೋ ರುದ್ರಂ ವಿಮೋಹಯ ರಣೇ ದ್ರುತಂ || ೧೫ ||

|| ನಾರದ ಉವಾಚ ||

ಇತ್ಯುಕ್ತ್ವಾ ದೈತ್ಯಪತಿನಾ ಯಯೌ ಮಾಯಾಮಯೀ ಜಯಾ |
ರಣೇ ಗತ್ವಾ ಶಿವಸ್ಯಾಗ್ರೇ ಮುಕ್ತಕೇಶೀ ರುರೋದ ಹ || ೧೬ ||

ಪೃಷ್ಟ್ವಾ ಹರೇಣ ಸಾ ಪ್ರಾಹ ಮಾನಸೋತ್ತರಪರ್ವತಾತ್ |
ಹೃತಾ ತವ ಪ್ರಿಯಾ ದೇವ ಪಾರ್ವತೀ ಸಿಂಧುಸೂನುನಾ ||
ಶ್ರುತ್ವೇತಿ ವಚನಂ ತಸ್ಯಾಸ್ತಾಮುವಾಚ ವೃಷಧ್ವಜಃ || ೧೭ ||

|| ಶಿವ ಉವಾಚ ||

ಜಯೇ ತ್ವಮೇಹಿ ವೃಷಭಂ ತ್ವಾಂ ಹನಿಷ್ಯಂತಿ ದಾನವಾಃ || ೧೮ ||

---

೧೫. ಜಲಂಧರನು ಹೇಳಿದನು- ಎಲೈ ಜಯೆಯೆ! ನೀನು ಶಿವನ ಎದುರಿಗೆ ಹೋಗಿ ಅವನಿಗೆ ಜಾಗ್ರತೆಯಾಗಿ ಬುದ್ಧಿವ್ಯತ್ಯಾಸವಾಗುವಂತೆ ಮಾಡು.

೧೬. ನಾರದನು ಹೇಳಿದನು- ಜಲಂಧರನು ಹೀಗೆನ್ನಲು ಆ ಜಯೆಯು ತಲೆಯನ್ನು ಕೆದರಿಕೊಂಡು ಆ ಶಿವನ ಬಳಿಗೆ ಹೋಗಿ ಅವನೆದುರಿಗೆ ಅಳಲು ಮೊದಲಿಟ್ಟಳು.

೧೭. ಹರನು ಇದೇಕೆ ಅಳುತ್ತಿದ್ದೀಯೆ? ಎಂದು ಕೇಳಲು ಆಕೆಯು ಎಲೈ ಶಿವನೇ! ನಿನಗೆ ಪ್ರೀತಿಪಾತ್ರಳಾದ ಹೆಂಡತಿಯಾದ ಪಾರ್ವತಿಯನ್ನು ಜಲಂಧರನು ಮಾನಸೋತ್ತರಪರ್ವತದಿಂದ ಕದ್ದು ತಂದಿದ್ದಾನೆ ಎಂದಳು. ಆಕೆಯ ಈ ಮಾತನ್ನು ಕೇಳಿ ಶಿವನು ಇಂತೆಂದನು.

೧೮. ಶಿವನು ಹೇಳಿದನು- ಎಲೈ ಜಯೆಯೆ! ನೀನು ಈ ಬಸವನ ಮೇಲೆ ಬಂದು ಕುಳಿತುಕೋ. ನಿನ್ನನ್ನು ಈ ದಾನವರು ಕೊಂದಾರು.

॥ ನಾರದ ಉವಾಚ ॥

ತತೋ ವೃಷಭಮಾರುಹ್ಯ ಜಯಾ ಚಾಲಿಂಗ್ಯ ಶಂಕರಂ ।
ಪ್ರಾಹ ಪ್ರಯಾಮಿ ಪಾರ್ವತ್ಯಾ ನ ಜೀವಾಮಿ ವಿನಾ ಹರ ॥ ೧೯ ॥

ಚಂದ್ರಂ ಶಂಭುಜಟಾವಿಷ್ಟಂ ಗೃಹೀತ್ವಾ ವೃಷಭಾದ್ದ್ರುತಂ ।
ಅವರೋಹತ ಸಾ ಮಾಯಾ ಮಾಯಾತ್ಯಕ್ತೋ ರಣಂ ಯಯೌ ॥ ೨೦ ॥

ತತೋ ಗೌರೀಂ ಹೃತಾಂ ಶ್ರುತ್ವಾ ಚಿಂತಯಾಮಾಸ ಶಂಕರಃ ।
ದೈತ್ಯಮಾಯಾಪರಿಷ್ವಕ್ತೋ ನಾತ್ಮಾನಂ ಬುಬುಧೇ ನೃಪ ॥ ೨೧ ॥

ಏತಸ್ಮಿನ್ನಂತರೇ ಪ್ರಾಪ್ತಃ ಸೈನ್ಯೇನ ಮಹತಾವೃತಃ ।
ಮಾಯಾಮೃಡಾನೀಂ ಸ್ವರಥೇ ನಿಧಾಯಾರ್ಣವಜಶ್ಶಿವಂ ॥ ೨೨ ॥

---

೧೯. ನಾರದನು ಹೇಳಿದನು– ಆಮೇಲೆ ಜಯೆಯು ಎತ್ತಿನ ಮೇಲೆ ಕುಳಿತುಕೊಂಡು ಶಂಕರನನ್ನು ಆಲಂಗಿಸಿಕೊಂಡಳು. ಆಮೇಲೆ ಎಲೈ ಶಂಕರನೆ! ನಾನು ಇಳಿದು ಹೊರಟುಹೋಗುತ್ತೇನೆ. ಪಾರ್ವತಿಯನ್ನು ಬಿಟ್ಟು ಬದುಕಲಾರೆ.

೨೦. ಆ ಜಯೆಯು ಹೀಗೆಂದು ಹೇಳಿ ಶಂಭುವಿನ ಜಡೆಯಲ್ಲಿರುವ ಚಂದ್ರನನ್ನು ಹಿಡಿದುಕೊಂಡು ಎತ್ತಿನಿಂದ ಕೆಳಗಿಳಿದಳು. ಹೀಗೆ ಅವಳು ಕೆಳಕ್ಕೆ ಇಳಿದ ಮೇಲೆ ಶಂಭುವು ಮತ್ತೆ ಯುದ್ಧರಂಗಕ್ಕೆ ಹೊರಟನು.

೨೧. ಜಲಂಧರನು ಗೌರಿಯನ್ನು ಕದ್ದುಕೊಂಡು ಹೋಗಿರುವುದನ್ನು ಕೇಳಿ ಶಂಕರನು ಯೋಚನೆಗೊಳಗಾದನು. ಆದರೆ ಈ ದೈತ್ಯನ ಮಾಯೆಯಿಂದ ತಾನು ಕೂಡಿದ್ದೇನೆಂಬುದನ್ನು ಆ ಶಂಕರನು ತಿಳಿದುಕೊಳ್ಳಲೇ ಇಲ್ಲ.

೨೨. ಶಿವನು ಹೀಗೆ ಯೋಚಿಸುತ್ತಿರಲು ಜಲಂಧರನು ಬಹುವಾದ ಸೈನ್ಯವನ್ನು ಕಟ್ಟಿಕೊಂಡು ಮಾಯೆಯಿಂದ ಪಾರ್ವತಿಯನ್ನು ಸೃಷ್ಟಿಮಾಡಿ ಆಕೆಯನ್ನು ತನ್ನ ರಥದಲ್ಲಿ ಕೂರಿಸಿಕೊಂಡು ಶಿವನ ಎದುರಿಗೆ ಯುದ್ಧಕ್ಕೆ ಬಂದನು.

ಜಾಲಂಧರಜಯೋ ತದ್ವದಾಸೀದ್ವಾದಿತ್ರನಿಸ್ವನಃ ।
ಚಚಾಲ ವಸುಧಾ ಯೇನ ಪ್ರತಿನೇದುರ್ಮಹೀಧರಾಃ ॥ ೨೩ ॥

ಹರಸ್ಯ ದರ್ಶಯಾಮಾಸ ಪಾರ್ವತೀಂ ಸಿಂಧುನಂದನಃ ।
ರುದ್ರೋಽಪ್ಯರಿರಥಸ್ಥಾಂ ತಾಂ ದದರ್ಶ ನಿಜವಲ್ಲಭಾಂ ॥ ೨೪ ॥

ವಿಯೋಗವಿಧುರಾಂ ದೀನಾಂ ತನ್ವೀಮಾತುರಲೋಚನಾಂ ।
ಹಾ ನಾಥ ಪ್ರಿಯ ರುದ್ರೇತಿ ಪ್ರಜಲ್ಪಂತೀಂ ಪುನಃ ಪುನಃ ॥ ೨೫ ॥

ಪ್ರೌಢವೈರಿರಥೇ ದೃಷ್ಟ್ವಾ ಪಾಷಂಡಿಸ್ಥಾ ಯಥಾ ಶ್ರುತಿಃ ।
ಗೌರೀಂ ದಧ್ಯೌ ತಥಾ ಸ್ಥಾಣುಃ ಕಥಂ ಪ್ರಾಪ್ಯಾ ಮಯಾ ಪ್ರಿಯಾ ॥ ೨೬ ॥

ವಿಲಲಾಪ ತತಃ ಶಂಭುಃ ದೈತ್ಯಮಾಯಯಾ ವಿಮೋಹಿತಃ ।
ಮದ್ರಾಮಾ ದಾನವೈಃ ಕಾಂತೇ ಹೃತಾಽಸಿ ತ್ವಂ ಕಥಂ ಪ್ರಿಯೇ ॥ ೨೭ ॥

---

೨೩. ಆಗ ಜಲಂಧರನು ಜಯಿಸಿದನೆಂಬುದಾಗಿ ಭೂಮಿಯು ನಡುಗುವ ಹಾಗೆ ಭೇರಿಗಳನ್ನು ಹೊಡೆಸಿದನು. ಈ ಶಬ್ದದಿಂದ ಬೆಟ್ಟಗಳೆಲ್ಲವೂ ಪ್ರತಿಧ್ವನಿ ಮಾಡಿದುವು.

೨೪. ಆಗ ಜಲಂಧರನು ಪಾರ್ವತಿಯನ್ನು ಹರನಿಗೆ ತೋರಿಸಿದನು. ರುದ್ರನೂ ಕೂಡ ಶತ್ರುವಿನ ರಥದಲ್ಲಿರುವ ಪಾರ್ವತಿಯನ್ನು ನೋಡಿದನು.

೨೫. ಆಕೆಯು ಈ ರುದ್ರನ ವಿಯೋಗದಿಂದ ಬಡವಾಗಿದ್ದಳು. ಸಂಕಟ ಪಡುತ್ತಿದ್ದಳು. ಕಣ್ಣುಗಳಲ್ಲಿ ಸಂಕಟದ ಚಾಂಚಲ್ಯತೆಯು ತೋರುತ್ತಿದ್ದಿತು. ಹಾನಾಥ! ಹಾಪ್ರಿಯ! ಹಾರುದ್ರ! ಎಂಬುದಾಗಿ ಬಾರಿಬಾರಿಗೂ ಅರಚುತ್ತಿದ್ದಳು.

೨೬. ವೇದದಿಂದ ಬಾಹ್ಯರಾಗಿರುವವರಲ್ಲಿ ವೇದವು ಇರುವಂತೆ ಯುವಕನಾಗಿಯೂ ಶೂರನಾಗಿಯೂ ಇರುವ ಶತ್ರುವಿನ ರಥದಲ್ಲಿ ಕುಳಿತಿರುವ ಗೌರಿಯನ್ನು ಈ ಶಿವನು ನೋಡಿ ತಾನು ಈತನನ್ನು ಜಯಿಸಿ ಈ ಪಾರ್ವತಿಯನ್ನು ಹೇಗೆ ಹೊಂದಲಿ ? ಎಂದು ಯೋಚಿಸಿದನು.

೨೭. ದೈತ್ಯನ ಆ ಮಾಯೆಯಿಂದ ಬುದ್ಧಿಗೆಟ್ಟ ಶಂಭುವು ಎಲೈ ಕಾಂತೆಯೆ! ನನ್ನ ಹೆಂಡತಿಯಾದ ನೀನೂ ಕೂಡ ದಾನವರಿಂದ ಕದಿಯಲ್ಪಟ್ಟಿರುವೆಯಲ್ಲ ? ಇದು ಹೇಗೆ ? ಅಯ್ಯೋ ಪ್ರಿಯಳೇ ! ಎಂದು ಚಿಂತಾಕ್ರಾಂತನಾದನು.

ಶೋಕಮೋಹಪ್ಲುತಂ ದೃಷ್ಟ್ವಾ ಶಂಕರಂ ಸಾಗರಾತ್ಮಜಃ ।
ಜಗಾದ ಪ್ರಹಸನ್ವಾಕ್ಯಂ ಕಶ್ಚಿತ್ಕಾರುಣ್ಯವಾನ್ಯಥಾ　　　　॥ ೨೮ ॥

॥ ಜಾಲಂಧರ ಉವಾಚ ॥

ಸರ್ವ ಪ್ರಮಾಣಶೂನ್ಯೋಽಸಿ ಸ್ಮರ ಶೃಂಗಾರವರ್ಜಿತಃ ।
ಈಶ್ವರೋಽಪಿ ವರಾಕಸ್ತ್ವಂ ಸಂಜಾತೋಽಂಬಿಕಯಾ ವಿನಾ　　　　॥ ೨೯ ॥

ಮಾ ರುದಿಹಿ ವಿರೂಪಾಕ್ಷ ದದಾಮಿ ತವ ವಲ್ಲಭಾಂ ।
ರಕ್ಷಿತೋಽಸಿ ಮಯಾ ರುದ್ರ ಗೃಹೀತ್ವಾ ಪಾರ್ವತೀಂ ರಣಾತ್　　　　॥ ೩೦ ॥

॥ ನಾರದ ಉವಾಚ ॥

ಇತ್ಯುಕ್ತ್ವಾ ಗಿರಿಶಂ ತೂರ್ಣಂ ಉತ್ತಾರ್ಯ ಸ್ವರಥಾದುಮಾಂ ।
ಸೈನ್ಯಂ ಸಂಪ್ರೇಷಯಾಮಾಸ ಶಂಕರಾಭಿಮುಖಂ ಕಿಲ　　　　॥ ೩೧ ॥

---

೨೮. ಜಲಂಧರನು ದುಃಖ ಮತ್ತು ಅಜ್ಞಾನಗಳಿಂದ ಕೂಡಿರುವ ಈ ಶಂಕರನನ್ನು ನೋಡಿ ನಗುತ್ತಾ ಯಾವನೋ ಒಬ್ಬ ನೊಂದವನಲ್ಲಿ ದಯೆ ಉಳ್ಳವರು ಮಾತನಾಡುವಂತೆ ಮಾತನಾಡಿದನು. (ಹೇಳಿದನು)

೨೯. ಜಂಧರನು ಹೇಳಿದನು– ಎಲೈ ಶಿವನೇ! ಈಗ ನಿನ್ನನ್ನು ನೋಡಿದರೆ ನಿನ್ನಲ್ಲಿ ಈ ಪಾರ್ವತಿಯು ಇಲ್ಲದಿರುವುದರಿಂದ ವೇದಶಾಸ್ತ್ರಗಳನ್ನೆಲ್ಲಾ ಬಿಟ್ಟಂತೆ ಕಾಣುತ್ತೀಯೆ. ಮನ್ಮಥನ ಶೃಂಗಾರವನ್ನು ಒಂದನ್ನೂ ಹೊಂದಿದಂತೆಯೇ ಕಾಣುವುದಿಲ್ಲ. ನೀನು ಪ್ರಪಂಚಕ್ಕೆ ಈಶ್ವರನಾಗಿದ್ದರೂ ಈ ಪಾರ್ವತಿಯು ಇಲ್ಲದಿರುವುದರಿಂದ ಉಪಯೋಗವಿಲ್ಲದ ಬಡಪಾಯಿಯಾದ ಬಿಕ್ಷುಕನಂತೆ ಕಾಣುತ್ತೀಯೆ.

೩೦. ಎಲೈ ವಿರೂಪಾಕ್ಷನೆ! ನೀನು ದುಃಖಿಸಬೇಡ. ನಿನ್ನ ಹೆಂಡತಿಯನ್ನು ಕೊಡುತ್ತೇನೆ. ಈ ಪಾರ್ವತಿಯನ್ನು ರಣರಂಗದಲ್ಲಿ ಬಿಡುತ್ತೇನೆ. ಹಿಡಿದುಕೊಂಡು ಕರೆದುಕೊಂಡು ಹೋಗು. ನಿನ್ನನ್ನು ಬಿಟ್ಟುಬಿಡುತ್ತೇನೆ.

೩೧. ನಾರದನು ಹೇಳಿದನು–ಈ ರೀತಿಯಾಗಿ ಶಂಕರನಿಗೆ ಹೇಳಿ ಆ ಪಾರ್ವತಿಯನ್ನು ರಥದಿಂದ ಕೆಳಗಿಳಿಸಿ ಶಂಕರನು ಆಕೆಯನ್ನು ಹಿಡಿದುಕೊಳ್ಳುವಂತೆ ಸೈನ್ಯವನ್ನು ಆ ಶಂಕರನ ಎದುರಿಗೆ ಕಳುಹಿಸಿದನು.

ಹರೋಽಪಿ ವೃಷಭೇಣಾಶು ತತ್ಸೈನ್ಯಂ ಸಮುಧಾವತ ।
ಗೃಹೀತುಂ ಪಾರ್ವತೀಂ ಯಾಹಿ ತ್ರಾಹಿ ತ್ರಾಹೀತಿ ಜಲ್ಪತೀಂ ॥ ೩೨ ॥

ಯಾವದ್ಗೃಹ್ಣಾತಿ ತಾಂ ಗೌರೀಂ ಕರೇಣ ವೃಷಭಧ್ವಜಃ ।
ತಾವಜ್ಜುಂಭಾಸುರಶ್ಶೀಘ್ರಂ ಗೃಹೀತ್ವಾ ಚಾಂಬರೇ ಸ್ಥಿತಃ ॥ ೩೩ ॥

ಶೂಲಂ ಮುಮೋಚ ಬಲವಾನ್ ಹಂತುಂ ಶುಂಭಾಸುರಂ ಹರಃ ।
ಶುಂಭೇನ ಸಾ ಪರಿತ್ಯಕ್ತಾ ಶೂಲೋಪರಿ ಪಪಾತ ಚ ॥ ೩೪ ॥

ರುದತೀ ಚಾರುಸರ್ವಾಂಗೀ ತ್ಯಕ್ತಾ ಶೂಲೇನ ಸಂಯುತಾ ।
ಪತಿತಾ ಶಂಕರಸ್ಯಾಗ್ರೇ ತಥಾ ತ್ಯಕ್ತಾ ಮಮಾರ ಚ ॥ ೩೫ ॥

ಮಾಯಾಗೌರೀಂ ಮೃತಾಂ ದೃಷ್ಟ್ವಾ ಶೋಕಮೋಹಪರಿಪ್ಲುತಃ ।
ಹಾ ಪ್ರಿಯೇತಿ ರುದನ್ರುದ್ರಃ ಪಪಾತ ಭುವಿ ಮೂರ್ಛಿತಃ ॥ ೩೬ ॥

---

೩೨. ಆಗ ಆ ಪಾರ್ವತಿಯು ನನ್ನನ್ನು ಕರೆದುಕೋ, ಬಾ. ಕಾಪಾಡು, ಕಾಪಾಡು. ಎಂದು ಕೂಗಿಕೊಳ್ಳುತ್ತಿದ್ದಳು. ಇದನ್ನು ಶಂಕರನು ಕೇಳಿ ಆಕೆಯನ್ನು ಹಿಡಿದುಕೊಳ್ಳಲು ಎದುರಾಗಿ ಬಂದ ದೈತ್ಯ ಸೈನ್ಯದ ಮೇಲೆ ಬಿದ್ದನು.

೩೩. ಶಂಕರನ ಕೈಯ್ಯಿಂದ ಗೌರಿಯನ್ನು ಹಿಡಿದುಕೊಳ್ಳುವಷ್ಟರಲ್ಲಿ ಶುಂಭಾಸುರನು ಬೇಗ ಬಂದು ಆ ಗೌರಿಯನ್ನು ಹಿಡಿದುಕೊಂಡು ಆಕಾಶಕ್ಕೆ ಹಾರಿ ಹೋದನು.

೩೪. ಆ ಅಂತರಿಕ್ಷದಲ್ಲಿರುವ ಶುಂಭಾಸುರನನ್ನು ಕೊಲ್ಲಲು ಹರನು ಶೂಲವನ್ನು ಬಿಟ್ಟನು. ಆಗ ಆ ಶುಂಭನು ಗೌರಿಯನ್ನು ಬಿಟ್ಟುಬಿಡಲು ಆಕೆಯು ಶೂಲದ ಮೇಲೆ ಬಿದ್ದಳು.

೩೫. ಆಗ ಆಕೆಯು ಶೂಲವು ಚುಚ್ಚಿಕೊಳ್ಳಲು ಅಳುತ್ತಾ ಕೆಳಗೆ ಶಂಕರನ ಎದುರಿಗೆ ಬಿದ್ದಳು. ಒಡನೆಯೇ ಸತ್ತುಹೋದಳು.

೩೬. ಈ ಮಾಯಾಗೌರಿಯು ಸತ್ತುಹೋಗಲು ಇದನ್ನು ಶಂಕರನು ನೋಡಿ ದುಃಖಪಡುತ್ತಾ ಬುದ್ಧಿಶೂನ್ಯನಾಗಿ, ಅಯ್ಯೋ ಪ್ರಿಯಳೆ! ಎಂದಳುತ್ತಾ ಕೆಳಗೆ ಬಿದ್ದು ಮೂರ್ಛೆಹೋದನು.

ಕ್ಷಣಂ ಸಂಜ್ಞಾಮವಾಪ್ಯಾಥ ರಣಭೂಮಾವುಮಾಪತಿಃ ।
ಶಶಾಪ ಶುಂಭಪ್ರಮುಖಾನ್ ಗೌರೀ ಯುಷ್ಮಾನ್ಹನಿಷ್ಯತಿ || ೩೭ ||

|| ನಾರದ ಉವಾಚ ||

ಅಥ ಶುಂಭಾದಯೋ ದೈತ್ಯಾ ರಣೇ ದೇವ್ಯಾ ನಿಪಾತಿತಾಃ ।
ಮಹೇಶ್ವರಸ್ಯ ಶಾಪೇನ ಗತೇ ಮನ್ವಂತರೇ ನೃಪ || ೩೮ ||

ಶಪಿತ್ವಾ ತಾನ್ರುರೋದಾಽಥ ಜಲ್ಪನ್ನಿರ್ಗತ್ಯ ಶಂಕರಃ ।
ಕ್ವ ಗತಾಸಿ ಪ್ರಿಯೇತ್ಯುಕ್ತ್ವಾ ದುಃಖಿತಂ ಮಾಂ ರಣಾಂಗಣೇ || ೩೯ ||

ರತಿಂ ತ್ಯಕ್ತ್ವಾ ವಿಯೋಗಾರ್ತಃ ಶ್ರೀಕಂಠೋಽಹಂ ತ್ವಯಾಕೃತಃ ।
ವಾಸುದೇವೋಽಪಿ ಮಾಂ ತ್ಯಕ್ತಂ ನ ಜಾನಾತಿ ತ್ವಯಾ ಪ್ರಿಯೇ || ೪೦ ||

ಯಜ್ಞೇ ದಕ್ಷಸ್ಯಾಗ್ನಿಕುಂಡೇ ಪುರಾ ದೇಹೋ ಹುತಸ್ತ್ವಯಾ ।
ಭೂಯೋ ಹಿಮವತೋ ಲಬ್ಧ್ವಾ ಕಥಂ ತ್ಯಜಸಿ ಮಾಂ ಪುನಃ || ೪೧ ||

---

೩೭. ಅನಂತರ ಕ್ಷಣಕಾಲವ ಮೇಲೆ ರುದ್ರನಿಗೆ ಜ್ಞಾನ ಬಂದಿತು. ಒಡನೆಯೆ ಆ ಶುಂಭಾದಿಗಳನ್ನು ನೋಡಿ ಗೌರಿಯೇ ನಿಮ್ಮೆಲ್ಲರನ್ನೂ ಕೊಲ್ಲುತ್ತಾಳೆ. ಎಂದು ಶಪಿಸಿದನು.

೩೮. ನಾರದನು ಹೇಳಿದನು—ಅನಂತರ ಒಂದು ಮನ್ವಂತರವು ಕಳೆದಮೇಲೆ ಮಹೇಶ್ವರನ ಶಾಪದಂತೆ ಆ ಶುಂಭಾದಿಗಳೆಲ್ಲರನ್ನೂ ಪಾರ್ವತಿಯೇ ಯುದ್ಧದಲ್ಲಿ ಕೊಂದಳು.

೩೯. ಈ ರೀತಿ ರುದ್ರನು ಅವರಿಗೆ ಶಾಪಕೊಟ್ಟು ಎಲ್ಲೈ ಪ್ರಿಯಳೆ! ಎಲ್ಲಿ ಹೋದೆ? ಎಂದಳುತ್ತಾ ಕೂಗುತ್ತಾ ಆ ಯುದ್ಧರಂಗವಲ್ಲೆಲ್ಲಾ ಓಡಾಡಿದನು.

೪೦. ಈಗ ನನಗೆ ಸುಖವೆಂಬುದೇ ಇಲ್ಲ. ದುಃಖದಿಂದ ಕೂಡಿದವನಾಗಿ ವಿಷಕಂಠನೆಂಬ ಹೆಸರನ್ನು ಸಾರ್ಥಕವಾಗಿ ಮಾಡಿಕೊಂಡೆನು. ವಾಸುದೇವನೂ ಕೂಡ ನೀನು ನನ್ನನ್ನು ಬಿಟ್ಟಿರುವುದನ್ನು ತಿಳಿಯನು.

೪೧. ಹಿಂದೆ ದಕ್ಷನ ಯಜ್ಞಕುಂಡದಲ್ಲಿ ನಿನ್ನ ದೇಹವನ್ನು ಕೆಡಗಿಕೊಂಡು ಹೋಮಮಾಡಿದೆ. ನನ್ನನ್ನು ನೀನು ಬಿಡಲಾರದೆ ಮತ್ತೆ ಹಿಮವಂತನಲ್ಲಿ ಜನ್ಮವನ್ನು ಹೊಂದಿದೆ. ಈಗ ಹೇಗೆ ತಾನೆ ನನ್ನನ್ನು ಬಿಟ್ಟುಬಿಟ್ಟೆ?

ಉತ್ತಿಷ್ಠೋತ್ತಿಷ್ಠ ಚಾರ್ವಂಗಿ ಗಿರಿಜೇ ಮಾಂ ಪ್ರಬೋಧಯ ।
ಅತ್ರಾಂತರೇ ಏವಂ ಜ್ಞಾತ್ವಾ ದೈತ್ಯಮಾಯಾವಿಮೋಹಿತಂ ॥ ೪೨ ॥

ದೇವತಾಗಣಮಧ್ಯಸ್ಥೋ ಹ್ಯಂತರಿಕ್ಷಾದುಪಾಗಮತ್ ।
ವಿಲಪಸ್ತಮುವಾಚೇದಮದೃಶ್ಯಃ ಕಮಲಾಸನಃ ॥ ೪೩ ॥

॥ ಬ್ರಹ್ಮೋವಾಚ ॥

ತ್ವಂ ಶೋಕಮೋಹ ಪಿತೃಮಾತೃ ವಿವರ್ಜಿತೋಽಸಿ
ದುಃಖಂ ಸುಖಂ ಸುತಕಳತ್ರಧನಂ ನ ಚಾಸ್ತಿ ।
ಜಾತೋಽಸಿ ನೈವ ಜನಕೇನ ಜನಿಷ್ಯಮಾಣಃ
ತ್ವಂ ಮನ್ಯಸೇ ಋಷಿಗಣೈಶ್ಚ ಕುತೋ ವಿಮೋಹಃ ॥ ೪೪ ॥

ಏಕೋಽಸಿ ನಾಥ ಬಹುಧಾ ಕೃತವಿಗ್ರಹೋಽಸಿ
ಸೂರ್ಯೋ ಯಥಾ ಜಲಧಿವೀಚಿಷು ದೃಶ್ಯಮಾನಃ ।
ಧ್ಯಾನೇನ ಯಾಂತಿ ಯಮಿನಸ್ತವಪಾದಮೂಲಂ
ರೂಪಂ ಪರಂ ದುರವಬೋಧಮವಾಚ್ಯಮೇವ ॥ ೪೫ ॥

---

೪೨-೪೩. ಎಲೈ ಗಿರಿಜೆಯೆ! ಏಳು. ಏಳು. ನನ್ನನ್ನು ಸಮಾಧಾನಪಡಿಸು. ಎಂದು ಶಿವನು ದುಃಖಿಸುತ್ತಿರಲು, ಇತ್ತ ಬ್ರಹ್ಮನು ಶಿವನು ದೈತ್ಯರ ಮಾಯೆಗೆ ಒಳಗಾಗಿ ಮೋಹಗೊಂಡಿರುವುದನ್ನು ತಿಳಿದು ದೇವತೆಗಳ ಜೊತೆಯಲ್ಲಿ ಅಂತರಿಕ್ಷದಲ್ಲಿ ಬಂದು ಆ ಅಂತರಿಕ್ಷದಿಂದಲೇ ಮತ್ತೆ ಯಾರಿಗೂ ಕಾಣದಂತೆ ಅಳುತ್ತಿರುವ ಶಿವನನ್ನು ಕುರಿತು ಇಂತೆಂದನು.

೪೪. ಬ್ರಹ್ಮನು ಹೇಳಿದನು–ಎಲೈ ಶಿವನೆ! ನಿನಗೆ ಶೋಕ ಮೋಹಗಳಿಲ್ಲ. ತಾಯಿತಂದೆಗಳಿಲ್ಲ. ಸುಖ ದುಃಖಗಳಿಲ್ಲ. ಮಕ್ಕಳು ಮಡಿಗಳು ಹೆಂಡತಿ ಧನಗಳೊಂದೂ ಇಲ್ಲ. ತಂದೆಯಿಂದ ಹುಟ್ಟಿದವನಾಗಿಲ್ಲ. ಮುಂದೆ ಹುಟ್ಟುವವನೂ ಅಲ್ಲ. ಈ ರೀತಿಯಾದ ಪರಮಪುರುಷನೆಂದೂ ಶಾಶ್ವತನೆಂದೂ ನಿನ್ನನ್ನು ಋಷಿಗಳೆಲ್ಲರೂ ತಿಳಿದಿದ್ದಾರೆ. ನಿನಗೆ ಈ ಅಜ್ಞಾನವು ಬರಲು ಕಾರಣವೇನು?

೪೫. ಎಲೈ ಸ್ವಾಮಿಯೆ! ನೀನು ಒಬ್ಬನು. ಸೂರ್ಯನು ಒಬ್ಬನೇ ಆದರೂ ಸಮುದ್ರದ ಅಲೆಗಳಲ್ಲಿ ಅನೇಕವಾಗಿ ಕಾಣುವಂತೆ ನೀನೂ ಕೂಡ ಅನೇಕವಾದ ದೇಹಗಳನ್ನು ಧರಿಸಿ ಅದರಂತೆ ವರ್ತಿಸುತ್ತೀಯೆ. ಯೋಗಿಗಳು ನಿನ್ನನ್ನೇ ಧ್ಯಾನಮಾಡುತ್ತಾ ನಿನ್ನಪಾದಮೂಲವನ್ನು ಸೇರುತ್ತಾರೆ. ನಿನ್ನ ರೂಪವು ಹೇಗಿದೆ ಎಂಬುದನ್ನು ತಿಳಿಯಲಾಗುವುದಿಲ್ಲ. ಹೇಳುವುದಕ್ಕಂತೂ ಅಸಾಧ್ಯವೇ ಸರಿ.

ನೈಷಾ ಪ್ರಿಯಾ ತವ ಸಮಾನತಪಾ ನಿಪನ್ನಾ
ಜಾಲಂಧರೇಣ ರಚಿತಾಂ ಜಹಿ ದೇವ ಮಾಯಾಂ ।
ಸಾ ಪಾರ್ವತೀ ಕಮಲಕೋಶಗತಾ ಹಿ ಶಂಭೋ
ಯುಧ್ಯಸ್ವ ವೈರಿನಿವಹಂ ಜಹಿ ಪಾಹಿ ಚಾಸ್ಮಾನ್ ॥ ೪೬ ॥

॥ ನಾರದ ಉವಾಚ ॥

ಶ್ರುತ್ವೇತಿ ಬ್ರಹ್ಮಣೋ ವಾಕ್ಯಂ ಅವಬುದ್ಧೋ ಮಹೇಶ್ವರಃ ।
ಜ್ಞಾತ್ವಾ ತಾಂ ದಾನವೀಂ ಮಾಯಾಂ ಮುಮೋಚ ಮಹತೀಂ ಶಿಲಾಂ॥೪೭

ತಯಾ ಜಘಾನ ಸಮರೇ ದೈತ್ಯಕೋಟಿಶತತ್ರಯಂ ।
ತತೋ ವೃಷಭಮಾರುಹ್ಯ ಕ್ರೋಧೇನ ಮಹತಾ ನೃಪ ॥ ೪೮ ॥

ಪಿನಾಕಂ ಧನುರಾದಾಯ ಧೂರ್ಜಟಿರ್ಜಗೃಹೇ ಶರಾನ್ ।
ಅಥ ಮಾಯಾಪರಿತ್ಯಕ್ತಂ ಶರ್ವಮಾಲೋಕ್ಯ ಸಿಂಧುಜಃ ॥ ೪೯ ॥

ಸುರೇಶಮೋಹನಂ ಮಾಯಾಜಾಲಮುತ್ಪಾದ್ಯ ತಂ ನೃಪ ।
ಅನ್ಯದಾವಿಷ್ಕಾರಾಶು ಭೃಶಂ ಮಾಯಾಮಹಾಬಲಂ ॥ ೫೦ ॥

---

೪೬. ಎಲೈ ಶಂಭುವೇ ! ಈಗ ಸತ್ತವಳು ನಿನ್ನಂತೆಯೇ ತಪಸ್ಸುಮಾಡಿ ನಿನ್ನನ್ನೇ ಹೊಂದಿದ ಪ್ರಿಯಳಾದ ಪಾರ್ವತಿಯಲ್ಲ. ಜಲಂಧರನು ಮಾಡಿರುವ ಮಾಯೆಯು ಅದನ್ನು ನಾಶಮಾಡು. ಎಲೈ ಶಿವನೇ ! ನಿನ್ನ ಪ್ರಿಯಳಾದ ಆ ಪಾರ್ವತಿಯು ಕಮಲದ ಕೋಶದಲ್ಲಿದ್ದಾಳೆ. ವೈರಿಗಳೊಡನೆ ಯುದ್ಧಮಾಡಿ ಅವರನ್ನು ಕೊಂದು ಹಾಕು. ನಮ್ಮನ್ನು ಕಾಪಾಡು.

೪೭. ನಾರದನು ಹೇಳಿದನು— ಬ್ರಹ್ಮನು ಹೇಳಿದ ಈ ಮಾತನ್ನು ಕೇಳಿ ಶಿವನು ಎಚ್ಚೆತ್ತುಕೊಂಡು ಆ ಕೆಲಸವು ದಾನವರ ಮಾಯೆಯಿಂದ ಉಂಟಾದುದು ಎಂದು ತಿಳಿದು ಒಂದು ದೊಡ್ಡ ಬಂಡೆಯನ್ನು ಅವರ ಮೇಲೆ ಎಸೆದನು.

೪೮–೫೦. ಆ ಕಲ್ಲಿನ ಬಂಡೆಯಿಂದ ಆ ಶಿವನು ಮುನ್ನೂರು ಕೋಟಿ ದೈತ್ಯರನ್ನು ಕೊಂದನು. ಅನಂತರ ಕೋಪಗೊಂಡು ಎತ್ತಿನ ಮೇಲೆ ಕುಳಿತು ಕೊಂಡು ಪಿನಾಕವೆಂಬ ಧನುಸ್ಸನ್ನು ಹಿಡಿದು ಎಳೆಯುತ್ತಾ ಅದರಲ್ಲಿ ಬಾಣಗಳನ್ನು ಹೂಡಿದನು. ಇತ್ತ ಜಲಂಧರನು ಶಿವನು ಮಾಯೆಯಿಂದ ಪಾರಾದುದನ್ನು ನೋಡಿ ಮತ್ತೆ ಅದ್ಭುತ ಸುರೇಶಮೋಹನವೆಂಬ ಮಾಯಾಜಾಲವನ್ನು ಬಹು ಅಗಾಧವಾಗಿ ತಂದೊಡ್ಡಿದನು.

ಜಾಲಂಧರಃ ಕೋಟಿಭುಜೋ ಬಭೂವ
ವೃಕ್ಷಾಶ್ಮಶಸ್ತ್ರೈರ್ಯುಯುಧೇ ವೃಷಾಂಕಂ |
ಅಥಾಂತರಾಲೇ ಪೃಥಿವೀಂ ಚಕಾರ
ಸಮುದ್ರಸೂನುರ್ಗಿರಿಧಾತುಮಂಡಿತಾಂ || ೫೧ ||

ದೇವತಾಯತನೈರಮ್ಯೈರ್ನಾನಾಪುಷ್ಪಸಮಾಕುಲೈಃ |
ಮಂಡಿತಾಂ ನೃಪ ಭೂಮಿಂ ಚ ಚಕಾರೋದಧಿನಂದನಃ ||
ನೃತ್ಯಂತಿ ಯತ್ರಾಪ್ಸರಸೋ ಮೇನಕಾದ್ಯಾ ಮನೋಹರಾಃ || ೫೨ ||

ವಿಸ್ಮೃತ್ಯ ಶಂಭುಸ್ತದಪಾಸ್ಯ ಕಾರ್ಮುಕಂ
ಸದ್ಯಃ ಪ್ರತಸ್ಥೇ ವೃಷಭೋಪರಿ ಸ್ಥಿತಃ |
ವಾದಿತ್ರಗೀತೈರ್ಭುವಿ ಮೋಹಿತೋ ಭೃಶಂ
ದೈತ್ಯೇಂದ್ರಮಾಯಾಮಯತಾಂಡವೇನ ಸಃ || ೫೩ ||

---

೫೧. ಅನಂತರ ಜಲಂಧರನು ಕೋಟಿ ಭುಜಗಳನ್ನು ಹೊಂದಿ ಅವುಗಳಲ್ಲಿ ಮರ, ಕಲ್ಲು, ಶಸ್ತ್ರ, ಮುಂತಾದುವನ್ನು ಹಿಡಿದು ಶಿವನೊಡನೆ ಯುದ್ಧಮಾಡಿದನು. ಇಷ್ಟರಲ್ಲಿ ಮಾಯೆಯಿಂದ ಭೂಮಿಯನ್ನು ಸೃಷ್ಟಿಸಿ ಅದರಲ್ಲಿ ಬೆಟ್ಟಗಳು ಆ ಬೆಟ್ಟಗಳಲ್ಲಿ ಧಾತುಗಳು ಪ್ರಕಾಶಿಸುವಂತೆ ಮಾಡಿದನು.

೫೨. ಆ ಭೂಮಿಯಲ್ಲಿ ಅನೇಕ ದೇವಸ್ಥಾನಗಳೂ ಅವುಗಳಲ್ಲಿ ಬಹುವಾದ ಹೂಗಳೂ ಇದ್ದುವು. ಮತ್ತು ಆ ಭೂಮಿಯಲ್ಲಿ ಅನೇಕವಾದ ಹೂ ಮರಗಳೂ ಇರುವಂತೆಯೂ ಮಾಡಿದನು. ಆ ದೇವಸ್ಥಾನದ ಹತ್ತಿರ ಅಪ್ಸರ ಸ್ತ್ರೀಯರು ಚೆನ್ನಾಗಿ ಕುಣಿಯುವಂತೆಯೂ ಮಾಡಿದನು.

೫೩. ಆಗ ಶಂಭುವು ಯುದ್ಧಮಾಡುವುದನ್ನು ಮರೆತು ಬಿಲ್ಲನ್ನು ಬಿಸುಟು ಎತ್ತಿನ ಮೇಲೆ ಕುಳಿತುಕೊಂಡೇ ದೈತ್ಯನ ಮಾಯಾಬಲದಿಂದುಂಟಾದ ಆ ದೃಶ್ಯಕ್ಕೆ ಅಧೀನನಾಗಿ ಸಂಗೀತಕ್ಕೆ ಮೋಹಗೊಂಡು ಕುಣಿಯುವವರ ಜೊತೆಯಲ್ಲಿ ಹಾಗೇ ಹೊರಟನು.

ವಿಮೋಹಿತಂ ವೀಕ್ಷ್ಯ ವೃಷಸ್ಥಿತಂ ಹರಂ
ನೃತ್ಯಂ ಸಮುದ್ರಸ್ಸಹ ತಾಂಡವೇನ ।
ಗೀತೇನ ವಾದ್ಯೇನ ಚ ನೃತ್ಯಲೀಲಯಾ
ನನಂದ ರೂಪೀ ತರಸಾ ವಿಮೋಹಿತುಂ ॥ ೫೪ ॥

ಜಂತೂನ್ ಕ್ಷಿಪ್ತ್ವೋ ದಧೌ ತಾಂಶ್ಚ ಸ ಜಹಾಸ ತತೋತ್ಸವಃ ॥ ೫೫ ॥

॥ ಕೃಷ್ಣ ಉವಾಚ ॥

ಕ್ವ ಚ ತಾ ದೇವತಾಃ ಸರ್ವಾಃ ಕ್ವ ನಂದಿಪ್ರಮುಖಾ ಗಣಾಃ ।
ಅಪಿ ತ್ವಂ ಮಾನನೀಯೋಽಸಿ ಮೋಹಿತೋ ದೈತ್ಯಮಾಯಯಾ ॥ ೫೬ ॥

ಕಿಮುದ್ಯ ಶಂಭೋ ಭಗವನ್ನಪೇಕ್ಷ್ಯತೇ ಉದೀರ್ಯ ಚಕ್ರಂ ಜಠರಸ್ಥಿತಂ ಚ ।
ವಧಾಯ ಚಾಸ್ಯೈವ ಕೃತಂ ಮಹೇಶ ಜಾಲಂಧರಂ ಸಂಹರ ತೇನ ಚಾಜೌ

---

೫೪. ಎತ್ತಿನ ಮೇಲೆ ಕುಳಿತು ಹರನು ತಾಂಡವನೃತ್ಯ ಮಾಡುತ್ತ ಗೀತ ವಾದ್ಯಗಳಿಂದ ಮೋಹಗೊಂಡು ಬರುತ್ತಿರುವುದನ್ನು ನೋಡಿ ಸಮುದ್ರನು ಆತನನ್ನು ಇನ್ನೂ ಮೋಹಗೊಳಿಸಲು ಆಕಾರವನ್ನು ಹೊಂದಿಯೇ ಗರ್ಜಿಸಿದನು.

೫೫. ಆಗ ಜಲಂಧರನು ಆ ಪ್ರಾಣಿಗಳೆಲ್ಲವನ್ನೂ ಸಮುದ್ರಕ್ಕೆಸೆದು ಬಹು ಸಂತೋಷದಿಂದ ನಕ್ಕನು.

೫೬. ಕೃಷ್ಣನು ಹೇಳಿದನು– ಎಲೈ ಶಿವನೇ! ನಿನ್ನ ಜೊತೆಯ ಆ ದೇವತೆಗಳೆಲ್ಲರೂ ಎಲ್ಲಿ? ನಂದಿಯೇ ಮುಂತಾದ ಗಣಗಳೆಲ್ಲರೂ ಎಲ್ಲಿ? ನೀನು ಎಲ್ಲರಿಗೂ ಗೌರವಾರ್ಹನು. ಈಗಲಾದರೋ ದೈತ್ಯನ ಮಾಯೆಗೊಳಗಾಗಿ ಅಜ್ಞಾನಿಯಾಗಿದ್ದೀಯೆ.

೫೭. ಎಲೈ ಭಗವಂತನಾದ ಶಂಭುವೇ! ಏತಕ್ಕೆ ಉದಾಸೀನ ಮಾಡುತ್ತೀಯೆ? ನಿನ್ನ ಹೊಟ್ಟೆಯೊಳಗಿರುವ ಚಕ್ರವನ್ನು ಹೊರಕ್ಕೆ ಉಗಿದು ತೆಗೆ. ಆ ಚಕ್ರವು ಈ ಜಲಂಧರನನ್ನು ಕೊಲ್ಲುವುದಕ್ಕೇ ಮಾಡಿದುದು. ಅದರಿಂದ ಯುದ್ಧದಲ್ಲಿ ಜಲಂಧರನನ್ನು ಕೊಲ್ಲು.

|| ನಾರದ ಉವಾಚ ||

ಇತಿ ಕೃಷ್ಣಸ್ಯ ವಚನಾತ್ ತತ್ ಸ್ಮೃತ್ವಾತ್ಮಾನಮೀಶ್ವರಃ |
ಆರುಹ್ಯ ವೃಷಭಂ ಶೀಘ್ರಮಾಜಗಾಮ ಮಹಾರಣಂ || ೫೮ ||

ತಮಾಗತಂ ಶಿವಂ ದೃಷ್ಟ್ವಾ ಸರ್ವಸೈನ್ಯಸಮಾವೃತಃ |
ರುರೋಧ ಸಮರೇ ರಾಜನ್ ಕ್ರುದ್ಧೋ ಜಾಲಂಧರೋऽಸುರಃ || ೫೯ ||

ಹರಸ್ಯ ಕುಪಿತಸ್ಯಾಸೀತ್ ಸೃಷ್ಟಿಸಂಹಾರಕಾರಕಂ |
ರೂಪಂ ತೃತೀಯನೇತ್ರಾಗ್ನೌ ದಾನವಾಶ್ಶಲಭಾ ಯಥಾ || ೬೦ ||

ರೂಪಂ ದೃಷ್ಟ್ವಾ ಭಗವತೋ ರೌದ್ರಂ ಜ್ವಾಲಾಮಯಂ ನೃಪ |
ಶುಂಭಾದಯಸ್ತದಾ ದೈತ್ಯಾ ರಾಹುಪ್ರಭೃತಯಶ್ಚ ಯೇ || ೬೧ ||

ರುದ್ರಂ ನಿರೀಕ್ಷ್ಯ ಸಂತ್ರಸ್ತಾಃ ಪಾತಾಳಂ ವಿವಿಶುರ್ಭಯಾತ್ |
ಸೇನಾಭಟಾನನೇಕಾಂಶ್ಚ ಹತಾನ್ದೃಷ್ಟ್ವಾ ಮಹಾಮೃಧೇ || ೬೨ ||

---

೫೮. ನಾರದನು ಹೇಳಿದನು– ಕೃಷ್ಣನ ಈ ಮಾತನ್ನು ಕೇಳಿ ಈಶ್ವರನು ತನ್ನ ಸ್ಥಿತಿಯನ್ನು ಸ್ಮರಿಸಿ ತಿಳಿದುಕೊಂಡು ವೃಷಭದ ಮೇಲೆ ಕುಳಿತುಕೊಂಡು ಮತ್ತೆ ಯುದ್ಧಕ್ಕೆ ಬಂದನು.

೫೯. ಶಿವನು ಮತ್ತೆ ಬರುತ್ತಿರುವುದನ್ನು ನೋಡಿ ಜಲಂಧರನು ಸೈನ್ಯ ದೊಡನೆ ಕೋಪದಿಂದ ಮತ್ತೆ ಎದುರಿಸಿದನು.

೬೦. ಶಿವನು ಕೋಪಗೊಳ್ಳಲು ಅವನ ರೂಪವು ಸೃಷ್ಟಿನಾಶದ ಕಾಲದಲ್ಲಿ ಹೋದುವ ರೂಪವಾಯಿತು. ಆ ಮೂರನೆಯ ಕಣ್ಣಿನಿಂದ ಅಗ್ನಿಯು ಜ್ವಲಿಸುತ್ತ ಇರಲು ದಾನವರೆಲ್ಲರೂ ಅದರಲ್ಲಿ ದೀಪದ ಹುಳುಗಳಂತಾಗಿ ಸಾಯುತ್ತಾ ಬಂದರು.

೬೧–೬೩. ಆ ಭಗವಂತನಾದ ರುದ್ರನ ಭಯಂಕರವಾದ ರೂಪವನ್ನೂ, ಜ್ವಾಲೆಯನ್ನು ಹೊರಡಿಸುತ್ತಿರುವ ಕಣ್ಣನ್ನೂ ನೋಡಿ ಶುಂಭ ರಾಹು ಮುಂತಾದ ದೈತ್ಯರೆಲ್ಲರೂ ಹೆದರಿ ಪಾತಾಳವನ್ನು ಹೊಕ್ಕರು. ಜಲಂಧರನು ತನ್ನ ಸೇನೆಯಲ್ಲಿ

ಶುಂಭಾದೀನ್ಹತಶೇಷಾಂಶ್ಚ ದೃಷ್ಟ್ವಾತ್ಮಾನಂ ಪಲಾಯಿತಾನ್ ।
ತದಾ ಜಾಲಂಧರಸ್ಸಂಖ್ಯೇ ಏಕೋ ಗಿರಿರಿವ ಸ್ಥಿತಃ ॥ ೬೩ ॥

ಪರಮಾರ್ಥಂ ರುದ್ರರೂಪಂ ಹೃಷ್ಟಸ್ಸಾಕ್ಷಾದ್ವ್ಯಲೋಕಯತ್ ।
ತತೋ ಜಾಲಂಧರಃ ಪ್ರಾಹ ಮಹಾದೇವಂ ಪ್ರಹಸ್ಯ ಚ ॥ ೬೪ ॥

॥ ಜಾಲಂಧರ ಉವಾಚ ॥

ರೂಪಂ ಸಂಹರ ಯೇನ ತ್ವಂ ದಹಸೇ ಸಚರಾಚರಂ ।
ಶಸ್ತ್ರೇಣ ಕುರು ಸಂಗ್ರಾಮಂ ತ್ಯಕ್ತ್ವಾ ವೇಗಂ ಬಲಂ ನಿಜಂ ॥ ೬೫ ॥

॥ ನಾರದ ಉವಾಚ ॥

ಇತಿ ಜಾಲಂಧರ ವಚಃ ಶ್ರುತ್ವೋವಾಚ ತತಶ್ಶಿವಃ ॥ ೬೬ ॥

---

ಅನೇಕರು ಸತ್ತುದನ್ನೂ ಕಳೆದುಳಿದ ಶುಂಭಾದಿ ದೈತ್ಯರು ಓಡಿಹೋದುದನ್ನೂ ನೋಡಿ ತಾನು ಬೆಟ್ಟದಂತೆ ಅಲ್ಲಾಡದೆ ಒಬ್ಬನೇ ಯುದ್ಧಮಾಡುತ್ತಾ ನಿಂತನು.

೬೪. ಆಗ ಜಲಂಧರನು ರುದ್ರನ ಸರಿಯಾದ ರೂಪವನ್ನು ನೋಡುತ್ತಾ ಸಂತೋಷಗೊಂಡನು. ಮತ್ತು ನಗುತ್ತಾ ಆ ಸ್ವಾಮಿಯನ್ನು ಕುರಿತು ಇಂತೆಂದನು.

೬೫. ಜಲಂಧರನು ಹೇಳಿದನು– ಎಲೈ ರುದ್ರನೇ! ಈ ಚರಾಚರಗಳನ್ನು ಸುಟ್ಟು ಹಾಕುತ್ತಿರುವ ಈ ರೌದ್ರರೂಪವನ್ನು ಬಿಟ್ಟುಬಿಡು. ನಿನ್ನ ಸರಿಯಾದ ಸ್ಥಿತಿಯನ್ನು ಹೊಂದಿ ನನ್ನೊಡನೆ ಯುದ್ಧಮಾಡು.

೬೬. ನಾರದನು ಹೇಳಿದನು– ಶಿವನು ಜಲಂಧರನ ಈ ಮಾತನ್ನು ಕೇಳಿ ಇಂತೆಂದನು.

|| ಶಿವ ಉವಾಚ ||

ವರಂ ವರಯ ದೈತ್ಯೇಶ ಪ್ರೀತೋಽಸ್ಮಿ ತವ ಕರ್ಮಣಾ ।
ಈದೃಕ್ಷಮಪಿ ಮದ್ರೂಪಂ ದೃಷ್ಟ್ವಾ ಯನ್ನಿರ್ಭಯೋಽಧುನಾ || ೬೭ ||

ಅಪಿ ಬ್ರಹ್ಮಾಂಡಮಖಿಲಂ ಮದ್ರೂಪಸ್ಯಾಸ್ಯ ದಾನವ ।
ತೇಜಸೋ ವಿಕ್ಷಣೇನಾಲಂ ತತ್ರ ತ್ವಮಪಿ ನಿರ್ಭಯಃ || ೬೮ ||

|| ನಾರದ ಉವಾಚ ||

ಇತಿ ಶಂಭೋಃ ಪ್ರಸಾದಂ ಚ ಮತ್ವಾ ಸಂಸಾರನಿಸ್ಪೃಹಃ ।
ಜಾಲಂಧರೋ ಹರಾ ದ್ವವ್ರೇ ಮುಕ್ತಿಂ ಸಾಯುಜ್ಯತಾಂ ಪರಾಂ || ೬೯ ||

|| ಶ್ರೀ ಮಹಾದೇವ ಉವಾಚ ||

ದಿವ್ಯಂ ದೇಹಮಿದಂ ದೈತ್ಯ ಭೋಗಸಿದ್ಧಿಯುತಂ ತವ ।
ವೃಂದಾಮನೋಹರಂ ರಮ್ಯಮಿಹಸ್ಥಂ ಕಾಲಮಶ್ನುತೇ || ೭೦ ||

---

೬೭-೬೮. ಶಿವನು ಹೇಳಿದನು–ಎಲೈ ದೈತ್ಯೇಂದ್ರನೇ! ಈ ರೀತಿಯಾದ ನನ್ನ ರೂಪವನ್ನು ನೋಡಿಯೂ ಭಯಪಡದೆ ಇರುತ್ತಿರುವೆಯಲ್ಲಾ! ಇದಕ್ಕೆ ನನಗೆ ಬಹಳ ಸಂತೋಷವಾಗಿದೆ. ನೀನು ಬೇಕಾದ ವರವನ್ನು ಕೇಳಿಕೋ, ಕೊಡುತ್ತೇನೆ. ಈ ಬ್ರಹ್ಮಾಂಡದಲ್ಲಿ ನನ್ನ ಈ ತೇಜೋರೂಪವನ್ನು ನೋಡಲು ಒಂದು ಪ್ರಾಣಿಯಿಂದಲೂ ಸಾಧ್ಯವಿಲ್ಲ. ನೀನೊಬ್ಬನು ಮಾತ್ರ ಭಯವಿಲ್ಲದೆ ನೋಡುತ್ತಿರುವೆ.

೬೯. ನಾರದನು ಹೇಳಿದನು– ಶಂಭುವು ಈ ರೀತಿ ಅನುಗ್ರಹವುಳ್ಳವನಾಗಿ ಇರುವುದನ್ನು ತಿಳಿದು ಈ ಜಲಂಧರನು ಸಂಸಾರದ ಅನಿತ್ಯತ್ವವನ್ನು ತಿಳಿದು ಅದರಲ್ಲಿನ ಆಸೆಯನ್ನು ತೊರೆದು ಸಾಯುಜ್ಯರೂಪವಾದ ಉತ್ತಮವಾದ ಮೋಕ್ಷವನ್ನು ಕೇಳಿಕೊಂಡನು.

೭೦. ಮಹಾದೇವನು ಹೇಳಿದನು– ಎಲೈ ದೈತ್ಯನೇ! ನಿನ್ನ ಈ ಉತ್ತಮವಾದ ದೇಹವು ದೇಹಸಿದ್ಧಿಯಿಂದ ಕೂಡಿಕೊಂಡಿದೆ. ಮನೋಹರಳಾದ ವೃಂದೆಯೊಡನೆ ಕೂಡಿಕೊಂಡು ಈ ಲೋಕದಲ್ಲಿದ್ದುಕೊಂಡು ಭೋಗಗಳನ್ನು ಅನುಭವಿಸುತ್ತಾ ಕಾಲವನ್ನು ಕಳೆಯುತ್ತಿದೆ.

ಮುಹೂರ್ತಂ ಪರಮಾತ್ಮಾನಂ ತಮೇಕಾಕಿನಮವ್ಯಯಂ ।
ಅಬುಧ್ವಾ ತ್ಯಜಸೇ ಮೂರ್ಖ ಕಥಂ ತ್ವಂ ಮುಕ್ತಿಮಿಚ್ಛಸಿ ॥ ೨೧ ॥

ವೃಂದಾ ತವ ಪ್ರಿಯಾ ರಾಜ್ಞೀ ಹೃತಾ ಸಾ ಯೋಗಮಾಯಯಾ ।
ಸಾ ತು ಬ್ರಹ್ಮಸ್ವರೂಪಜ್ಞಾ ಪ್ರಾಪ್ತಾ ತತ್ಪರಮಂ ಪದಂ ॥ ೨೨ ॥

ಇದಾನೀಂ ದುರ್ಲಭಾ ಸಾ ಚ ತತ್ಪದಂ ಚೈವ ದುರ್ಲಭಂ ।
ಸ್ವರ್ಗಾಪವರ್ಗಯೋರ್ಮಧ್ಯೇ ಸಂಸಾರೇ ವರಮಾಪ್ನುಹಿ ॥ ೨೩ ॥

॥ ಜಾಲಂಧರ ಉವಾಚ ॥

ದೇವ ಮುಕ್ತಿಪದಂ ಲಭ್ಯಂ ಕೃತಕೃತ್ಯೇನ ಕೇನಚಿತ್ ।
ಇದಾನೀಂ ಕೃತಕೃತ್ಯೋಽಸ್ಮಿ ಯಸ್ಮಾತ್ವಯಾಸ್ಯೆ ತ್ವಯಾ ಹತಃ ॥ ೨೪ ॥

---

೨೧. ಆ ಅದ್ವಿತೀಯನೂ ನಾಶರಹಿತನೂ ಆದ ಪರಮಾತ್ಮನನ್ನು ಒಂದು ಮುಹೂರ್ತ ಕಾಲವಾದರೂ ಧ್ಯಾನಿಸಲಿಲ್ಲ. ಅಂತಹ ಮೂರ್ಖನಾದ ನೀನು ಮುಕ್ತಿಯನ್ನು ಹೇಗೆ ಕೇಳುತ್ತೀಯೆ ?

೨೨. ನಿನ್ನ ಪ್ರೀತಿಪಾತ್ರಳೂ, ರಾಣಿಯೂ ಆದ ವೃಂದೆಯನ್ನು ವಿಷ್ಣುವು ಯೋಗಮಾಯೆಯಿಂದ ಅಪಹರಿಸಿದನು. ಅದರಿಂದ ಜುಗುಪ್ಸೆ ಹೊಂದಿದ ಆಕೆಯು ಬ್ರಹ್ಮನನ್ನು ಧ್ಯಾನಿಸಿ ತಿಳಿದುಕೊಂಡು ಪರಮಪದವನ್ನು ಹೊಂದಿದಳು.

೨೩. ಈಗ ಆ ವೃಂದೆಯು ನಿನಗೆ ಸಿಕ್ಕುವಂತಿಲ್ಲ. ಆಕೆಯು ಹೊಂದಿರುವ ಮುಕ್ತಿಯೂ ನಿನಗೆ ಸಾಧ್ಯವಿಲ್ಲ. ಸ್ವರ್ಗ ಮತ್ತು ಮುಕ್ತಿಗಳನ್ನು ಬಿಟ್ಟು ಸಂಸಾರದಲ್ಲಿ ಬೇಕಾದ ವರವನ್ನು ಕೇಳಿಕೋ.

೨೪. ಜಾಲಂಧರನು ಹೇಳಿದನು– ಎಲೈ ದೇವನೇ ! ಅಸಾಧ್ಯವಾದ ಕೆಲಸವನ್ನು ಮಾಡಿ ಪಾಪ ಕಳೆದುಕೊಂಡವನು ಯಾವನಾದರೂ ಸರಿ. ಅವನಿಗೆ ಮುಕ್ತಿಯು ದೊರಕುತ್ತದೆ. ನಾನು ಕೂಡಾ ಈಗ ಉತ್ತಮವಾದ ಕೆಲಸವನ್ನು ಮಾಡಿ ಪಾಪವನ್ನು ಕಳೆದುಕೊಂಡವನು. ಏಕೆಂದರೆ ನಿನ್ನಿಂದ ಕೊಲ್ಲಲ್ಪಟ್ಟು ನಿನ್ನನ್ನೇ ಹೊಂದುತ್ತೇನೆ.

|| ಶಿವ ಉವಾಚ ||

ಮತ್ ಸ್ಥಾನಂ ಪರಮಂ ಕ್ಷೇತ್ರಂ ಯದಿ ತ್ವಂ ಗಂತುಮುತ್ಸುಕಃ ।
ತರ್ಹಿ ಮಾಂ ಕೋಪಯಸ್ವಾಶು ದೈತ್ಯ ಹತ್ವಾ ದೃಢೈಃ ಶರೈಃ ||
ತತೋಽಹಂ ತ್ವಾಂ ಹನಿಷ್ಯಾಮಿ ಮತ್ ಸ್ಥಾನಂ ಯಾಸ್ಯಸೇಽನಘ || ೭೫ ||

|| ನಾರದ ಉವಾಚ ||

ಮಹೇಶ್ವರವಚಃಶ್ರುತ್ವಾ ಪ್ರಾಹ ಜಾಲಂಧರಃ ಶಿವಂ || ೭೬ ||

|| ಜಾಲಂಧರ ಉವಾಚ ||

ತ್ವಯಿ ಸರ್ವಜಗತ್ಪೂಜ್ಯೇ ಪೂರ್ವಂ ನ ಪ್ರಹರಾಮ್ಯಹಂ || ೭೭ ||

|| ನಾರದ ಉವಾಚ ||

ಏವಮುಕ್ತೋ ಜಘಾನಾಶು ಸಿಂಧುಜಂ ವಿಶಿಖೈಃ ಶಿವಃ ।
ತೇ ಶರಾಃ ಸಿಂದುಪುತ್ರಸ್ಯ ದೇಹಲಗ್ನಾ ವಿಭಾಂತಿ ಚ || ೭೮ ||

---

೭೫. ಶಿವನು ಹೇಳಿದನು- ಎಲೈ ದೈತ್ಯನೇ ! ನನ್ನ ಸ್ಥಾನವು ಪರಮ ಪುಣ್ಯವಾದ ಕ್ಷೇತ್ರವು. ಅದನ್ನು ನೀನು ಹೊಂದುವುದಕ್ಕೆ ಇಷ್ಟಪಟ್ಟರೆ ಉತ್ತಮವಾದ ಬಾಣಗಳಿಂದ ನನ್ನನ್ನು ಹೊಡೆದು ನನಗೆ ಕೋಪಬರುವಂತೆ ಮಾಡು. ಆಮೇಲೆ ನಾನು ನಿನ್ನನ್ನು ಕೊಲ್ಲುತ್ತೇನೆ. ಅನಂತರ ನೀನು ನನ್ನ ಸ್ಥಾನವನ್ನು ಹೊಂದುತ್ತೀಯಂತೆ.

೭೬. ನಾರದನು ಹೇಳಿದನು- ಮಹೇಶ್ವರನ ಈ ಮಾತನ್ನು ಕೇಳಿ ಜಲಂಧರನು ಶಿವನನ್ನು ಕುರಿತು ಇಂತೆಂದನು.

೭೭. ಜಲಂಧರನು ಹೇಳಿದನು- ಎಲೈ ಸ್ವಾಮಿಯೇ ! ನೀನು ಎಲ್ಲಾ ಪ್ರಪಂಚಕ್ಕೂ ಪೂಜೆಗೆ ಯೋಗ್ಯನು. ಇಂತಹ ನಿನ್ನನ್ನು ನಾನು ಮೊದಲು ಹೊಡೆಯುವುದಿಲ್ಲ.

೭೮-೭೯. ನಾರದನು ಹೇಳಿದನು- ಜಲಂಧರನ ಈ ಮಾತನ್ನು ಕೇಳಿ ಶಿವನು ಅವನನ್ನು ಹರಿತವಾದ ಬಾಣಗಳಿಂದ ಹೊಡೆದನು. ಆ ಬಾಣಗಳು ಆ ದೈತ್ಯನ ಮೈಯ್ಯಲ್ಲಿ ಚುಚ್ಚಿಕೊಂಡಿರುವುದನ್ನು ನೋಡಿದರೆ ಕಬ್ಬಿಣದ ಬೆಟ್ಟದ

ಯಥಾ ಲೋಹಗಿರಿಪ್ರಾಂತೇ ವೇಣವೋ ವಹ್ನಿದೀಪಿತಾಃ ।
ಜಾಲಂಧರೋ ಹರಸ್ಯಾಂಗಂ ಪೂರಯಾಮಾಸ ಮಾರ್ಗಣೈಃ ॥ ೭೯ ॥

ತೈಶ್ಶರೈಃ ಶುಶುಭೇ ರುದ್ರೋ ಯಥಾ ಖಂ ಖೇಚರಾಕುಲಂ ।
ಜಾಲಂಧರೇಶಯೋರ್ಯುದ್ಧಂ ತಥಾ ದ್ವಂದ್ವಮಭೂನ್ನೃಪ ॥ ೮೦ ॥

ಹರಾದನ್ಯೋ ನ ಹಂತಾಸ್ತಿ ನ ಸೋಢಾನ್ಯೋರ್ಣವಾತ್ಮಜಾತ್ ।
ಗಿರಿಕೋಟಿಸಹಸ್ರೈಸ್ತು ತದಾ ಪೃಥ್ವೀಪುಟೋದ್ಧೃತೈಃ ॥ ೮೧ ॥

ಪೂರಯಾಮಾಸ ಸಮರೇ ಸಿಂಧುಜಃ ಪಾರ್ವತೀಪತಿಂ ।
ತತಶ್ಶೂಲೇನ ನಿಹತೋ ರುದ್ರೇಣೋರಸಿ ದಾನವಃ ॥ ೮೨ ॥

ನಿಸ್ಸಸಾರ ಮುಖಾತ್ತಸ್ಯ ಜ್ವರೋ ಜಂಭೋ ಭಯಂಕರಃ ।
ಸ ಚ ವೀರಜ್ವರೋ ನಾಮ ಸಿಂಹವಕ್ತ್ರೋ ನರಾಕೃತಿಃ ॥ ೮೩ ॥

---

ತಪ್ಪಲಲ್ಲಿ ಬೆಳೆದಿರುವ ಬಿದಿರಿಗೆ ಬೆಂಕಿ ಹಚ್ಚಿದರೆ ಹೇಗೆ ಕಾಣುವುದೋ ಹಾಗೆ ಪ್ರಕಾಶಿಸುತ್ತಾ ಇದ್ದಿತು- ಆ ಮೇಲೆ ಜಲಂಧರನು ಬಾಣಗಳನ್ನು ಬಿಟ್ಟು ಹರನನ್ನು ಹೊಡೆದು ಅವನ ದೇಹವನ್ನು ಬಾಣಗಳಿಂದ ತುಂಬಿದನು.

೮೦. ಅಂತರಿಕ್ಷವು ಪಕ್ಷಿಗಳಿಂದ ಕೂಡಿಕೊಂಡಿರುವಂತೆ ಆ ಬಾಣಗಳು ಹರನನ್ನು ಆವರಿಸಿದವು. ಈ ರೀತಿಯಾಗಿ ಶಿವ ಜಲಂಧರರಿಗೆ ದ್ವಂದ್ವಯುದ್ಧವು ಅದ್ಭುತವಾಗಿ ನಡೆಯಿತು.

೮೧-೮೩. ಪ್ರಪಂಚದಲ್ಲಿ ಹರನ ಹಾಗೆ ಯುದ್ಧದಲ್ಲಿ ಬಾಣವನ್ನು ಹೊಡೆಯುವವರೂ ಇಲ್ಲ. ಜಲಂಧರನಂತೆ ತಡೆಯುವ ಶಕ್ತಿಯುಳ್ಳವರೂ ಬೇರೋಬ್ಬರಿಲ್ಲ. ಅನಂತರ ಭೂಮಿಯಿಂದ ಕಿತ್ತು ತಂದ ಕೋಟಿ ಸಂಖ್ಯಾತ ಬೆಟ್ಟಗಳಿಂದ ಆ ಶಿವನನ್ನು ಜಲಂಧರನು ಹೊಡೆದು ಮುಚ್ಚಿದನು. ಆ ಮೇಲೆ ರುದ್ರನು ಶೂಲವನ್ನು ತೆಗೆದುಕೊಂಡು ಆ ದೈತ್ಯನನ್ನು ಹೊಡೆದನು. ಒಡನೆಯೇ ಆತನ ಮುಖದಿಂದ ಭಯಂಕರವಾದ ಜ್ವರವು ಹುಟ್ಟಿತು. ಅದರ ಹೆಸರು ವೀರ ಜ್ವರವೆಂದು. ಮತ್ತು ಮನುಷ್ಯನ ಆಕಾರವನ್ನು ಹೊಂದಿ ಸಿಂಹದ ಮುಖವನ್ನೂ ಅದು ಹೊಂದಿದ್ದಿತು.

ದೈತ್ಯದೇಹಾದ್ವಿನಿಷ್ಕ್ರಾಂತಂ ದೃಷ್ಟ್ವಾ ಸಿಂಹಮುಖಂ ಜ್ವರಂ ।
ಹುಂಕಾರಮಕರೋದ್ಘೋರಂ ಶರಭಸ್ತತ್ರ ನಿರ್ಯಯೌ ॥ ೮೪ ॥

ಶಿವಸ್ಯ ನಿಸ್ಸೃತೇನಾಸೌ ಶರಭೇಣ ನಿಪಾತಿತಃ ।
ಅಜೇಯಂ ಶಂಕರಂ ದೃಷ್ಟ್ವಾ ವೃಷಭೇಂದ್ರೇಣ ಸಂಯುತಂ ॥ ೮೫ ॥

ಆಯಯೌ ವೃಷಭಾಭ್ಯಾಸೇ ತರಸಾ ಸಾಗರಾತ್ಮಜಃ ।
ವೃಷಂ ಪುಚ್ಛೇ ಗೃಹೀತ್ವಾತು ಭ್ರಾಮಯಾಮಾಸ ಚಾಂಬರೇ ॥ ೮೬ ॥

ಜಾಲಂಧರೋ ಮಹಾಬಾಹುಃ ಚಿಕ್ಷೇಪ ಹಿಮವದ್ಗಿರೌ ।
ತತಸ್ತ್ರಿಶೂಲಮತ್ಯುಗ್ರಂ ಮುಮೋಚ ಗಿರಿಜಾಪತಿಃ ॥ ೮೭ ॥

ತದ್ಧಸ್ತೇನ ಗೃಹೀತ್ವಾ ಚ ದೈತ್ಯೇಶಶ್ಶಿವಸನ್ನಿಧೌ ।
ರಥಾರೂಢೋ ಧನುರ್ಗೃಹ್ಯ ಕಾಲಕೇದಾರಮಬ್ಧಿಜಃ ॥ ೮೮ ॥

ಪೂರಯಾಮಾಸ ವಿಶಿಖೈಃ ಶಿವಮುರ್ವೀತಲೇ ಸ್ಥಿತಂ ।
ಉಗ್ರಶ್ಶಸ್ತ್ರಶರಾಂಶ್ಛಿತ್ವಾ ಬಾಣೈರಥಮಚೂರ್ಣಯತ್ ॥ ೮೯ ॥

---

೮೪. ಆ ದೈತ್ಯನ ದೇಹದಿಂದ ಸಿಂಹಮುಖಜ್ವರವು ಹುಟ್ಟಿ ತನ್ನಮೇಲೆ ಬೀಳಲು ಬರುತ್ತಿರುವುದನ್ನು ನೋಡಿ ಶಿವನು ಘೋರವಾಗಿ ಹುಂಕಾರವನ್ನು ಮಾಡಲು ಆ ಹುಂಕಾರದಿಂದ ಒಂದು ಶರಭವು ಹುಟ್ಟಿ ಹೊರಹೊರಟಿತು.

೮೫–೯೧. ಆ ಜ್ವರವು ಶಿವನಿಂದ ಹೊರಟ ಶರಭದಿಂದ ಕೊಲ್ಲಲ್ಪಟ್ಟಿತು. ವೃಷಭದ ಮೇಲೆ ಕುಳಿತಿರುವ ಆ ಶಂಕರನು ಜಯಿಸಲಸಾಧ್ಯನೆಂದು ತಿಳಿದು ಆ ದೈತ್ಯನು ವೇಗದಿಂದ ಆ ವೃಷಭೇಂದ್ರನಿದ್ದಲ್ಲಿಗೆ ಬಂದನು. ಒಡನೆಯೇ ಆ ಬಸವನ ಬಾಲವನ್ನು ಹಿಡಿದುಕೊಂಡು ಆಕಾಶದಲ್ಲಿ ಗರ್ರನೆ ತಿರುಗಿಸಿ ಹಿಮವತ್ ಪರ್ವತದ ಬಳಿಗೆ ಎಸೆದನು. ಇದನ್ನು ನೋಡಿ ಶಿವನು ಉಗ್ರವಾದ ಶೂಲವನ್ನು ಬಿಡಲು ಆ ರಾಕ್ಷಸನು ಕೈಯಲ್ಲಿ ಹಿಡಿದುಕೊಂಡನು. ಒಡನೆಯೇ ಜಲಂಧರನು ರಥವಲ್ಲಿ ಕುಳಿತು ಕಾಲಕೇದಾರವೆಂಬ ತನ್ನ ಧನುಸ್ಸನ್ನು ಹಿಡಿದುಕೊಂಡು ಬಾಣ ಗಳನ್ನು ಬಿಟ್ಟು ಆ ಶಿವನನ್ನು ಕಾಣದಂತೆ ಮುಚ್ಚಿಬಿಟ್ಟನು. ಶಿವನು ಬಾಣಗಳನ್ನು ಬಿಟ್ಟು ಆತನು ಬಿಟ್ಟ ಶಸ್ತ್ರಗಬಾಣಗಳೆಲ್ಲವನ್ನೂ ಕತ್ತರಿಸಿ ಆ ದೈತ್ಯನ

ದಶಯೋಜನವಿಸ್ತೀರ್ಣಂ ಸಾರಥ್ಯಶ್ವಸಮನ್ವಿತಂ ।
ಜಾಲಂಧರೋಽಪಿ ವಿರಥೋ ಹ್ಯಭ್ಯಧಾವನ್ಮೃಧೇ ಶಿವಂ || ೯೦ ||

ರಣೇ ಯುದ್ಧಮಭೂದ್ಘೋರಮದ್ಭುತಂ ರೋಮಹರ್ಷಣಂ ।
ತದ್ದೃಷ್ಟ್ವಾಽಕಾಂಡಕಲ್ಪಾಂತಶಂಕಯಾ ತತ್ರಸುಸ್ಸುರಾಃ || ೯೧ ||

ಸರ್ವಾಸ್ತ್ರೈಸ್ತಾವದನ್ಯೋನ್ಯಂ ಜಘ್ನತುರ್ಭೀಮವಿಕ್ರಮೌ ।
ಪದ್ಭಿಃ ಪೃಥ್ವೀಂ ಚಾಲಯಂತೌ ಕಂಪಯುಕ್ತಾ ನಭಃ ಸ್ವನೈಃ || ೯೨ ||

ಅಥೋತ್ಕಟಬಲಂ ದೃಷ್ಟ್ವಾ ದಾನವೇಂದ್ರಸ್ಯ ಶಂಕರಃ ।
ಶಸ್ತ್ರಜಾಲಂ ಜಹಾರಾಶು ಯೋಗಮಾಯಾಬಲೇನ ಸಃ || ೯೩ ||

ತತಃ ಕೋಟಿಭುಜೋ ದೈತ್ಯೋ ದಂಷ್ಟ್ರಭೀಷಣಲೋಚನಃ ।
ಶಸ್ತ್ರಹೀನೋಽಪಿ ತರಸಾ ಧಾವಮಾನೋ ಹರಂ ಯಯೌ || ೯೪ ||

---

ಹತ್ತು ಯೋಜನದಗಲವಿರುವ ರಥವನ್ನೂ ಸಾರಥಿಯನ್ನೂ ಕುದುರೆಗಳನ್ನೂ ಪುಡಿ ಪುಡಿ ಮಾಡಿದನು ರಥವನ್ನು ಕಳೆದುಕೊಂಡ ಈ ಜಲಂಧರನು ಪದಾತಿಯಾಗಿಯೇ ಶಿವನನ್ನು ಎದುರಿಸಿದನು. ಇಬ್ಬರಿಗೂ ಯುದ್ಧವು ನಡೆಯಿತು. ಅದು ಘೋರವಾಗಿ ರೋಮಾಂಚವನ್ನುಂಟುಮಾಡುತ್ತಿದ್ದಿತು. ಇದನ್ನು ನೋಡಿ ದೇವತೆಗಳು ಅಕಾಲ ದಲ್ಲಿ ಪ್ರಳಯವಾಗುತ್ತಿದೆಯಲ್ಲ ? ಎಂದು ಹೆದರಿದರು.

೯೨. ತಾವು ಉಪಯೋಗಿಸಲು ಬಲ್ಲ ಅಸ್ತ್ರಗಳೆಲ್ಲವನ್ನೂ ಬಿಡುತ್ತಾ ಆ ಬಿಲ್ಲಾಳುಗಳು ಒಬ್ಬರಿಗೊಬ್ಬರು ಯುದ್ಧಮಾಡಿದರು. ಅವರಿಡುವ ಹೆಜ್ಜೆಗಳಿಂದ ಭೂಮಿಯು ಅಲುಗುತ್ತಿದ್ದಿತು.

೯೩. ದಾನವೇಂದ್ರನ ಈ ಬಲವನ್ನು ನೋಡಿ ಶಂಕರನು ಆ ದೈತ್ಯನ ಶಸ್ತ್ರಾಸ್ತ್ರಗಳೆಲ್ಲವನ್ನೂ ತನ್ನ ಯೋಗಮಾಯೆಯಿಂದ ಹಾಳುಮಾಡಿದನು.

೯೪. ಅನಂತರ ಆ ದೈತ್ಯನು ಕೋಟಿ ಭುಜಗಳುಳ್ಳವನಾಗಿ ಘೋರ ದಾಡೆಯನ್ನೂ ಹೊಂದಿ ಶಸ್ತ್ರಗಳಿಲ್ಲದಿದ್ದರೂ ಹರನ ಮೇಲೆ ಬೀಳಲು ಬಂದನು.

ವಿಶಾಲಕರ ಬಂಧೇನ ಬಬಂಧ ಸಮರೇ ಶಿವಂ ।
ತತಸ್ತಸ್ಯ ಕೃಪಾಣೇನ ಚಿಚ್ಛೇದ ಕರಕಾನನಂ ॥ ೯೫ ॥

ಸಿಂಧುಜೇನ ಭುಜಾಕ್ರಾಂತೋ ರುದ್ರೋ ಭೂನ್ನೀಲಲೋಹಿತಃ ।
ಲೀಲಯಾ ಯೋಧಯಾಮಾಸ ರಣೇಸೌ ಸಿಂಧುನಂದನಂ ॥ ೯೬ ॥

ಛಿನ್ನಹಸ್ತೋಽಪಿ ಯುಯುಧೇ ಸ್ವಭಾರ್ನುಶ್ಶಿರಸಾ ಯಥಾ ।
ನಿಯುದ್ಧೇನ ನದೀಸೂನುಃ ತೋಷಯಾಮಾಸ ಶಂಕರಂ ॥ ೯೭ ॥

ಪರಿತುಷ್ಟೋ ಬ್ರವೀಚ್ಛಂಭುರ್ವರಂ ವರಯ ದುರ್ಲಭಂ ।
ಜಾಲಂಧರೇಣ ಸೋಪ್ಯುಕ್ತಃ ತ್ವಂ ನೋ ದೇಹ್ಯಾತ್ಮನಃ ಪದಂ ॥ ೯೮ ॥

---

೯೫. ತನ್ನ ಆ ಕೋಟಿ ಭುಜಗಳಿಂದಲೂ ಆ ಶಿವನನ್ನು ಹಿಡಿದುಕಟ್ಟಿದನು. ಆಗ ಶಂಕರನು ತನ್ನ ಕತ್ತಿಯನ್ನು ಹಿರಿದು ಆ ಕೈಗಳೆಲ್ಲವನ್ನೂ ಕತ್ತರಿಸಿದನು.

೯೬. ಆ ಜಲಂಧರನು ಭುಜಗಳಿಂದ ಶಿವನನ್ನು ಹಿಡಿದುಕೊಳ್ಳಲು ಆ ಶಿವನು ಬಹುವಾಗಿ ಕೋಪಗೊಂಡು ರುದ್ರನೇ ಆದನು. ಆಗ ಬಹುಸುಲಭ ವಾಗಿಯೂ ಲೀಲೆಯಿಂದಲೂ ಆ ದೈತ್ಯನೊಡನೆ ಯುದ್ಧಮಾಡಿದನು.

೯೭. ಕೈಗಳೆಲ್ಲವೂ ಕತ್ತರಿಸಿಹೋದರೂ ಕೇತುವು ತಲೆಯಿಂದಲೇ ಗುದ್ದಾಡುವಂತೆ ಈತನು ಗುದ್ದಾಡುತ್ತಾ ಬಂದನು. ಈ ಬಾಹುಯುದ್ಧದಿಂದ ದೈತ್ಯನು ಶಂಕರನನ್ನು ಸಂತೋಷಪಡಿಸಿದನು.

೯೮. ಆಗ ಶಂಭುವು ಸಂತೋಷಗೊಂಡು ಎಲೈ ದೈತ್ಯನೇ ! ನಿನಗೆ ಬೇಕಾದ ವರವನ್ನು ಕೇಳಿಕೋ. ಅದು ದುರ್ಲಭವಾದುದಾದರೂ ಕೊಡುತ್ತೇನೆ. ಎನ್ನಲು ಅದಕ್ಕೆ ಜಲಂಧರನು ನೀನು ನನಗೆ ನಿನ್ನ ಸಾಯುಜ್ಯವನ್ನು ಕೊಡು, ಎಂದನು.

ಮಮ ದೋಶ್ಯಸ್ತ್ರಹೀನಸ್ಯ ನಾವಜ್ಞಾಂ ಕರ್ತುಮರ್ಹಸಿ ।
ಶೀಘ್ರಂ ಪ್ರಯಚ್ಛ ಮೇ ಸಿದ್ಧಿಂ ನೋಚೇತ್ತ್ವಾಂ ಸಂಹರಾಮ್ಯಹಂ ॥೯೯॥

ಇತ್ಯುಕ್ತ್ವಾ ಸಭುಜೋ ಭೂತ್ವಾ ಜಘ್ನೇ ತಂ ಮುಷ್ಟಿನೋರಸಿ ।
ತತಸ್ಸುದರ್ಶನಂ ಚಕ್ರಂ ಪುರಾ ಯನ್ನಿರ್ಮಿತಂ ಸ್ವಯಂ ॥ ೧೦೦ ॥

ಮುಖಾದುದ್ಗೀರ್ಯ ತದ್ಧಸ್ತೇ ಗೃಹೀತ್ವಾ ತೋಲಯದ್ರುಷಾ ।
ಸೂರ್ಯಕೋಟಿಸಹಸ್ರಾಭಂ ಗ್ರಸತ್ತತ್ಸಚರಾಚರಂ ॥ ೧೦೧ ॥

ತೇನ ಚಕ್ರೇಣ ಚಿಚ್ಛೇದ ಶಿರೋ ಜಾಲಂಧರಸ್ಯ ಚ ।
ತತಸ್ತಚ್ಛೀರ್ಷಮುತ್ಪತ್ಯ ಗಗನೇ ಶತಯೋಜನಂ ॥ ೧೦೨ ॥

ದಂಷ್ಟ್ರಾಶತಕರಾಲಾಸ್ಯಂ ಸ್ವರ್ಭೂಮಿನಯನಂ ಚ ಯತ್ ।
ವ್ಯಾಘ್ರಗತ್ಯಾ ತತೋ ಯಾತಂ ಸದನಂ ಬ್ರಹ್ಮಣೋ ನೃಪ ॥ ೧೦೩ ॥

---

೯೯. ಎಲೈ ಶಿವನೇ ! ನನ್ನ ತೋಳುಗಳು ಕತ್ತರಿಸಿಹೋದುವು. ಶಸ್ತ್ರಗಳನ್ನು ಹಿಡಿಯಲಾರೆ. ಇಂತಹ ನನಗೆ ಅವಮಾನಮಾಡುವುದು ಯುಕ್ತವಲ್ಲ. ನನಗೆ ಆ ರೀತಿಯಾದ ಸಾಯುಜ್ಯ ಸಿದ್ಧಿಯನ್ನು ಬೇಗಕೊಡು. ಇಲ್ಲದಿದ್ದರೆ ನಿನ್ನನ್ನು ಕೊಂದುಹಾಕುತ್ತೇನೆ.

೧೦೧–೧೦೨. ಆ ಜಲಂಧರನು ಹೀಗೆಂದು ಹೇಳಿ ಮತ್ತೆ ಕೈಗಳನ್ನು ಹೊಂದಿ ಮುಷ್ಟಿಯಿಂದ ಆ ಶಿವನ ಎದೆಗೆ ಗುದ್ದಿದನು. ಈ ಗುದ್ದಿನಿಂದ ಪೂರ್ವದಲ್ಲಿ ನಿರ್ಮಿಸಿ ನುಂಗಿದ್ದ ಆ ಸುದರ್ಶನ ಚಕ್ರವು ಬಾಯಿಂದ ಹೊರಗೆ ಬರಲು ಅದನ್ನು ಕೈಯ್ಯಲ್ಲಿ ಹಿಡಿದು ತೂಗುತ್ತಿದ್ದನು. ಆ ಚಕ್ರವು ಕೋಟಿ ಸೂರ್ಯಪ್ರಕಾಶದಷ್ಟು ಪ್ರಕಾಶವನ್ನು ಹೊಂದಿದ್ದಿತು. ಚರಾಚರಗಳೆಲ್ಲವನ್ನೂ ನಾಶಮಾಡುವ ಶಕ್ತಿಯು ಅದಕ್ಕಿದ್ದಿತು.

೧೦೨–೧೦೩. ಆ ಚಕ್ರವನ್ನು ಬಿಟ್ಟು ಶಿವನು ಜಲಂಧರನ ತಲೆಯನ್ನು ಕತ್ತರಿಸಿದನು. ಆಗ ಆ ತಲೆಯು ಅಂತರಿಕ್ಷದಲ್ಲಿ ನೂರು ಯೋಜನಗಳಷ್ಟು ಮೇಲಕ್ಕೆ ಹಾರಿತು. ಮತ್ತು ನೂರು ಕೋರೆದಾಡೆಗಳನ್ನು ಹೊಂದಿತು. ಸ್ವರ್ಗಭೂಮಿಗಳೇ ಆ ತಲೆಗೆ ಕಣ್ಣಾದುವು. ಹುಲಿಯಂತೆ ಹಾರಿ ಬ್ರಹ್ಮನ ಲೋಕಕ್ಕೆ ಹೋಯಿತು.

ಭೂಯಸ್ಸ್ವರ್ಗೇ ತತೋ ದೃಷ್ಟ್ವಾ ಮೃಡಃ ಶೀರ್ಷಮಧಾವತ ।
ಸ್ರವತ್ತದ್ರುಧಿರಂ ಭೂರಿ ಪ್ರಕುರ್ವದ್ಭೈರವಸ್ವನಂ ॥ ೧೦೪ ॥

ತತೋ ದಿಶಃ ಪ್ರಣಷ್ಟಾಸ್ತಾ ಗಗನೇ ವಿಲಯಂ ಗತಾಃ ।
ನ ತೇಜಸಾಂ ಪ್ರಕಾಶೋಽಸ್ತಿ ಚಚಾಲ ವಸುಧಾ ಭಯಾತ್ ॥ ೧೦೫ ॥

ಆಪತತ್ರುಜ್ಞ ಘಾನಾಶು ರುದ್ರಶ್ಚಕ್ರೇಣ ತಚ್ಛಿರಃ ।
ದ್ವಿಧಾ ಭೂತ್ವಾಥ ರಾಜೇಂದ್ರ ಪಪಾತ್ ಹಿಮವದ್ಗಿರೌ ॥ ೧೦೬ ॥

ತತೋ ಜಾಲಂಧರಸ್ಯಾಶು ಶಿರಸಶ್ಶಕಲೌ ಕಿಲ ।
ವಿಶತಃ ಸರ್ವಭೂತಾನಾಂ ಪಶ್ಯತಾಂ ಸ್ಮ ವೃಷಾಕಪೌ ॥ ೧೦೭ ॥

ತಸ್ಯ ಕಂಠಾತ್ಸಮುದ್ಭೂತಾ ದೈತ್ಯಾ ಶತಸಹಸ್ರಶಃ ।
ತೇ ಹತಾ ಸ್ತೇನ ಚಕ್ರೇಣ ಕಪರ್ದಿಕರಶಾಲಿನಾ ॥ ೧೦೮ ॥

---

೧೦೪. ಆ ತಲೆಯು ಸ್ವರ್ಗಕ್ಕೆ ಹೋದುದನ್ನು ನೋಡಿ ಶಿವನು ಆ ತಲೆಯನ್ನು ಓಡಿಸಿಕೊಂಡು ಹೋದನು. ಆ ತಲೆಯು ಬಹುವಾಗಿ ರಕ್ತವನ್ನು ಸುರಿಸುತ್ತ ಭಯಂಕರವಾಗಿ ಗರ್ಜಿಸಿತು.

೧೦೫. ಆಗ ದಿಕ್ಕುಗಳೆಲ್ಲವೂ ಕಾಣದಂತಾದುವು. ಎಲ್ಲೆಲ್ಲೂ ಆಕಾಶವೇ ಕಾಣುತ್ತಿದ್ದಿತು. ತೇಜಸ್ಸಿನ ವಸ್ತುಗಳಿಗೆ ಪ್ರಕಾಶವೇ ಇಲ್ಲವಾಯಿತು. ಭೂಮಿಯು ಭಯದಿಂದ ನಡುಗಿತು.

೨೦೬. ಅನಂತರ ಕೆಳಗೆ ಬೀಳುತ್ತಿರುವ ಆ ತಲೆಯನ್ನು ಶಿವನು ಚಕ್ರದಿಂದ ಎರಡು ಪಾಲುಮಾಡಿದನು. ಅದು ಎರಡುಭಾಗವಾಗಿ ಹಿಮವತ್ ಪರ್ವತದಲ್ಲಿ ಬಿದ್ದಿತು.

೧೦೭. ಆಗ ಆ ಜಲಂಧರನ ತಲೆಯ ಎರಡು ಪಾಲೂ ಎಲ್ಲರೆದುರಿಗೂ ಶಿವನಲ್ಲಿ ಐಕ್ಯವಾದುವು.

೧೦೮. ಅನಂತರ ಆ ದೈತ್ಯನ ಮುಂಡದ ಗಂಟಲಿನಿಂದ ನೂರುಸಾವಿರ ರೀತಿಯಲ್ಲಿ ರಾಕ್ಷಸರು ಹುಟ್ಟಿದರು. ಅವರೆಲ್ಲರನ್ನೂ ಅದೇ ಚಕ್ರದಿಂದಲೇ ಶಿವನು ಕತ್ತರಿಸಿದನು.

ಜಾಲಂಧರಕಬಂಧಂ ತನ್ನನರ್ತ ರುಧಿರಾರುಣಂ ।
ಪುನಃ ಪುನಃ ಸಮುದ್ಭೂತಾ ಸ್ತಸ್ಯ ಕಂಠಾತ್ತು ದಾನವಾಃ ॥ ೧೦೯ ॥

ಪುನಃ ಪುನರ್ಬಲವತಾ ಛಿನ್ನಾಶ್ಚಕ್ರೇಣ ಶಂಭುನಾ ।
ಮೇದಸಾ ಸಿಂಧುಪುತ್ರಸ್ಯ ಪೂರಿತಾ ಸಕಲಾ ಮಹೀ ॥ ೧೧೦ ॥

ಮೇದಿನೀ ಮೇದಸ್ಯೆ ವೈಷಾ ಖ್ಯಾತಿಂ ಪ್ರಾಪ್ತಾ ತು ಪಾರ್ಥಿವ ।
ಯತ್ರ ದೈತ್ಯವರಸ್ಯಾಸ್ಯ ಶೋಣಿತಂ ಶೈಲತಾಂ ಗತಂ ॥ ೧೧೧ ॥

ಕೈಲಾಸಸ್ಯೋತ್ತರೇ ಭಾಗೇ ತತ್ರಾಭೂಚ್ಛೋಣಿತಂ ಪುರಂ ।
ಅಥ ಮಾಂಸಚಯಾನ್ ದೃಷ್ಟ್ವಾ ಸರ್ವತೋ ವ್ಯಾಪ್ಯ ತಿಷ್ಠತಃ ॥ ೧೧೨ ॥

ಅಥ ಸಸ್ಮಾರ ದೇವೇಶಃ ಚತುಷ್ಷಷ್ಟಿಗಣಂ ರಣೇ ।
ವಿಜ್ಞಾನಸ್ಮರಣಾದ್ದೇವಾಃ ಸಂಪ್ರಾಪ್ತಾಶ್ಶಂಕರಾಂತಿಕಂ ॥ ೧೧೩ ॥

ಕೃತಾಂಜಲಿಪುಟಾಃ ಪ್ರೋಚುಃ ಶಿವ ಕಿಂ ಕರವಾಮಹೇ ॥ ೧೧೪ ॥

---

೧೦೯. ರಕ್ತದಿಂದ ನೆನೆದು ಕೆಂಪಾಗಿದ್ದ ಆ ಜಲಂಧರನ ಮುಂಡವು ಕುಣಿದಾಡುತ್ತಿದ್ದಿತು. ಅದರ ಕತ್ತಿನಿಂದ ದೈತ್ಯರು ಮತ್ತೆ ಮತ್ತೆ ಹುಟ್ಟುತ್ತಲೇ ಇದ್ದರು.

೧೧೦. ವೀರನಾದ ಶಂಭುವು ಅವರೆಲ್ಲರನ್ನೂ ಮತ್ತೆ ಮತ್ತೆ ಕತ್ತರಿಸಿದನು. ಆಗ ಆ ಜಲಂಧರನ ಕೊಬ್ಬು ಭೂಮಿಯಲ್ಲೆಲ್ಲಾ ಹರಡಿಕೊಂಡಿತು.

೧೧೧–೧೧೪. ಆ ಜಲಂಧರನ ಈ ರೀತಿಯಾದ ಮೇದಸ್ಸಿನಿಂದ ತುಂಬಿದ ಭೂಮಿಯು ಮೇದಿನೀ ಎನಿಸಿಕೊಂಡಿತು. ಆ ದೈತ್ಯನ ರಕ್ತವು ಹೆಪ್ಪುಗಟ್ಟಿಕೊಂಡು ಬೆಟ್ಟದಂತೆ ಆಯಿತು. ಹಾಗೆ ಆ ಕೈಲಾಸದ ಉತ್ತರಭಾಗದಲ್ಲಿ ಆದ ಆ ಜಾಗವು ಶೋಣಿತಪುರವೆನಿಸಿಕೊಂಡಿತು. ಶಿವನು ಜಲಂಧರನ ಮಾಂಸವು ಎಲ್ಲಾ ಕಡೆಯಲ್ಲಿಯೂ ಹರಡಿಕೊಂಡು ಬಿದ್ದಿರುವುದನ್ನು ನೋಡಿ ಅರವತ್ತನಾಲ್ಕು ಗಣಗಳನ್ನು ಸ್ಮರಿಸಿದನು. ಸ್ಮರಿಸಿಕೊಂಡೊಡನೆಯೇ ಅವರೆಲ್ಲರೂ ಶಂಕರನ ಹತ್ತಿರಕ್ಕೆ ಬಂದರು. ಮತ್ತು ಕೈಮುಗಿದುಕೊಂಡು ಎಲೈ ಶಿವನೇ ! ನಾವು ಏನುಮಾಡಬೇಕೆಂದು ಹೇಳು, ಎಂದು ಕೇಳಿದರು.

|| ಮಹಾದೇವ ಉವಾಚ ||

ಯ ಏತೇ ದೈತ್ಯಮಾಂಶಸ್ಯ ರಾಶಯೋ ಗಿರಿಸನ್ನಿಭಾಃ |
ಭಕ್ಷಯಧ್ವಂ ತು ತಾ್ ಶೀಘ್ರಂ ದತ್ತಾನುಜ್ಞಾ ಮಯಾ ತು ವಃ ||೧೧೫||

ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ |
ವಾರಾಹೀ ಚೈವ ಮಾಹೇಂದ್ರೀ ಸರ್ವಾಃ ಸ್ವಗುಣಶೋಭಿತಾಃ || ೧೧೬ ||

ಏವಂ ಶಂಕರನಿರ್ದಿಷ್ಟಾ ದೇವ್ಯಸ್ತಾ ಮಾಂಸಸಂಚಯಾನ್ |
ಕ್ರೂರೇಣ ಚಕ್ಷುಷಾಲೋಕ್ಯ ನಿನ್ಯುಶ್ಚಾದರ್ಶನಂ ಕ್ಷಣಾತ್ || ೧೧೭ ||

ಅಥ ಜಾಲಂಧರವಪುಃ ಕ್ಷೀಣಂ ಕ್ರಾಂತಂ ಸ್ವಶಕ್ತಿಭಿಃ |
ತಾಭಿರ್ಗ್ರಸ್ತೇ ಶರೀರೇ ತು ತಸ್ಯ ದೇಹಾದ್ವಿನಿಸ್ಸೃತಾ || ೧೧೮ ||

ಪ್ರಭಾ ಸಾ ಶಂಕರಂ ಪ್ರಾಪ್ಯ ಜಗಾಮಾದರ್ಶನಂ ಕ್ಷಣಾತ್ |
ತತ್ತೇಜಸ್ಸೂರ್ಯಸಂಕಾಶಂ ಲಯಂ ಪ್ರಾಪ್ತಂ ಮಹೇಶ್ವರೇ || ೧೧೯ ||

---

೧೧೫. ಮಹಾದೇವನು ಹೇಳಿದನು– ಇಲ್ಲಿ ಬೆಟ್ಟದಂತೆ ಬಿದ್ದಿರುವ ದೈತ್ಯನ ಮಾಂಸದ ರಾಶಿಗಳನ್ನು ಬೇಗನೆ ತಿನ್ನಿರಿ. ನಾನು ನಿಮಗೆ ಅಪ್ಪಣೆಮಾಡುತ್ತೇನೆ.

೧೧೬. ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಮಾಹೇಂದ್ರೀ ಇವರೆಲ್ಲರೂ ತಮ್ಮ ತಮ್ಮ ಗಣಗಳಿಂದ ಕೂಡಿಬಂದರು.

೧೧೭. ಶಂಕರನು ಹೀಗೆ ಹೇಳಲು ಆ ದೇವಿಯರೆಲ್ಲರೂ ಆ ದೈತ್ಯನ ಮಾಂಸವನ್ನು ತಮ್ಮ ಕ್ರೂರವಾದ ದೃಷ್ಟಿಯಿಂದ ನೋಡುತ್ತಾ ಕ್ಷಣಕಾಲದಲ್ಲಿಯೇ ಕಣ್ಣಿಗೆ ಕಾಣದಂತೆ ಮಾಡಿದರು.

೧೧೮–೧೧೯. ಆಗ ತನ್ನ ಕಡೆಯ ಶಕ್ತಿಗಳು ಆ ಜಲಂಧರನ ಶರೀರದ ಮಾಂಸವನ್ನು ತಿನ್ನುತ್ತಾ ಕಡಿಮೆ ಮಾಡುತ್ತಾ ಬಂದುವು. ಅವರು ತಿನ್ನುತ್ತಿರಲು ಆ ದೈತ್ಯನ ಶರೀರದಿಂದ ಒಂದಾನೊಂದು ತೇಜಸ್ಸು ಹುಟ್ಟಿತು. ಅದು ಶಂಕರನ ಬಳಿಗೆ ಬಂದು ಕಾಣದಂತಾಗಿ ಆ ಶಂಕರನಲ್ಲಿಯೇ ಸೇರಿಹೋಯಿತು.

ಏವಂ ಸ ವಿಲಯಂ ಪ್ರಾಪ್ತಃ ತ್ರಿದಶಾರಿಸ್ತ್ರಿಲೋಚನಾತ್ ।
ವೃಣುಧ್ವಂ ಚ ವರಂ ಸರ್ವಾಃ ಪ್ರೀತಃ ಪ್ರಾಹ ಮಹೇಶ್ವರಃ
ತದಾ ತಾಸ್ಸರ್ವಯೋಗಿನ್ಯಃ ಪಪ್ರಚ್ಛುರ್ಜಗದೀಶ್ವರಂ । ॥ ೧೨೦ ॥

॥ ಯೋಗಿನ್ಯ ಊಚುಃ ॥

ಮರ್ತ್ಯಲೋಕೇಷು ಯೇ ಲೋಕಾ ಭೋಗಮೋಕ್ಷವರೇಪ್ಸವಃ ।
ಪೂಜಯಿಷ್ಯಂತಿ ತೇ ನಿತ್ಯಂ ಸ್ವಗೃಹೇ ಯೋಗಿನೀಗಣಂ ॥
ತತ್ತೇಷಾಂ ವಾಂಛಿತಂ ಸರ್ವಂ ಸಿಧ್ಯತಾಂ ತ್ವತ್ಪ್ರಸಾದತಃ ॥ ೧೨೧ ॥

॥ ಮಹಾದೇವ ಉವಾಚ ॥

ಯಃ ಕಶ್ಚಿತ್ಪೂಜಯೇನ್ನಿತ್ಯಂ ಭಕ್ತಿಭಾವಸಮನ್ವಿತಃ ।
ಯುಷ್ಮದ್ಗಣಂ ಚ ತಸ್ಯಾಹಂ ವರದೋಽಸ್ಮಿ ಧರಾತಲೇ ॥ ೧೨೨ ॥

ಮದ್ಭಕ್ತಃ ಕೇಶಸ್ಯಾಪಿ ದ್ವೇಷ್ಟಿ ಯೋ ಯೋಗಿನೀ ಗಣಂ ।
ಭೈರವೋಽಹಂ ತದಾ ತಸ್ಯ ಹರಿಷ್ಯೇ ಸುಕೃತಂ ಕೃತಂ ॥ ೧೨೩ ॥

---

೧೨೦. ಈ ರೀತಿಯಾಗಿ ತ್ರಿಲೋಚನನಾದ ಶಿವನಿಂದ ದೇವತೆಗಳಿಗೆ ಶತ್ರುವಾದ ಆ ಜಲಂಧರನು ನಾಶ ಹೊಂದಿದನು. ಇದನ್ನು ನೋಡಿ ಸಂತೋಷ ಗೊಂಡ ಮಹೇಶ್ವರನು ನೀವೆಲ್ಲರೂ ನಿಮಗೆ ಬೇಕಾದ ವರಗಳನ್ನು ಕೇಳಿಕೊಳ್ಳಿರಿ ಎಂದನು. ಆಗ ಆ ಯೋಗಿನಿಯರೆಲ್ಲರೂ ಶಿವನನ್ನು ಕುರಿತು ಈರೀತಿ ಕೇಳಿದರು.

೧೨೧. ಯೋಗಿನಿಯರು ಹೇಳಿದರು– ಮನುಷ್ಯಲೋಕದಲ್ಲಿ ಯಾವ ಮನುಷ್ಯನು ಭೋಗಮೋಕ್ಷಗಳನ್ನು ಅಪೇಕ್ಷಿಸುವವನಾಗಿ ತಮ್ಮ ತಮ್ಮ ಮನೆಯಲ್ಲಿ ಯೋಗಿನೀ ಗಣವನ್ನು ಪೂಜಿಸುತ್ತಾನೆಯೋ ಅವರ ಇಷ್ಟಾರ್ಥವೆಲ್ಲವೂ ನಿನ್ನ ಅನುಗ್ರಹದಿಂದ ಸಿದ್ಧಿಸಲಿ.

೧೨೨. ಮಹಾದೇವನು ಹೇಳಿದನು– ಯಾವನು ಭಕ್ತಿಯಿಂದ ನಿತ್ಯವೂ ನಿಮ್ಮ ಗಣವನ್ನು ಪೂಜಿಸುವನೋ ಅವನಿಗೆ ನಾನು ಯಾವಾಗಲೂ ವರವನ್ನು ಕೊಡುತ್ತೇನೆ.

೧೨೩. ನನಗೆ ಭಕ್ತನಾಗಿದ್ದರೂ, ಕೇಶವನಿಗೆ ಭಕ್ತನಾಗಿದ್ದರೂ ಸರಿಯೆ. ಅವನು ಯೋಗಿನೀ ಗಣವನ್ನು ದ್ವೇಷಿಸಿದರೆ ಅವನಿಗೆ ನಾನು ಕ್ರೂರನಾಗಿ ಅವನ ಪುಣ್ಯಗಳೆಲ್ಲವನ್ನೂ ಅಪಹರಿಸುತ್ತೇನೆ.

|| ನಾರದ ಉವಾಚ ||

ಇತಿ ದತ್ತ್ವವರಾ ಹೃಷ್ಟ್ವಾ ಯೋಗಿನ್ಯೋ ವಿಭುನಾ ಮೃಧೇ ।
ಅತ್ರಾಂತರೇ ಭವಾನೀಂ ತಾಂ ಸಸ್ಮಾರ ವೃಷಭಂ ಹರಃ || ೧೨೪ ||

ಸ್ಮೃತಮಾತ್ರಾ ಪಾರ್ವತೀ ಸಾ ವೃಷಭಶ್ಚಾಗಮತ್ ಕ್ಷಣಾತ್ ।
ಸಖೀಗಣಸಮಾಯುಕ್ತಾ ಸಂಪ್ರಾಪ್ತಾ ಹರವಲ್ಲಭಾ || ೧೨೫ ||

ಸಾ ತ್ಯಕ್ತ್ವಾ ಭ್ರಾಮರೀಂ ಮೂರ್ತಿಂ ಹರಸ್ಯಾರ್ಥಂ ಸಮಾಹರತ್ ।
ಗಿರಿಜಾ ಸಹಿತೋ ರಾಜನ್ ಮಹೇಶೋ ಮುಮುದೇ ತತಃ || ೧೨೬ ||

ಯೋಗಿನೀಃ ಪ್ರತ್ಯುವಾಚೇದಂ ಪಿಬಧ್ವಂ ರುಧಿರಂ ನೃಪ ।
ಜಾಲಂಧರಕಬಂಧಸ್ಥಂ ತಾಶ್ಶ್ರುತ್ವಾ ಜಹೃಷುಃ ಭೃಶಂ || ೧೨೭ ||

ಮಾಂಸ ಮೇದೋಹ್ಯಸೃಕ್ ಪೀತ್ವಾ ಯೋಗಿನ್ಯೋ ನನೃತುರ್ಮುದಾ ।
ತತೋ ಹರಃ ಪ್ರಸನ್ನೋಽಭೂತ್ತಾಸಾಂ ಕ್ರೀಡಿತವೀಕ್ಷಣಾತ್ || ೧೨೮ ||

---

೧೨೪. ನಾರದನು ಹೇಳಿದನು– ಈ ರೀತಿಯಾಗಿ ಸ್ವಾಮಿಯಾದ ಶಿವನು ಯುದ್ಧ ಭೂಮಿಯಲ್ಲಿ ಯೋಗಿನಿಯರಿಗೆ ವರವನ್ನು ಕೊಟ್ಟು ಸಂತೋಷಪಡಿಸಿದನು. ಆಮೇಲೆ ಆ ಶಿವನು ಪಾರ್ವತಿಯನ್ನು ಸ್ಮರಿಸಿದನು.

೧೨೫. ಹರನು ಸ್ಮರಿಸಿಕೊಂಡಕೂಡಲೇ ಆಕೆಯೂ ವೃಷಭವೂ ಒಡನೆಯೇ ಬಂದರು. (ವೃಷಭವು ಕರೆದುಕೊಂಡು ಬಂದಿತು) ಸಖಿಯರೊಂದಿಗೆ ಸೇರಿಕೊಂಡು ಹರನನ್ನು ಹೊಂದಿದಳು.

೧೨೬. ಆಗ ಆ ಪಾರ್ವತಿಯು ಭ್ರಮರದ ಆಕಾರವನ್ನು ಬಿಟ್ಟು ಹರನ ಅರ್ಧಶರೀರವನ್ನು ಹೊಕ್ಕಳು. ಅನಂತರ ಗಿರಿಜೆಯ ಪ್ರಾಪ್ತಿಯಿಂದ ಮಹೇಶ್ವರನು ಸಂತೋಷಗೊಂಡನು.

೧೨೭–೧೩೦. ಆಗ ಶಿವನು ಯೋಗಿಣಿಯರನ್ನು ಕುರಿತು ಈ ಜಲಂಧರನ ಕಬಂಧದ ರಕ್ತವನ್ನು ಕುಡಿಯುವುದಕ್ಕೂ ಮಾಂಸಾದಿಗಳನ್ನು ತಿನ್ನುವುದಕ್ಕೂ ಹೇಳಲು ಅವರು ಬಹುವಾಗಿ ಸಂತೋಷಿಸಿದರು. ಅನಂತರ ಮಾಂಸ, ಮೇದಸ್ಸು ರಕ್ತಗಳನ್ನು ತಿಂದು ಕುಡಿದು ಆ ಯೋಗಿನಿಯರು ಕುಣಿದರು. ಆಗ ಹರನು ಆ ಯೋಗಿನಿಯರು ಕ್ರೀಡಿಸುತ್ತಿರುವುದನ್ನು ನೋಡಿ ಸಂತೋಷಿಸಿ ತಾನೂ ಕೂಡಾ

ಸ್ವಯಂ ಚ ಭೈರವಂ ರೂಪಂ ಕೃತ್ವಾ ತನ್ಮಧ್ಯಗಃ ಪಪೌ ।
ತೀಕ್ಷ್ಣದಂಷ್ಟ್ರಾ ಮಹಾಕಾಯಾಸ್ತದಾಸನ್ಯೋಗಿನೀ ಗಣಾಃ ॥ ೧೨೯ ॥

ಗ್ರಸಂತೋದ್ಯಾಪಿ ಮಾಂಸಾನಿ ಕಾಲೇಚಾಪಿ ಪಿಬಂತ್ಯಸೃಕ್ ।
ತೇನ ಜಾಲಂಧರೋ ದೈತ್ಯೋ ನೋತ್ತಿಷ್ಠತಿ ರಣೇ ಹತಃ ॥ ೧೩೦ ॥

ತತಸ್ತತ್ರ ಸಮಾಜಗ್ಮುರ್ಬ್ರಹ್ಮಾದ್ಯಾ ದೇವತಾ ಗಣಾಃ ।
ಋಷಯೋ ಮರುತೋ ದೇವಾ ಸ್ತುವಂತಸ್ತಂ ಮಹೇಶ್ವರಂ ॥ ೧೩೧ ॥

ದಿಶಃ ಪ್ರಸೇದುಸ್ಸುರಭಿರ್ವವೌ ಮರುದ್ದಿವಃ
ಪ್ರಪೇತುಃ ಸುರಪುಷ್ಪವೃಷ್ಟಯಃ ।
ಕೃತಾಭಿಷೇಕಸ್ಯ ಚ ತಸ್ಯ ನಿಸ್ವನಾತ್ಸ
ನ್ನಾದಿತಾ ದುಂದುಭಯೋಽಪಿ ಚಕ್ರಿರೇ ॥ ೧೩೨ ॥

---

ಭೈರವನ ಆಕಾರವನ್ನು ಹೊಂದಿ ಆ ಯೋಗಿನಿಯರ ಮಧ್ಯದಲ್ಲಿದ್ದುಕೊಂಡು ರಕ್ತವನ್ನು ಕುಡಿದನು. ಅವರು ಚೂಪಾದ ಕೋರೆದಾಡೆಯನ್ನು ಹೊಂದಿ ದೊಡ್ಡ ಶರೀರವುಳ್ಳವರಾಗಿ ಆದರು. ಈಗಲೂ ಕೂಡ ಅವರು ಮಾಂಸವನ್ನು ತಿನ್ನುತ್ತಲೇ ಇರುವರು. ಮತ್ತು ಆ ರಕ್ತವು ಹೊರಟಾಗಲೆಲ್ಲಾ ಅದನ್ನು ಕುಡಿಯುತ್ತಲೇ ಇರುವರು. ಇದರಿಂದ ಆ ಜಲಂಧರನು ಯುದ್ಧರಂಗದಿಂದ ಮೇಲಕ್ಕೇಳುವಂತೆಯೇ ಇಲ್ಲ.

೧೩೧. ಆಗ ಅಲ್ಲಿ ಬ್ರಹ್ಮನೇ ಮುಂತಾದ ದೇವತೆಗಳ ಗುಂಪೂ ಋಷಿಗಳೂ ಮರುತ್ತುಗಳೂ ಬಂದು ಆ ಶಿವನನ್ನು ಸ್ತೋತ್ರಮಾಡಿದರು.

೧೩೨. ಒಡನೆಯೇ ದಿಕ್ಕುಗಳೆಲ್ಲವೂ ನಿರ್ಮಲವಾದುವು. ಗಾಳಿಯು ಸುವಾಸನೆಯುಳ್ಳದ್ದಾಗಿ ಬೀಸಿತು. ಅಂತರಿಕ್ಷದಿಂದ ಹೂಮಳೆಗರೆಯಿತು. ಆಗ ಅವರೆಲ್ಲರೂ ಆ ಶಿವನಿಗೆ ಅಭಿಷೇಕವನ್ನು ಮಾಡಿದರು. ಆಗ ದೇವದುಂದುಭಿಗಳು ಮೊಳಗಿದುವು.

ಉಪರಿಪರಿಮುಳಾಂಘ್ರೈಃ ಸುಸ್ವರಂ ಸಂಪತದ್ಭಿಃ
ಮಧುಕರನಿಕರಂಬ್ಯೈರುಹ್ಯಮಾನಾ ಭರೇಣ ।
ಅದರಳ ಮಧುಧಾರಾಸಾರ ಸಂಸಿಕ್ತ ಭೂಮಿಃ
ಸಪದಿ ಸುರವಿಮುಕ್ತಾಪ್ಸ್ರಾಪತತ್ಪುಷ್ಪವೃಷ್ಟಿಃ ॥ ೧೩೩ ॥

ಹತೇ ತದಾ ಸಿಂಧುಸುತೇ ಹರೇಣ
ನಾರಾಚಘಾತೈಸ್ತ್ರಿಜಗತ್ತದಾ ಬಭೌ ।
ಪ್ರಸೂನವೃಷ್ಟಿರ್ನನೃತುಸ್ತದಾಂಗನಾ
ಜಗುಶ್ಚ ಯಕ್ಷಾಃ ಸುರಕಿನ್ನರಾದ್ಯಾಃ ॥ ೧೩೪ ॥

ಶಂಭುರ್ವೈರಿಜಯಾತ್ಸ್ಥಿತೇನ ಯಶಸಾ ಸ್ಫಾರಾಂಗಕಾಂತಿರ್ಗಿರಿಂ
ಸ್ವಂ ಭೇಜೇ ಸುರಸಿದ್ಧ ಚಾಮರಗಣೈಸ್ಸಂಸ್ತೂಯಮಾನಸ್ಸದಾ ।
ಗೌರೀ ವಾಪಿ ಜಗಾಮ ಚಾಶು ಗಿರಿತಃ ಶ್ವೇತಂ ಸಖೀ ಸಂವೃತಾ
ಸಂಚಕ್ರು ಸ್ತ್ವಭಿಸೇವನಂ ಸುಮನಸಾಂ ವರ್ಷೇಣ ದೇವಾಂಗನಾಃ ॥೧೩೫॥

---

೧೩೩. ಪುಷ್ಪವೃಷ್ಟಿಯಾಗುತ್ತಿರಲು ಆ ಪುಷ್ಪದಲ್ಲಿರುವ ಮಧು ಮತ್ತು ಪರಿಮಳಕ್ಕೆ ಜೇನುನೊಣಗಳು ಅವುಗಳ ಜೊತೆಯಲ್ಲಿಯೇ ಬರುತ್ತಿದ್ದವು. ಅವು ಬಹು ಚೆನ್ನಾಗಿ ಧ್ವನಿಮಾಡುತ್ತಿದ್ದುವು. ಆ ಹೂವುಗಳಿಂದ ಜೇನು ಸೋರುತ್ತಾ ಅಲ್ಲಿನ ನೆಲವೆಲ್ಲವೂ ನೆನೆದು ಹೋಯಿತು. ಇಂತಹ ಪುಷ್ಪವೃಷ್ಟಿಯನ್ನು ದೇವತೆಗಳು ಆ ಮಹೇಶ್ವರನ ಮೇಲೆ ಮಾಡಿದರು.

೧೩೪. ಶಿವನು ಜಾಲಂಧರನನ್ನು ಕೊಲ್ಲಲು ಮೂರು ಲೋಕವೂ ಕೂಡ ಸುರಕ್ಷಿತವಾಗಿ ಸಂತೋಷದಿಂದ ಪ್ರಕಾಶಿಸಿತು. ಅಂತರಿಕ್ಷದಿಂದ ಪುಷ್ಪವೃಷ್ಟಿ ಯಾಯಿತು. ಅಪ್ಸರ ಸ್ತ್ರೀಯರು ಕುಣಿದರು. ಯಕ್ಷರೂ, ದೇವತೆಗಳೂ, ಕಿನ್ನರರೂ ಎಲ್ಲರೂ ಸಂತೋಷದಿಂದ ಹಾಡುತ್ತಿದ್ದರು.

೧೩೫. ಈ ರೀತಿಯಾಗಿ ಶಿವನು ಪ್ರಬಲವಾದ ವೈರಿಯನ್ನು ಕೊಂದುದರಿಂದ ಉತ್ತಮವಾದ ಯಶಸ್ಸನ್ನು ಹೊಂದಿ ದೇವತೆಗಳಿಂದ ಹೊಗಳಲ್ಪಡುತ್ತಾ ಚಾಮರ ವನ್ನು ಬೀಸಿಸಿಕೊಳ್ಳುತ್ತಾ ತನ್ನ ಬೆಟ್ಟವಾದ ಕೈಲಾಸವನ್ನು ಹೊಂದಿದನು. ಗೌರಿಯೂ ಕೂಡ ಮಾನಸೋತ್ತರ ಪರ್ವತದಿಂದ ಕೈಲಾಸ ಪರ್ವತಕ್ಕೆ ಸಖಿಯರ ಜೊತೆಯಲ್ಲಿ ಹೋದಳು. ಆಗ ಆಕೆಯ ತಲೆಯಮೇಲೆ ದೇವತಾ ಸ್ತ್ರೀಯರು ಮಂದಾರ ಪುಷ್ಪವನ್ನು ತಂದು ಎರಚಿದರು. ಮತ್ತು ಸೇವಿಸುತ್ತಿದ್ದರು.

ದೇವೋಽಸೌ ಕರುಣಾಮಯಃ ಸುರಗಣಾನ್ ಸ್ವೇ ಸ್ವೇ ಪದೇ ಸ್ಥಾಪಯನ್ ।
ಪ್ರಾಗ್ವದಾದನ್ಯದಪಿ ಸ್ವಕಂ ವಸು ತತೋ ಜ್ಞಾತ್ವಾ ಪತಿ ಶ್ಶಂಕರಃ ॥
ಕಿಂ ವಕ್ತವ್ಯಮತಃ ಪರಂ ಯದಿ ಭವೇದಿಶಾನುಕಂಪಾ ಪರಾ ।
ಕೋಽಯಂ ವಾ ತ್ರಿದಿವೋ ಧರಾತಲಮಿದಂ ಸ್ಯಾದಾತ್ಮಸಾತ್ಸರ್ವತಃ॥೧೩೬॥

ದೇವಾಸ್ಸ್ವರಾಜ್ಯಮಾಸಾದ್ಯ ಯಥಾ ಪೂರ್ವಂ ಚಕಾಶಿರೇ ।
ಬುಭುಜುರ್ಯಜ್ಞಭಾಗಾಂಸ್ತೇ ಲೋಕಪಾಲತ್ವಮಾಶ್ರಿತಾಃ ॥ ೧೩೭ ॥

॥ ನಾರದ ಉವಾಚ ॥

ಇತಿ ಜಾಲಂಧರಸ್ಯೋಕ್ತಂ ಯಥಾವದನುಪೂರ್ವಶಃ ।
ಚರಿತಂ ಲೋಕವೀರಸ್ಯ ರಾಜನ್ನಿತ್ಯದ್ಭುತಂ ತವ ॥ ೧೩೮ ॥

ವಿಷ್ಣುಸ್ತ್ಯಜತಿ ನಾದ್ಯಾಪಿ ಕ್ಷೀರಾಬ್ಧಿಂ ಯದ್ವಶೋ ನೃಪ ।
ಸರ್ವೋಽಪಿ ಭುಂಕ್ತೇ ಸ್ವಂ ಕರ್ಮ ತದ್ವಿದ್ಧಿ ತ್ವಮಸಂಶಯಂ ॥ ೧೩೯ ॥

---

೧೩೬. · ಅನಂತರ ಈ ಕೃಪಾಶಾಲಿಯಾದ ಶಂಕರನು ದೇವತೆಗಳೆನ್ನು ಹಿಂದಿದ್ದಂತೆಯೇ ಅವರವರ ಸ್ಥಾನದಲ್ಲಿಟ್ಟನು. ಅಲ್ಲದೆ ತನ್ನಲ್ಲಿರುವ ಧನವೇ ಮುಂತಾದುವನ್ನೂ, ಒಡವೆಗಳನ್ನೂ ಅವರವರ ಯೋಗ್ಯತಾನುಸಾರವಾಗಿ ಕೊಟ್ಟು ಗೌರವಿಸಿದನು. ಈಶ್ವರನ ದಯೆಯು ಬಂದರೆ ಇದಕ್ಕಿಂತಲೂ ಮಾಡ ಬೇಕಾದುದಾಗಲೀ, ಹೇಳಬೇಕಾದುದಾಗಲೀ, ಏನಿರುವುದು ? ಸ್ವರ್ಗಲೋಕ ವೆಷ್ಟರದು ? ಭೂಲೋಕವು ತಾನೇ ಎಷ್ಟರದು ? ಆ ಸ್ವಾಮಿಯ ದಯೆಯೊಂದಿ ದ್ದರೆ ಎಲ್ಲವೂ ತಮ್ಮ ಅಧೀನವಾಗುತ್ತವೆ.

೧೩೭. ದೇವತೆಗಳು ಹಿಂದಿನಂತೆ ತಮ್ಮ ತಮ್ಮ ರಾಜ್ಯಗಳನ್ನು ಹೊಂದಿ ಹಿಂದಿನಂತೆಯೇ ಸುಖವಾಗಿದ್ದರು. ಹಿಂದಿನಂತೆ ಲೋಕಪಾಲಕರೂ ಆಗಿ ಯಜ್ಞದ ಹವಿಸ್ಸನ್ನು ತಿನ್ನುತ್ತಾ ನೆಮ್ಮದಿಯನ್ನು ಹೊಂದಿದರು.

೧೩೮. ನಾರದನು ಹೇಳಿದನು– ಎಲೈ ಧರ್ಮಜನೇ ! ಲೋಕವೀರನಾದ ಈ ಜಾಲಂಧರನ ಅದ್ಭುತವಾದ ಚರಿತ್ರೆಯನ್ನು ಕ್ರಮವಾಗಿ ನಿನಗೆ ತಿಳಿಸಿದನು.

೧೩೯. ಜಲಂಧರನಿಗೆ ಅಧೀನನಾಗಿ ವಿಷ್ಣುವೂ ಕೂಡ ಈಗಲೂ ಕ್ಷೀರ ಸಮುದ್ರವನ್ನು ಬಿಟ್ಟಿಲ್ಲ. ಪ್ರತಿಯೊಬ್ಬನೂ ಕೂಡ ತಾನು ಮಾಡಿದ ಪಾಪಪುಣ್ಯ ಗಳನ್ನು ಅನುಭವಿಸುತ್ತಾನೆ. ಇದರಲ್ಲಿ ಸಂಶಯವಿಲ್ಲವೆಂದು ಖಂಡಿತವಾಗಿ ತಿಳಿ.

ತುಭ್ಯಂ ದುಃಖನಿರಾಸಾಯ ಪ್ರೋಕ್ತಮಾಖ್ಯಾನಮುತ್ತಮಂ ।
ಯಾವದ್ದೇಹೋಸ್ತಿ ಕರ್ಮಾಣಿ ಸುಖದುಃಖಾನಿ ಕರ್ಮತಃ ॥ ೧೪೦ ॥

ದೇಹೀ ಭುಂಕ್ತೇsವಶೋ ರಾಜನ್ ತ್ರಾಣಂ ನ ಜ್ಞಾನತಃ ಪರಂ ।
ಕೃಷ್ಣಾದೀನಾಂ ದೇಹಬಂಧೇ ಸುಖದುಃಖಾದಿ ವರ್ತತೇ ॥ ೧೪೧ ॥

ತತ್ರೇತರೇಷಾಂ ಕಿಂ ವಾಚ್ಯಂ ಯೇ ವೈರಾಗ್ಯಪರಾಙ್ಮುಖಾಃ ।
ಜ್ಞಾತ್ವೇದೃಶೀಂ ಕರ್ಮಗತಿಂ ಸರ್ವೇಭ್ಯೋ ಬಲವತ್ತಮಾಂ ॥ ೧೪೨ ॥

ಧೀರೋ ಭವ ಪ್ರತೀಕ್ಷಸ್ವ ಶುಭಕರ್ಮಾಗಮಂ ಪುನಃ ।
ಶತ್ರೂನ್ ಜಿತ್ವಾ ತು ಸಮಯೇ ಸ್ವಂ ರಾಜ್ಯಂ ಪುನರಾಪ್ಸ್ಯಸಿ ॥ ೧೪೩ ॥

ಇತಿಹಾಸಮಿಮಂ ಶ್ರುತ್ವಾ ಸ ದುಃಖೈಃ ಪರಿಭೂಯತೇ ।
ಧರ್ಮಾರ್ಥಕಾಮಮೋಕ್ಷಾಶ್ಚ ಯಥಾವಚ್ಚಾತ್ರ ಕೀರ್ತಿತಾಃ ॥ ೧೪೪ ॥

---

೧೪೦–೧೪೩. ಎಲೈ ದೊರೆಯೇ ! ನಿನ್ನಲ್ಲಿರುವ ದುಃಖವನ್ನು ನಾಶಮಾಡುವುದಕ್ಕೋಸ್ಕರ ಈ ಕಥೆಯನ್ನು ಹೇಳಿದೆನು. ಪ್ರಾಣಿಯು ತಾನು ಮಾಡಿದ ಪಾಪಗಳಿಗನುಸಾರವಾಗಿ ಸುಖದುಃಖಗಳನ್ನು ಈ ದೇಹವಿರುವವರೆಗೂ ಅನುಭವಿಸಬೇಕು. ಆ ಪಾಪಪುಣ್ಯಗಳನ್ನು ಕೂಡ ತನ್ನ ಮನಸ್ಸು ಬಂದಂತೆ ಅನುಭವಿಸಲಾಗುವುದಿಲ್ಲ. ಅದು ಬಂದಂತೆ ನಾವು ಅದಕ್ಕೆ ಅಧೀನರಾಗಿ ಅನುಭವಿಸಬೇಕು. ಇವುಗಳಿಂದ ಪಾರಾಗಬೇಕಾದರೆ ಜ್ಞಾನವನ್ನು ಹೊರತು ಮತ್ತೊಂದು ಬೇರೆಯಾವ ಪದಾರ್ಥವಿಲ್ಲ. ಕೃಷ್ಣನೇ ಮುಂತಾದವರಿಗೂ ಕೂಡ ಈ ದೇಹವನ್ನು ಹೊಂದಿದ ಮೇಲೆ ಕರ್ಮವಶದಿಂದ ಸುಖದುಃಖಗಳಿವೆ. ಎಂದಮೇಲೆ ವೈರಾಗ್ಯವನ್ನು ಹೊಂದದಿರತಕ್ಕ ಇತರರ ವಿಷಯದಲ್ಲಿ ಹೇಳತಕ್ಕದ್ದೇನಿದೆ ? ಎಲ್ಲದಕ್ಕಿಂತಲೂ ಬಲವಾದ ಈ ಕರ್ಮದ ಸ್ಥಿತಿಯನ್ನು ತಿಳಿದುಕೊಂಡು ಧೈರ್ಯದಿಂದಿರು. ಶುಭವು ತನ್ನಷ್ಟಕ್ಕೆ ತಾನೇ ಕಾಲಾನುಗುಣವಾಗಿ ಬರುತ್ತದೆ. ಅದನ್ನು ನಿರೀಕ್ಷಿಸುತ್ತಿರು. ಕಾಲಬಂದಾಗ ಶತ್ರುಗಳನ್ನು ಗೆದ್ದು ನಿನ್ನ ರಾಜ್ಯವನ್ನು ಮತ್ತೆ ಹೊಂದುತ್ತೀಯೆ.

೧೪೪. ಈ ಇತಿಹಾಸವನ್ನು ಕೇಳಿದರೆ ದುಃಖಗಳು ಪೀಡಿಸುವುದಿಲ್ಲ. ಇದರಲ್ಲಿ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನೂ ಅವುಗಳ ಗುಣಗಳನ್ನೂ ಕ್ರಮವಾಗಿ ಹೇಳಿದ್ದೇನೆ.

ಸ್ವರ್ಗ್ಯಂ ಪಾಪಹರಂ ಪುಣ್ಯಂ ಶೋಕಮೋಹವಿನಾಶನಂ ।
ಬ್ರಾಹ್ಮಣೋ ಜ್ಞಾನಮಾಪ್ನೋತಿ ರಾಜ್ಯಂ ಪ್ರಾಪ್ನೋತಿ ಕ್ಷತ್ರಿಯಃ॥೧೪೫॥

ವೈಶ್ಯಶ್ಚ ಬಹ್ವೀಂ ಸಂಪತ್ತಿಂ ಶ್ರುತ್ವಾ ಶೂದ್ರಸ್ಸುಖಂ ಲಭೇತ್ ।
ರಾಜಾ ಯೋ ಭ್ರಷ್ಟರಾಜ್ಯೋಽಪಿ ರತಸ್ಸನ್ನೇವ ಸತ್ಪಥಿ ॥ ೧೪೬ ॥

ಸ ರಾಜ್ಯಂ ಪುನರಾಪ್ನೋತಿ ಶ್ರವಣಾನ್ನಿತ್ಯಮಸ್ಯ ತು ।
ಆಕರ್ಣ್ಯೈತತ್ಸತಾಂ ರಾಜನ್ ಶ್ರಾವ್ಯಮನ್ಯನ್ನ ರೋಚತೇ ॥ ೧೪೭ ॥

ಕಲಂ ಚ ಕೋಕಿಲಾಲಾಪಂ ರೂಕ್ಷಂ ಧ್ವಾಂಕ್ಷರುತಂ ತಥಾ ।
ಆಖ್ಯಾನಮೇತದನಘಂ ಶ್ರುತ್ವಾ ಸಜ್ಜನಹೃತ್ಪ್ರಿಯಂ ॥ ೧೪೮ ॥

ಹಿರಣ್ಯ ತಿಲವಸ್ತ್ರಾದ್ಯೈರ್ಧೇನು ಭೂಮಿ ಪ್ರದಾನತಃ ।
ಸಂತೋಷಯೇದ್ವಾಚಕಂ ತು ತಸ್ಮಿಂಸ್ತುಷ್ಟೇ ಫಲಂ ಭವೇತ್ ॥ ೧೪೯ ॥

---

೧೪೫–೧೪೯. ಈ ಕಥೆಯನ್ನು ಕೇಳಿದರೆ ಸ್ವರ್ಗವು ಸಿಕ್ಕುತ್ತದೆ. ಪಾಪವು ನಾಶವಾಗುತ್ತದೆ. ಪುಣ್ಯವು ಬರುತ್ತದೆ. ಶೋಕ ಅಜ್ಞಾನಗಳು ನಾಶವಾಗುತ್ತವೆ. ಇದನ್ನು ಓದಿದರೆ ಬ್ರಾಹ್ಮಣನು ಜ್ಞಾನವನ್ನು ಹೊಂದುತ್ತಾನೆ. ಕ್ಷತ್ರಿಯನು ರಾಜ್ಯವನ್ನು ಹೊಂದುತ್ತಾನೆ. ವೈಶ್ಯನು ಬಹುವಾದ ಸಂಪತ್ತನ್ನು ಹೊಂದುತ್ತಾನೆ. ಶೂದ್ರರು ಸುಖವನ್ನು ಹೊಂದುತ್ತಾನೆ. ರಾಜ್ಯವನ್ನು ಕಳೆದುಕೊಂಡ ರಾಜನು ಒಳ್ಳೆಯ ಮಾರ್ಗದಲ್ಲಿದ್ದುಕೊಂಡಿದ್ದು ಈ ಇತಿಹಾಸವನ್ನು ದಿನವೂ ಕೇಳುತ್ತಿದ್ದರೆ ಮತ್ತೆ ಆ ರಾಜ್ಯವನ್ನು ಹೊಂದುತ್ತಾನೆ. ಸತ್ಪುರುಷರಾದವರು ಇವನ್ನು ಕೇಳುತ್ತಿದ್ದರೆ ಅವರಿಗೆ ಬೇರೆ ಯಾವುದನ್ನು ಕೇಳಲೂ ಮನಸ್ಸು ಬರುವುದಿಲ್ಲ. ಇವನ್ನು ಕೇಳುತ್ತಿದ್ದರೆ ಮಧುರವಾದ ಕೋಕಿಲೆಯ ಧ್ವನಿಯೂ ಕೂಡ ಕಠಿಣವಾದ ಗೂಬೆಯ ಕೂಗಿನಂತಾಗುತ್ತದೆ. ಉತ್ತಮವಾದ, ಸಜ್ಜನರಿಗೆ ಸಂತೋಷಕರವಾದ, ಈ ಇತಿಹಾಸವನ್ನು ಕೇಳಿದ ಮೇಲೆ ಪುರಾಣವನ್ನು ಹೇಳಿದವನಿಗೆ ಚಿನ್ನ, ಎಳ್ಳು, ಬಟ್ಟೆ, ಹಸು, ಭೂಮಿ ಮುಂತಾದುವುಗಳನ್ನು ಕೊಟ್ಟು ಸಂತೋಷಪಡಿಸಬೇಕು. ಅವನಿಗೆ ಸಂತೋಷ ಉಂಟಾದರೆ ಕೇಳಿದವರಿಗೆ ಫಲವು ದೊರೆಯುತ್ತದೆ.

ದೇವತಾಶ್ಚ ಪ್ರಸೀದೇಯುರರ್ಚಿತೇ ವಾಚಕೇ ಗುರೌ ।
ಅನ್ನದಾನಾದಿ ದದ್ಯಾಚ್ಚ ಬ್ರಾಹ್ಮಣೇಭ್ಯಃ ಪ್ರಪೂಜಯೇತ್ ॥ ೧೫೦ ॥

ಜಾಯತೇ ವಿಜಯೀ ನಿತ್ಯಂ ಪುತ್ರಪೌತ್ರಸಮೃದ್ಧಿವರ್ಾ ।
ಜಾಯತೇ ವಿಷ್ಣುಲೋಕೇ ಯಃ ಶೃಣೋತ್ಯಾಖ್ಯಾನಮುತ್ತಮಂ ॥೧೫೧॥

ಇತಿ ವ್ಯಾಜೇನ ಭೋ ಭೂಪ ತುಳಸ್ಯುತ್ಪತ್ತಿಕಾರಣಂ ।
ಯೇ ಶೃಣ್ವಂತಿ ನರ ಶ್ರೇಷ್ಠಾ ನ ತೇಷಾಂ ಪಾತಕಂ ಕ್ವಚಿತ್ ॥ ೧೫೨ ॥

ಇದಂ ತುಳಸಿ ಮಾಹಾತ್ಮ್ಯಂ ಪವಿತ್ರಂ ಪಾಪನಾಶನಂ ।
ಶ್ರುತ್ವಾ ತು ಲಭತೇ ಮೋಕ್ಷಮುಕ್ತ್ವಾ ಚೈವ ನ ಸಂಶಯಃ ॥ ೧೫೩ ॥

ಸ್ವಗೃಹೇ ರೋಪಿತಾ ಚೈವ ತುಳಸೀ ಪಾಪ ನಾಶಿನೀ ।
ದರ್ಶನಾದ್ಬ್ರಹ್ಮಹತ್ಯಾಪಿ ನಶ್ಯತೇ ನಾತ್ರ ಸಂಶಯಃ ॥ ೧೫೪ ॥

---

೧೫೦. ಪುರಾಣ ಹೇಳಿದವನನ್ನೂ, ಗುರುವನ್ನೂ, ತೃಪ್ತಿಪಡಿಸಿದರ ದೇವತೆಗಳು ಪ್ರಸನ್ನರಾಗುತ್ತಾರೆ. ಈ ಪುರಾಣವನ್ನು ಕೇಳಿದಮೇಲೆ ಬ್ರಾಹ್ಮಣರ ಪೂಜೆಯನ್ನು ಮಾಡಿ ಅವರಿಗೆ ಅನ್ನ ಹಾಕಬೇಕು. ಮತ್ತು ಶಾಂತ್ಯರ್ಥವಾಗಿ ಸಂತರ್ಪಣೆಯನ್ನು ಮಾಡಿಸಬೇಕು.

೧೫೧. ಈ ಇತಿಹಾಸವನ್ನು ಕೇಳಿದವನು ಮಕ್ಕಳು ಮೊಮ್ಮಕ್ಕಳನ್ನೂ ಐಶ್ವರ್ಯವನ್ನೂ ಹೊಂದಿ ಎಲ್ಲಾ ಕಡೆಯಲ್ಲಿಯೂ ಜಯಶೀಲನಾಗುತ್ತಾನೆ. ಮತ್ತು ವೈಕುಂಠವನ್ನು ಹೊಂದುತ್ತಾನೆ.

೧೫೨. ಯಾವ ನೆಪದಿಂದಲಾದರೂ ತುಳಿಸಿಯ ಈ ಉತ್ಪತ್ತಿಯ ಕಾರಣ ವನ್ನು ಕೇಳಿದವರು ಪಾಪವನ್ನು ಹೊಂದುವುದೂ ಇಲ್ಲ. ನರಕಭಾಗಿಗಳೂ ಆಗುವುದಿಲ್ಲ.

೧೫೩. ಈ ತುಳಸಿಯ ಮಹಿಮೆಯು ಪವಿತ್ರವಾದುದು. ಪಾಪವನ್ನು ನಾಶಮಾಡತಕ್ಕುದು. ಇದನ್ನು ಕೇಳಿದರೂ,ಹೇಳಿದರೂ ಮೋಕ್ಷವನ್ನು ಹೊಂದು ತ್ತಾನೆ. ಸಂಶಯವಿಲ್ಲ.

೧೫೪. ತುಳಸಿಯನ್ನು ಮನೆಯಲ್ಲಿ ಬೆಳೆಸಿದರೆ ಪಾಪಗಳು ಹೋಗುತ್ತವೆ. ಅದರ ದರ್ಶನದಿಂದಲೇ ಬ್ರಹ್ಮಹತ್ಯೆಯು ಕೂಡಾ ಹೋಗುತ್ತದೆ. ಸಂಶಯವಿಲ್ಲ.

ಕಾರ್ತಿಕೇ ಚೈವ ಮಾಘೇ ತು ತುಲಸ್ಯಾ ಪೂಜಯೇದ್ಧರಿಂ ।
ವೈಶಾಖೇ ತು ವಿಶೇಷೇಣ ಪೂಜನಂ ಚ ಹರೇಸ್ಮೃತಂ ॥ ೧೫೫ ॥

ಏಕೇನೈವ ಪ್ರದಕ್ಷಿಣೇನ ಸಕಲಂ ಪಾಪಂ ಗತಂ ವೈ ಸದಾ
ಯೇ ಶುದ್ಧಾ ಭುವಿ ಸಂತಿ ದಾನನಿರತಾಃ ಕಾಲೇನ ಶುದ್ಧಿಂ ಗತಾಃ ।
ತೇಪಿ ಸ್ಯುಸ್ಸುರಪೂಜನಾರ್ಹತನವಃ ಪಾಪಾಚ್ಚ ದೂರಂ ಗತಾಃ
ಯೇ ವೈ ವಿಷ್ಣುಜನಾಶ್ಚ ದುರ್ಲಭತರಾ ಹ್ಯಸ್ಮಿನ್ ಕಲೌ ಸಾಂಪ್ರತಂ॥೧೫೬॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಜಾಲಂಧರೋಪಾಖ್ಯಾನೇ ಜಾಲಂಧರ ವಧ, ಸುರ ಮಹೋತ್ಸವೋ ನಾಮ ಏಕೋನವಿಂಶತಿತಮೋಽಧ್ಯಾಯಃ

---

೧೫೫. ಕಾರ್ತಿಕ, ಮಾಘ ಮಾಸಗಳಲ್ಲಿ ತುಳಸಿಯ ಜೊತೆಯಲ್ಲಿ ಹರಿಯನ್ನು ಪೂಜಿಸಬೇಕು. ವೈಶಾಖಮಾಸದಲ್ಲಿ ತುಳಸಿಯ ಜೊತೆಯಲ್ಲಿ ಹರಿಯನ್ನು ಪೂಜಿಸಿದರೆ ವಿಶೇಷ ಫಲವುಂಟೆಂದು ಹೇಳುತ್ತಾರೆ.

೧೫೬. ಈ ತುಲಸಿಗೆ ಒಂದಾವರ್ತಿ ಪ್ರದಕ್ಷಿಣೆ ಮಾಡುವುದರಿಂದಲೇ ಪಾಪವೆಲ್ಲವೂ ಹೋಗಿ ಅಶುದ್ಧರು ಶುದ್ಧರಾಗುತ್ತಾರೆ. ಅವರು ಈ ರೀತಿಯಾಗಿ ಶುದ್ಧರಾಗಿ ದಾನಧರ್ಮಗಳನ್ನು ಮಾಡುತ್ತಾ ಸ್ವಲ್ಪಕಾಲದ ಮೇಲೆ ಮತ್ತೂ ಶುದ್ಧರಾಗಿ ದೇವರ ಪೂಜೆಗೆ ಯೋಗ್ಯವಾದ ದೇಹವನ್ನು ಹೊಂದುತ್ತಾರೆ. ಪಾಪದಿಂದ ಮುಕ್ತರಾದ, ವೈಷ್ಣವರೂ ಆದ, ಜನರು ಈ ಕಲಿಯುಗದಲ್ಲಿ ಸಿಕ್ಕುವುದು ಕಷ್ಟ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಜಲಂಧರೋಪಾಖ್ಯಾನದಲ್ಲಿ ಜಲಂಧರನ ವಧೆ, ಸುರ ಮಹೋತ್ಸವ ಎಂಬ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ವಿಂಶೋಽಧ್ಯಾಯಃ ॥



**॥ ಯುಧಿಷ್ಠಿರ ಉವಾಚ ॥**

**ಶ್ರೀಶೈಲಃ ಪರ್ವತೋರಮ್ಯಃ ಕುತ್ರ ತಿಷ್ಠತಿ ನಾರದ ।**
**ಕಿಂ ತತ್ರ ವರ್ತತೇ ತೀರ್ಥಂ ಕಸ್ಯ ದೇವಸ್ಯ ಪೂಜನಂ ॥**
**ಕಸ್ಯಾಂ ದಿಶಿ ಸಮಾಖ್ಯಾತೋ ಲೋಕೇಷು ಚ ವದಾಧುನಾ ॥ ೧ ॥**

**॥ ನಾರದ ಉವಾಚ ॥**

**ಶೃಣು ರಾಜನ್ ಪ್ರವಕ್ಷ್ಯಾಮಿ ಶ್ರೀಶೈಲಂ ಪರ್ವತೋತ್ತಮಂ ।**
**ಯಂ ಶ್ರುತ್ವಾ ಮುಚ್ಯತೇ ಲೋಕೇ ಬಾಲಹತ್ಯಾದಿ ಪಾತಕಾತ್ ॥ ೨ ॥**

---

## ಇಪ್ಪತ್ತನೆಯ ಅಧ್ಯಾಯವು

೧. ಯುಧಿಷ್ಠಿರನು ಹೇಳಿದನು– ಎಲೈ ನಾರದನೇ ! ಸುಂದರವಾದ ಶ್ರೀಶೈಲ ಪರ್ವತವು ಎಲ್ಲಿರುವುದು ? ಅಲ್ಲಿರುವ ತೀರ್ಥವಾವುದು ? ಅಲ್ಲಿ ಯಾವ ದೇವರಿಗೆ ಪೂಜೆಮಾಡಬೇಕು ? ಲೋಕದಲ್ಲಿ ಅದು ಯಾವ ದಿಕ್ಕಿನಲ್ಲಿದೆ ? ಎಂಬುದನ್ನು ತಿಳಿಸು.

೨. ನಾರದನು ಹೇಳಿದನು– ಎಲೈ ದೊರೆಯೇ ! ಕೇಳು. ಶ್ರೀಶೈಲದ ವಿಷಯವನ್ನು ಹೇಳುತ್ತೇನೆ. ಅದನ್ನು ಕೇಳುವುದರಿಂದಲೇ ಪ್ರಾಣಿಗಳ ಭ್ರೂಣ ಹತ್ಯಾದಿ ದೋಷಗಳು ಹೋಗುತ್ತವೆ.

ತತ್ಪರ್ವತವನಂ ರಮ್ಯಂ ಮುನಿಭಿಶ್ಚೋಪಸೇವಿತಂ ।
ನಾನಾ ದ್ರುಮಲತಾಕೀರ್ಣಂ ನಾನಾಪುಷ್ಪೋಪಶೋಭಿತಂ ॥ ೩ ॥

ಹಂಸಕೋಕಿಲನಾದೈಶ್ಚ ಮಯೂರಧ್ವನಿನಾದಿತಂ ।
ಶ್ರೀಫಲೈಶ್ಚ ಕಪಿತ್ಥೈಶ್ಚ ಶಿರೀಷೈ ರಾಜವೃಕ್ಷಕೈಃ ॥ ೪ ॥

ಪಾರಿಜಾತಕಪುಷ್ಪೈಶ್ಚ ಕದಂಬೋದುಂಬರೈಸ್ತಥಾ ।
ನಾನಾ ಪುಷ್ಪೈಃ ಸುಗಂಧಾಢ್ಯೈಃ ವಾಸಿತಂ ತದ್ವನಂ ಗಿರೌ ॥ ೫ ॥

ಸರ್ವಾಭಿಃ ಋಷಿಪತ್ನೀಭಿಃ ಸುಶಿಷ್ಯಾಭಿಸ್ಸಸೇವಿತಂ ।
ಕೇಚಿದ್ವಿಲಾಸಯುಕ್ತಾಶ್ಚ ಕೇಚಿದ್ವ್ಯಾಖ್ಯಾನ ತತ್ಪರಾಃ ॥ ೬ ॥

ಕೇಚಿದೂರ್ಧ್ವ ಭುಜಾಸ್ತತ್ರ ಅಂಗುಷ್ಠಾಗ್ರೇ ಸ್ಥಿತಾ ಪರೇ ।
ಶಿವಧ್ಯಾನರತಾಃ ಕೇಚಿತ್ ಕೇಚಿದ್ವಿಷ್ಣುಪರಾಯಣಾಃ ॥ ೭ ॥

---

೩. ಆ ಪರ್ವತದ ವನಗಳು ಬಹು ರಮ್ಯವಾಗಿದ್ದುವು. ಋಷಿಗಳು ಅದನ್ನು ಸೇವಿಸುತ್ತಿದ್ದರು. ಅಲ್ಲಿ ಬಗೆಬಗೆಯಾದ ಮರಗಳೂ ಬಳ್ಳಿಗಳೂ ಇದ್ದುವು. ನಾನಾ ಬಗೆಯಾದ ಹೂಗಳೂ ಇದ್ದುವು.

೪-೫. ಹಂಸ, ಕೋಗಿಲೆ, ನವಿಲುಗಳು ಧ್ವನಿಯಿಂದ ಇಂಪನ್ನುಂಟು ಮಾಡುತ್ತಿದ್ದುವು. ಬಿಲ್ವ ಬೇಲ ಮುಂತಾದ ಫಲಗಳು ಅಲ್ಲಿ ಯಥೇಚ್ಛವಾಗಿದ್ದುವು. ಬಾಗೆ, ಸಲ್ಲಕಿ, ಪಾರಿಜಾತ, ಕದಂಬ, ಅತ್ತಿ ಮುಂತಾದ ಮರಗಳಿಂದ ರಂಜಿತ ವಾಗಿದ್ದಿತು. ಅನೇಕವಾದ ಸುಗಂಧ ಪುಷ್ಪಗಳಿಂದ ಆ ವನವು ಸುವಾಸನೆಯುಳ್ಳ ದ್ದಾಗಿದ್ದಿತು.

೬-೭. ಅನೇಕರಾದ ಋಷಿಗಳ ಹೆಂಡರಿಂದಲೂ, ಒಳ್ಳೆಯ ಶಿಷ್ಯರಿಂದಲೂ ಆ ವನವು ಸೇವಿಸಲ್ಪಡುತ್ತಿದ್ದಿತು. ಅಲ್ಲಿ ಕೆಲವರು ಪಾಠಪ್ರವಚನಗಳನ್ನೂ ನಡೆಸುತ್ತಿದ್ದರು. ಕೆಲವರು ಶಿವಧ್ಯಾನವನ್ನೂ ಕೆಲವರು ವಿಷ್ಣುಧ್ಯಾನವನ್ನೂ ಮಾಡುತ್ತಿದ್ದರು.

ನಿರಾಹಾರಾಶ್ಚ ಕೇಸ್ಯತ್ರ ಕೇಚಿತ್ಪರ್ಣಾಶನೇ ರತಾಃ ।
ಕಂದಮೂಲಫಲಾಹಾರಾಃ ಕೇಚಿನ್ಮೌನವ್ರತಾ ಸ್ಥಿತಾಃ ॥ ೮ ॥

ಏಕಪಾದಸ್ಥಿತಾಃ ಕೇಚಿತ್ ಕೇಚಿತ್‌ಪದ್ಮಾಸನೇ ಸ್ಥಿತಾಃ ।
ಕೇಚಿಚ್ಚೈವ ನಿರಾಹಾರಾಸ್ತಪಸ್ತೇಪುಃ ಸುದುಷ್ಕರಂ ॥ ೯ ॥

ಆಶ್ರಮಾಣಿ ಚ ಪುಣ್ಯಾನಿ ನದ್ಯಶ್ಚ ವಿವಿಧಾಶ್ಶುಭಾಃ ।
ದೇವಖಾತಾನ್ಯನೇಕಾನಿ ತಟಾಕಾನಿ ಬಹೂನಿ ಚ ॥ ೧೦ ॥

ಪರ್ವತೋಽಯಂ ಮಹಾರಾಜ ದೃಶ್ಯತೇ ಕಿಲ ಸರ್ವತಃ ।
ಮಲ್ಲಿಕಾರ್ಜುನಕೋ ರಾಜರ್ ಯತ್ರ ತಿಷ್ಠತಿ ನಿತ್ಯಶಃ ॥ ೧೧ ॥

ತತ್ರೈವ ಶಿಖರಂ ರಮ್ಯಂ ಪರ್ವತೇ ಪರಿಶೋಭಿತಂ ।
ಶೃಂಗದರ್ಶನಮಾತ್ರೇಣ ಮುಕ್ತಿರೇವ ನ ಸಂಶಯಃ ॥ ೧೨ ॥

---

೮-೯. ಕೆಲವರು ಆಹಾರವನ್ನು ತೆಗೆದುಕೊಳ್ಳದೆಯೂ, ಕೆಲವರು ಎಲೆಗಳನ್ನು ತಿಂದುಕೊಂಡು ಇರುತ್ತಲೂ ಕೆಲವರು ಗೆಡ್ಡೆ ಗೆಣಸು ಫಲಗಳನ್ನು ತಿಂದುಕೊಂಡಿರುತ್ತಲೂ, ಕೆಲವರು ಮೌನವಾಗಿಯೂ ಇರುತ್ತಿದ್ದರು. ಕೆಲವರು ಒಂಟಿಕಾಲಿನಲ್ಲಿ ನಿಂತಿರುತ್ತಿದ್ದರು. ಕೆಲವರು ಪದ್ಮಾಸನದಲ್ಲಿ ಕುಳಿತಿರುತ್ತಿದ್ದರು. ಮತ್ತೆ ಕೆಲವರು ನಿರಾಹಾರರಾಗಿ ತಪಸ್ಸನ್ನು ಮಾಡುತ್ತಿದ್ದರು.

೧೦-೧೧. ಅಲ್ಲಿ ಪುಣ್ಯವಾದ ಆಶ್ರಮಗಳೂ, ನಾನಾ ಬಗೆಯಾದ ಪುಣ್ಯನದಿಗಳೂ ಇದ್ದುವು. ತಾನಾಗಿಯೇ ಇರುವ ಕೊಳಗಳೂ ಅಲ್ಲಿ ಅನೇಕವಾಗಿದ್ದುವು. ಯಾವ ಕಡೆಯಲ್ಲಿ ನೋಡಿದರೂ ಪರ್ವತದಲ್ಲಿ ಹೀಗೆ ಕಾಣುತ್ತಿರುವುದು. ಮಲ್ಲಿಗೆ ಮತ್ತಿಗಳು ಅಲ್ಲಿ ಯಾವಾಗಲೂ ಇರುತ್ತಿದ್ದುವು.

೧೨. ಆ ಬೆಟ್ಟದ ಮೇಲುಗಡೆ ಒಂದು ಶಿಖರವಿರುವುದು. ಅದು ಬಹು ರಮ್ಯವಾಗಿದೆ. ಅದರ ತುದಿಯನ್ನು ನೋಡಿದುದರಿಂದಲೇ ಮುಕ್ತಿಯು ಬರುವುದರಲ್ಲಿ ಸಂಶಯವಿಲ್ಲ.

ದಕ್ಷಿಣಾಂ ದಿಶಮಾಶ್ರಿತ್ಯ ವರ್ತತೇಪ ರ್ವತೋತ್ತಮಃ ।
ಅತ್ರ ಗಂಗಾ ಮಹಾರಮ್ಯಾ ಪಾತಾಳೇತಿ ಸಮಾಶ್ರಿತಾ ॥ ೧೩ ॥

ತತ್ರ ಚ ಸ್ನಾನಮಾತ್ರೇಣ ಮಹಾಪಾಪೈಃ ಪ್ರಮುಚ್ಯತೇ ।
ಶ್ರೀಶೈಲಶಿಖರಂ ದೃಷ್ಟ್ವಾ ವಾರಾಣಸ್ಯಾಂ ಮೃತೋ ಧ್ರುವಂ ॥ ೧೪ ॥

ಕೇದಾರೇ ಹ್ಯುದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ।
ತಪಸ್ವಿನಾಂ ಮಹತ್ ಸ್ಥಾನಂ ಯೋಗಿನಾಂ ಚ ತಥೈವ ಚ ॥ ೧೫ ॥

ತಸ್ಮಾತ್ಸರ್ವಪ್ರಯತ್ನೇನ ದರ್ಶನಂ ತಸ್ಯ ಕಾರಯೇತ್ ।
ಅಯಂ ವಿಜ್ಞಾನದೇವೋಽಸೌ ಮಹಾಪಾತಕನಾಶನಃ ॥ ೧೬ ॥

ಸಿದ್ಧಂ ಪುರಂ ಚ ನಗರಂ ರಮ್ಯಂ ಸ್ವರ್ಗಸುಖಾವಹಂ ।
ನಿತ್ಯಮಪ್ಸರಸೋ ಯತ್ರ ಗಾಯಂತಿ ಚ ರಮಂತಿ ಚ ॥ ೧೭ ॥

---

೧೩. ಅದರ ದಕ್ಷಿಣಕ್ಕೆ ಒಂದು ಪರ್ವತವು ಇದಕ್ಕೆ ಸೇರಿದಂತೆಯೇ ಇರುವುದು. ಇಲ್ಲಿ ಮನೋಹರವಾದ ಗಂಗೆಯು ಇರುವುದು. ಅದಕ್ಕೆ ಪಾತಾಳ ಗಂಗೆಯೆಂದು ಹೆಸರು.

೧೪–೧೬. ಅಲ್ಲಿ ಸ್ನಾನಮಾಡಿದರೆ ಮಹಾಪಾಪಗಳೆಲ್ಲವೂ ಹೋಗುತ್ತವೆ. ಶ್ರೀಶೈಲಶಿಖರವನ್ನು ನೋಡಿದರೂ ಕಾಶಿಯಲ್ಲಿ ಸತ್ತರೂ ಕೇದಾರದಲ್ಲಿ ನೀರನ್ನು ಕುಡಿದರೂ ಆತನಿಗೆ ಮತ್ತೆ ಜನ್ಮ ಸಂಭವಿಸುವುದಿಲ್ಲ. ಅದು ತಪಸ್ಸು ಮಾಡುವವರಿಗೂ, ಯೋಗಾಭ್ಯಾಸಮಾಡುವವರಿಗೂ ಉತ್ತಮವಾದ ಸ್ಥಳವು. ಆದ್ದರಿಂದ ಎಲ್ಲಾ ಪ್ರಯತ್ನಗಳಿಂದಲೂ ಅದರ ದರ್ಶನ ಮಾಡಬೇಕು. ಅಲ್ಲಿರತಕ್ಕ ಸ್ವಾಮಿಯು ವಿಜ್ಞಾನ ದೇವನು. ಮಹಾ ಪಾಪಗಳೆಲ್ಲವನ್ನೂ ನಾಶಮಾಡುತ್ತಾನೆ.

೧೭. ಅಲ್ಲಿ ಸಿದ್ಧಪುರವೆಂಬ ನಗರವಿದೆ. ಅದು ಚೆನ್ನಾಗಿರುವುದು. ಸ್ವರ್ಗ ಸುಖವು ಅಲ್ಲಿ ಸಿಗುತ್ತದೆ. ಅಲ್ಲಿ ಅಪ್ಸರ ಸ್ತ್ರೀಯರು ಗಾನಮಾಡುತ್ತಾ ಕ್ರೀಡಿಸುತ್ತಾರೆ.

**ಅತಃ ಪರ್ವತ ರಾಜೋಽಯಂ ದರ್ಶನೇ ಸೌಖ್ಯಕಾರಕಃ |**
**ತಸ್ಯ ತೈರ್ದರ್ಶನಂ ಕಾರ್ಯಂ ಮುಕ್ತಿಮಿಚ್ಛಂತಿ ಯೇ ನರಾಃ || ೧೮ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಯುಧಿಷ್ಠಿರ ಸಂವಾದೇ ಶ್ರೀಶೈಲೋಪಾಖ್ಯಾನೋ ನಾಮ ವಿಂಶೋಽಧ್ಯಾಯಃ**

---

೧೮. ಆದ್ದರಿಂದಲೇ ಈ ಪರ್ವತವು ನೋಡುವುದಕ್ಕೆ ಆನಂದವನ್ನುಂಟು ಮಾಡುತ್ತದೆ. ಮುಕ್ತಿಯನ್ನಪೇಕ್ಷಿಸುವವರು ಈ ಪರ್ವತವನ್ನು ನೋಡಬೇಕು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಯುಧಿಷ್ಠಿರ ಸಂವಾದದ ಶ್ರೀಶೈಲ ಉಪಾಖ್ಯಾನವೆಂಬ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕವಿಂಶೋಽಧ್ಯಾಯಃ ॥



॥ ಮಹಾದೇವ ಉವಾಚ ॥

**ಹರಿದ್ವಾರಂ ಮಹಾಪುಣ್ಯಂ ಶೃಣು ದೇವರ್ಷಿಸತ್ತಮ ।**
**ಯತ್ರ ಗಂಗಾ ವಹತ್ಯೇವ ತತ್ಪ್ರೋಕ್ತಂ ತೀರ್ಥಮುತ್ತಮಂ ॥ ೧ ॥**

**ಯತ್ರ ದೇವಾ ವಸಂತೀಹ ಋಷಯೊ ಮುನಯಸ್ತಥಾ ।**
**ಯತ್ರ ದೇವಸ್ಸ್ವಯಂ ಸಾಕ್ಷಾತ್ ಕೇಶವೋ ನಿತ್ಯಮಾಶ್ರಿತಃ ॥ ೨ ॥**

**ಪುರಾ ಪೂರ್ವಂ ತು ಭೋ ವತ್ಸ ತೀರ್ಥಂ ಜಾತಂ ಮಹತ್ತದಾ ।**
**ಯಸ್ಯ ದರ್ಶನ ಮಾತ್ರೇಣ ದೂರತೋ ಯಾಂತ್ಯಥಾಪದಃ ॥ ೩ ॥**

---

## ಇಪ್ಪತ್ತೊಂದನೆಯ ಅಧ್ಯಾಯವು

೧. ಮಹಾದೇವನು ಹೇಳಿದನು–ಎಲೈ ನಾರದನೇ! ಹರಿದ್ವಾರವೆಂಬುದು ಮಹಾಪುಣ್ಯಸ್ಥಳವು. ಅಲ್ಲಿ ಗಂಗೆಯು ಹರಿಯುತ್ತದೆ. ಅದು ತೀರ್ಥವೆಂದು ಹೇಳಲ್ಪಟ್ಟಿದೆ.

೨. ಅಲ್ಲಿ ದೇವತೆಗಳೂ, ಋಷಿಗಳೂ, ಮುನಿಗಗಳೂ, ವಾಸವಾಗಿರುತ್ತಾರೆ. ಅಲ್ಲಿ ಕೇಶವನು ಪ್ರತ್ಯಕ್ಷನಾಗಿ ಯಾವಾಗಲೂ ಇದ್ದಾನೆ.

೩. ಇದು ಬಹಳ ಹಿಂದೆಯೇ ಉತ್ತಮ ತೀರ್ಥವಾಗಿ ಪರಿಣಮಿಸಿತು. ಇದನ್ನು ನೋಡಿದುದರಿಂದಲೇ ಆಪತ್ತುಗಳೆಲ್ಲವೂ ದೂರದಲ್ಲಿಯೇ ನಾಶವಾಗುತ್ತದೆ.

ಯತ್ರ ಗಂಗಾ ಮಹಾರಮ್ಯಾ ಜಾತಾ ಪುಣ್ಯವಿಶೇಷತಃ ।
ವಿಷ್ಣುಪಾದೋದಕೀ ಜಾತಾ ಚರಣ ಸ್ಪರ್ಶನಾತ್ತತಃ ॥ ೪ ॥

ಭಗೀರಥೇನ ಯೋ ವಿದ್ವನ್ನಾನೀತಾ ತತ್ರ ಮಾರ್ಗತಃ ।
ಉದ್ಧಾರಂ ಪೂರ್ವಜಾನಾಂ ತು ಕೃತಸ್ತೇನ ಮಹಾತ್ಮನಾ ॥ ೫ ॥

॥ ನಾರದ ಉವಾಚ ॥

ಕೋಽಯಂ ದೇವ ಸಮಾಖ್ಯಾತೋ ಭಗೀರಥೋ ಮಹಾತಪಾಃ ।
ಯೇನ ತೀರ್ಥಂ ಸಮಾನೀತಂ ಲೋಕಾನಾಂ ಹಿತಕಾರಣಾತ್ ॥ ೬ ॥

ಗಂಗಾತೀರ್ಥಂ ಮಹಾಪುಣ್ಯಂ ಸರ್ವಪಾಪಪ್ರಣಾಶನಂ ।
ಲೋಕಾಸ್ಸರ್ವೇ ವದಂತ್ಯೇವಮೇತತ್ತೀರ್ಥೋತ್ತಮೋತ್ತಮಂ ॥ ೭ ॥

---

೪. ಆ ಕ್ಷೇತ್ರದಲ್ಲಿ ಸಂಚರಿಸಿದ ಪುಣ್ಯದಿಂದ ಗಂಗೆಯು ಮಹಾರಮ್ಯವಾಗಿ ಆದಳು. ಅನಂತರ ವಿಷ್ಣುವಿನ ಪಾದದ ಸ್ಪರ್ಶನದಿಂದ ವಿಷ್ಣುಪಾದೋದಕಿ ಎಂದು ಹೆಸರನ್ನು ಹೊಂದಿದಳು.

೫. ಗಂಗೆಯನ್ನು ಭಗೀರಥನು ಆ ದಾರಿಯಿಂದ ತಂದು ತನ್ನ ಪೂರ್ವಿಕರನ್ನು ಪಾಪದಿಂದ ಮುಕ್ತರನ್ನಾಗಿ ಮಾಡಿದನು.

೬. ನಾರದನು ಹೇಳಿದನು– ಎಲೈ ಸ್ವಾಮಿಯೇ ! ಆ ಭಗೀರಥನೆಂಬ ಹೆಸರುಳ್ಳವನಾರು ? ತೀರ್ಥರೂಪವಾದ ಈ ಗಂಗೆಯನ್ನು ಲೋಕದ ಹಿತಕ್ಕೋಸ್ಕರ ತಂದಿರುವನಲ್ಲ !

೭. ಗಂಗೆಯೆಂಬ ತೀರ್ಥವು ಮಹಾ ಪುಣ್ಯಕರವಾದುದು. ಸರ್ವ ಪಾಪಗಳನ್ನೂ ನಾಶಮಾಡುತ್ತದೆ ಲೋಕದಲ್ಲಿರುವವರೆಲ್ಲರೂ ಈ ತೀರ್ಥವನ್ನು ಉತ್ತಮೋತ್ತಮವೆಂದು ಹೇಳುವರು.

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥
ಕಥಂ ತೇನ ಸಮಾನೀತಾ ಕಿಂ ಕಾರ್ಯಂ ವದ ಸುವ್ರತ ॥ ೮ ॥

॥ ಮಹಾದೇವ ಉವಾಚ ॥

ಯೇನ ಗಂಗಾ ಯಥಾನೀತಾ ಗಂಗಾದ್ವಾರೇತಿಶೋಭನೇ ।
ತತ್ಸರ್ವಂ ಸಂಪ್ರವಕ್ಷ್ಯಾಮಿ ಕ್ರಮಾನುಕ್ರಮಯೋಗತಃ ॥ ೯ ॥

ಪೂರ್ವಮಾಸೀದ್ಧರಿಶ್ಚಂದ್ರಸ್ತ್ರೈಲೋಕ್ಯೇಸತ್ಯಪಾಲಕಃ ।
ರೋಹಿತಸ್ತಸ್ಯ ಪುತ್ರೋಭೂದೇಕೋ ವಿಷ್ಣುಪರಾಯಣಃ ॥ ೧೦ ॥

ತಸ್ಯಾಪಿ ಚ ವೃತಃ ಪುತ್ರೋ ಧರ್ಮಿಷ್ಠಸ್ಸತ್ಪಥೇ ಸ್ಥಿತಃ ।
ತಸ್ಯ ಪುತ್ರಸ್ಸುಬಾಹುಶ್ಚ ಜಾತೇಸ್ಮಿನ್ವೈ ಕುಲೇ ತದಾ ॥ ೧೧ ॥

---

೮. ಎಲೈ ಶಿವನೇ ! ಗಂಗೆ, ಗಂಗೆ ಎಂಬುದಾಗಿ ನೂರು ಯೋಜನಗಳ ದೂರದಲ್ಲಿದ್ದು ಬಾಯಿಯಲ್ಲಿ ಹೇಳಿದ ಮಾತ್ರದಿಂದಲೇ ಅವನ ಪಾಪಗಳೆಲ್ಲವೂ ಹೋಗಿ ವಿಷ್ಣುವಿನ ಲೋಕವನ್ನು ಹೊಂದುವನು. ಅಂತಹ ಗಂಗೆಯನ್ನು ಅವನು ಹೇಗೆ ತಂದನು ? ತಂದೇನು ಮಾಡಿದನು ?

೯. ಮಹಾದೇವನು ಹೇಳಿದನು– ಯಾವ ಜಾಗದಿಂದ ಗಂಗೆಯನ್ನು ತಂದನೋ ಅದು ಗಂಗಾದ್ವಾರವೆನ್ನಿಸಿಕೊಂಡು ಪ್ರಸಿದ್ಧವಾಗಿದೆ. ಅದೆಲ್ಲವನ್ನೂ ಕ್ರಮವಾಗಿ ಹೇಳುತ್ತೇನೆ. ಕೇಳು.

೧೦. ಪೂರ್ವದಲ್ಲಿ ಮೂರು ಲೋಕದಲ್ಲಿಯೂ ಸತ್ಯವಂತನಾದ ಹರಿಶ್ಚಂದ್ರನೆಂಬ ರಾಜನಿದ್ದನು. ಅವನಿಗೆ ರೋಹಿತನೆಂಬ ಮಗನಿದ್ದನು. ಅವನು ಮಹಾ ವಿಷ್ಣುಭಕ್ತನು.

೧೧–೧೨. ಆತನಿಗೆ ವೃತನೆಂಬ ಮಗನಾದನು. ಅವನು ಧರ್ಮಿಷ್ಠನು. ಒಳ್ಳೆಯ ನಡತೆಯುಳ್ಳವನು. ಆ ವೃತನಿಗೆ ಸುಬಾಹುವೆಂಬ ಮಗನಿದ್ದನು.

ತಸ್ಯ ಪುತ್ರೋಗರೋ ನಾಮ ನಾತ್ಯಂತಂ ಧಾರ್ಮಿಕೋಽಭವತ್ ।
ಕದಾಚಿತ್ಕಾಲಯೋಗೇನ ದುಃಖೀ ಜಾತೋತ್ರ ಕಾರಣಾತ್ ॥ ೧೨ ॥

ರಾಜಭಿಸ್ತತ್ರ ದೇಶೋಯಂ ತರ್ಜಿತೋ ಧರ್ಮಕಾರಣಾತ್ ।
ಸಕುಟುಂಬಂ ಗೃಹೀತ್ವಾ ತು ಗತೋಸೌ ಭಾರ್ಗವಾಶ್ರಮಂ ॥ ೧೩ ॥

ರಕ್ಷಿತೋ ಭಾರ್ಗವೇಣಾಥ ಕೃಪಯಾ ತತ್ರ ವೈ ತದಾ ।
ತತ್ರ ಪುತ್ರೋಹ್ಯಭೂತ್ತಸ್ಯ ಸಗರೋ ನಾಮ ವೈ ದ್ವಿಜ ॥ ೧೪ ॥

ವವೃಧೇ ಚಾಶ್ರಮೇ ಪುಣ್ಯೇ ಭಾರ್ಗವೇಣಾಭಿರಕ್ಷಿತಃ ।
ಉಪವೀತಾದಿಕಂ ಸರ್ವಂ ಕ್ಷತ್ರಿಯಸ್ಯ ತದಾ ಕೃತಂ ॥ ೧೫ ॥

ಶಸ್ತ್ರಾಣಾಂ ಚ ತಥಾಭ್ಯಾಸಂ ವೇದಾನಾಂ ತು ತಥೈವ ಚ ।
ಆಗ್ನೇಯಾಸ್ತ್ರಂ ತತೋ ಲಬ್ಧ್ವಾ ಭಾರ್ಗವಾತ್ಸಗರೋ ನೃಪಃ ॥ ೧೬ ॥

---

ಆ ಸುಬಾಹುವಿಗೆ ಗರನೆಂಬ ಮಗನಾದನು. ಅವನು ಅತಿಯಾಗಿ ಧರ್ಮಿಷ್ಠನಾಗಿ ಇರಲಿಲ್ಲ. ಹೀಗಿರುತ್ತಿರಲು ಕಾಲಾನುಗುಣದಿಂದಲೋ, ಈ ಪಾಪದಿಂದಲೋ ದುಃಖವು ಪ್ರಾಪ್ತವಾಯಿತು.

೧೩. ರಾಜರೆಲ್ಲರೂ ಈತನ ಅಧರ್ಮವನ್ನು ನೋಡಿ ಅವನನ್ನು ಸೋಲಿಸಿ ಓಡಿಸಿದರು. ಆತನು ಸಂಸಾರವನ್ನು ಕರೆದುಕೊಂಡು ಭಾರ್ಗವನ ಆಶ್ರಮಕ್ಕೆ ಬಂದು ಸೇರಿದನು.

೧೪. ಈ ಭಾರ್ಗವನು ಕೃಪೆಯಿಂದ ಅವನನ್ನು ಕಾಪಾಡಿದನು. ಗರನು ಅಲ್ಲಿಯೇ ಇದ್ದಿರಲು ಅವನಿಗೆ ಸಗರನೆಂಬ ಮಗನು ಹುಟ್ಟಿದನು.

೧೫. ಆ ಪುಣ್ಯಾಶ್ರಮದಲ್ಲಿಯೇ ಆ ಸಗರನು ಬೆಳೆದನು. ಭಾರ್ಗವನು ಆತನ ಪುರೋಭಿವೃದ್ಧಿಯನ್ನು ನೋಡಿಕೊಳ್ಳುತ್ತಿದ್ದನು. ಮತ್ತು ಕ್ಷತ್ರಿಯನಿಗನು ಗುಣವಾದ ಉಪನಯನಾದಿಗಳನ್ನು ಮಾಡಿದನು.

೧೬–೧೭. ಆ ಋಷಿಯು ಶಸ್ತ್ರಾಭ್ಯಾಸವನ್ನೂ, ವೇದಾಭ್ಯಾಸವನ್ನೂ ಮಾಡಿಸಿದನು. ಉತ್ತಮೋತ್ತಮವಾದ ಆಗ್ನೇಯಾಸ್ತ್ರವನ್ನು ಕಲಿಸಿಕೊಟ್ಟನು.

ಜಘಾನ ಪೃಥಿವೀಂ ಗತ್ವಾ ಕಾಲ ಜಂಘಾನ್ ಸಹೈಹಯಾನ್ ।
ಸ ಶಕಾನ್ಪಾರದಾಂ ಶ್ಚೈವ ಜಘಾನ ಸ ಮಹಾತಪಾಃ ॥ ೧೭ ॥

॥ ನಾರದ ಉವಾಚ ॥

ಮಾಹಾತ್ಮ್ಯಂ ಸಾಗರಸ್ಯಾಥ ವದ ಶಂಕರ ವಿಸ್ತರಾತ್ ।
ಸೂರ್ಯವಂಶೇಮಹಾರಾಜೋ ವಿಖ್ಯಾತಸ್ಸ ಮಹಾಬಲೀ ॥ ೧೮ ॥

॥ ಮಹಾದೇವ ಉವಾಚ ॥

ಗರಸ್ಯ ವ್ಯಸನೇ ಜಾತೇ ಹೃತಂ ರಾಜ್ಯಮಭೂತ್ಕಿಲ ।
ಹೈಹಯೈಸ್ತಾಲಜಂಘಾದ್ಯೈಃ ಶಕೈಸ್ಸಾರ್ಧಂ ಚ ನಾರದ ॥ ೧೯ ॥

ಯವನಾಃ ಪಾರದಾಶ್ಚೈವ ಕಾಂಭೋಜಾಃ ಪಲ್ಲವಾಸ್ತಥಾ ।
ಏತೇ ಪಂಚಗಣಾ ಬ್ರಹ್ಮ ಹೈಹಯಾರ್ಥೇ ಪರಾಕ್ರಮ ॥ ೨೦ ॥

ಹೃತರಾಜ್ಯಸ್ತತೋ ರಾಜಾ ಸಂಗರೇ ವೈ ವನಂ ಯಯೌ ।
ಪತ್ನ್ಯಾಚಾನುಗತೋ ದುಃಖೀ ಸ ವೈ ಪ್ರಾಣಾನವಾಸೃಜತ್ ॥ ೨೧ ॥

---

ಹೀಗಿರುತ್ತಿರಲು ಭೂಮಿಯನ್ನೆಲ್ಲಾ ಗೆಲ್ಲಬೇಕೆಂದು ಹೊರಟ ಸಗರನು ಕಾಲ ಜಂಘರು, ಹೈಂಹಯರು, ಶಕರು, ಪಾರದರು ಇವರೆಲ್ಲರನ್ನೂ ಸೋಲಿಸಿ ವಶ ಮಾಡಿಕೊಂಡರು.

೧೮. ನಾರದನು ಹೇಳಿದನು– ಎಲೈ ಶಂಕರನೇ ! ಸಾಗರನ ಮಹಿಮೆ ಯನ್ನು ವಿಸ್ತಾರವಾಗಿ ತಿಳಿಸು. ಅವನು ಸೂರ್ಯವಂಶದಲ್ಲಿ ಹುಟ್ಟಿ ಬಲಿಷ್ಠನಾಗಿ ಪ್ರಖ್ಯಾತನಾದವನು.

೧೯-೨೦. ಮಹಾದೇವನು ಹೇಳಿದನು– ಗರನಿಗೆ ತೊಂದರೆಯು ಬರಲು ಹೈಹಯ ರಾಜ್ಯದ ಅರಸು ಆ ಗರನ ಮೇಲೆ ಬಿದ್ದನು. ಕಾಲಜಂಘರು, ಶಕರು, ಪಾರದರು, ಕಾಂಭೋಜರು, ಪಲ್ಲವರು ಈ ಐವರೂ ಆ ಹೈಹಯನಿಗೆ ಸಹಾಯಕ ರಾದರು. ಯುದ್ಧಮಾಡಿ ಆ ಗರನನ್ನು ಸೋಲಿಸಿದರು.

೨೧. ಶತ್ರುಗಳು ಯುದ್ಧಮಾಡಿ ಗರನನ್ನು ಸೋಲಿಸಲು ಆ ಗರನು ಹೆಂಡತಿಯೊಡನೆ ಓಡಿಹೋದನು. ದುಃಖದಿಂದ ಕಾಡಿನಲ್ಲಿದ್ದುಕೊಂಡು ಪ್ರಾಣ ತ್ಯಾಗಮಾಡಿದನು.

ತಸ್ಯ ಪತ್ನೀ ತು ಕಲ್ಯಾಣೀ ಸಗರ್ಭಾ ಚ ವ್ರತಾನ್ವಿತಾ ।
ಸ ಪತ್ನ್ಯಾ ಭಾರ್ಗವಸ್ತಸ್ಯ ವೃತಃ ಪೂರ್ವಂ ಸುತೇಪ್ಸಯಾ ॥ ೨೨ ॥

ಸಾ ತು ಭವ್ಯಚಿತಾಂ ಕೃತ್ವಾ ವನೇ ತಂ ಪ್ರರುರೋದ ಹ ।
ಔರ್ವಸ್ತಾಂ ವಾರಯಿತ್ವಾ ಚ ಗರಪತ್ನೀಂ ಚ ನಾರದ ॥ ೨೩ ॥

ನ್ಯವೇದಯತ ತತ್ಪುತ್ರಂ ಧರ್ಮಿಷ್ಠಂ ಸಾತ್ವಿಕಂ ಪ್ರಿಯಂ ।
ನಿವೇದಿತೇ ತತೋ ಬಾಲೇ ಮರಣಾತ್ಸಾ ನ್ಯವರ್ತತ ॥ ೨೪ ॥

ತತೋ ಮಾಸದ್ವಯೇ ಜಾತೇ ವವರ್ಧೌರ್ವಸ್ಯ ಚಾಶ್ರಯಃ ।
ಜಾತಕರ್ಮಾದಿಯೋಗಶ್ಚ ಔರ್ವೇಣ ಚ ತಥಾ ಕೃತಃ ॥ ೨೫ ॥

ಉಪವೀತಾದಿಕಂ ಸರ್ವಂ ಜಾತಂ ತತ್ರ ಮಹಾಮುನೇ ।
ತತ್ರ ವೇದಾದಿಕಂ ಸರ್ವಂ ಪಠಿತಂ ಚೌರ್ವಯೋಗತಃ ॥ ೨೬ ॥

---

೨೨. ಆ ಗರನು ಸಾಯುವಾಗ ಆತನ ಹೆಂಡತಿಯು ಗರ್ಭಿಣಿಯಾಗಿದ್ದಳು. ವ್ರತಗಳನ್ನು ಮಾಡುತ್ತಿದ್ದಳು. ಹಿಂದೆ ಇದೇ ಬಾರ್ಗವನಿಂದ ಗರನು ಮಕ್ಕಳಾಗುವಂತೆ ವ್ರತಗಳನ್ನು ಮಾಡಿಸಿಕೊಂಡಿದ್ದನು.

೨೩–೨೪. ಗಂಡನು ಸಾಯುತ್ತಲು ಆತನ ಹೆಂಡತಿಯು ಚೆನ್ನಾಗಿ ಚಿತೆಯನ್ನು ಒಡ್ಡಿ ದುಃಖಿಸುತ್ತಾ ಸಹಗಮನ ಮಾಡಲು ಸಿದ್ಧಳಾದಳು. ಆಗ ಭಾರ್ಗವನು ಆ ಗರನ ಪತ್ನಿಯನ್ನು ಬೇಡವೆಂದು ತಡೆದನು. ಮತ್ತು ಅವಳಿಗೆ ಧಾರ್ಮಿಕನೂ, ಸರ್ವಗುಣಸಂಪನ್ನನೂ, ಎಲ್ಲರಿಗೂ ವಿಶ್ವಾಸಪಾತ್ರನೂ ಆದ ಮಗನು ಹುಟ್ಟುವನೆಂದು ಹೇಳಿ ಮರಣದಿಂದ ತಪ್ಪಿಸಿದನು.

೨೫. ಅದಾದ ಎರಡು ತಿಂಗಳಿಗೆ ಈಕೆಯು ಹೆತ್ತಳು. ಆ ಮಗುವು ಆ ಭಾರ್ಗವನ ಆಶ್ರಮದಲ್ಲಿ ಬೆಳೆಯಿತು. ಜಾತಕರ್ಮ ನಾಮಕರಣ ಮುಂತಾದುವುಗಳನ್ನೂ ಆ ಭಾರ್ಗವನೇ ಮಾಡಿದನು.

೨೬. ಉಪನಯನವನ್ನೂ ಆ ಭಾರ್ಗವನೇ ಮಾಡಿದನು. ಮತ್ತು ವೇದಾದಿಗಳೆಲ್ಲವನ್ನೂ ಆತನೇ ಕಲಿಸಿದನು.

ಅಧ್ಯಾಪ್ಯ ವೇದಶಾಸ್ತ್ರಾಣಿ ತತೋಽಸ್ತ್ರಂ ಪ್ರತ್ಯಪಾದಯತ್ ।
ಆಗ್ನೇಯಂ ತಂ ಮಹಾಭಾಗ ಮಮರ್ತ್ಯೈರಪಿ ದುಸ್ಸಹಂ ॥ ೨೭ ॥

ಸ ತೇನಾಸ್ತ್ರಬಲೇನಾಜೌ ಬಲೇ ನ ಚ ಸಮನ್ವಿತಃ ।
ಹೈಹಯಾನ್ವ್ಯೈ ಜಘಾನಾಶು ಸಂಕ್ರುದ್ಧಃ ಸ್ವಬಲೇನ ಚ ॥ ೨೮ ॥

ಆಜಹಾರ ಚ ಲೋಕೇಷು ಸ ಚ ಕೀರ್ತಿಮವಾಪ ಸಃ ।
ತತಶ್ಶಕಾಸ್ಸಯವನಾಃ ಕಾಂಭೋಜಾಃ ಪಲ್ಲವಾಸ್ತಥಾ ॥ ೨೯ ॥

ಹನ್ಯಮಾನಾಸ್ತದಾ ತೇ ತು ವಸಿಷ್ಠಂ ಶರಣಂ ಯಯುಃ ।
ವಸಿಷ್ಠೋಽಪಿ ಚ ತತ್ಕೃತ್ವಾ ಸಮಯಂ ಸಮಹಾದ್ಯುತಿಃ ॥ ೩೦ ॥

ಸಗರಂ ವಾರಯಾಮಾಸ ತೇಷಾಂ ದತ್ವಾಭಯಂ ನೃಪ ।
ಸಗರಸ್ಸ್ವಾಂ ಪ್ರತಿಜ್ಞಾಂ ತು ಗುರೋರ್ವಾಕ್ಯಂ ನಿಶಮ್ಯ ಚ ॥ ೩೧ ॥

---

೨೭. ಭಾರ್ಗವನು ಈ ರೀತಿ ವೇದ ಶಾಸ್ತ್ರಗಳೆಲ್ಲವನ್ನೂ ಕಲಿಸಿ ಅನಂತರ ಅಸ್ತ್ರಗಳನ್ನು ಉಪದೇಶಿಸಿದನು. ಅವುಗಳಲ್ಲಿ ಆಗ್ನೇಯಾಸ್ತ್ರವು ಅವನಿಗೆ ಬಹುವಾಗಿ ಪ್ರಸನ್ನವಾಯಿತು. ಅವನ ಆಗ್ನೇಯಾಸ್ತ್ರವನ್ನು ದೇವತೆಗಳೂ ತಡೆಯದಂತಾಯಿತು.

೨೮. ಅನಂತರ ಈತನು ತನ್ನ ಬಲದಿಂದಲೂ, ಅಸ್ತ್ರಬಲದಿಂದಲೂ ಯುದ್ಧಕ್ಕೆ ಹೊರಟನು. ಯುದ್ಧ ಮಾಡುತ್ತ ಕೋಪಗೊಂಡು ಹೈಹಯರನ್ನು ತಾನೇ ಕೊಂದನು.

೨೯–೩೨. ಅವರೆಲ್ಲರನ್ನೂ ಗೆದ್ದು ಆತನು ಕೀರ್ತಿಯನ್ನು ಹೊಂದಿದನು. ಅನಂತರ ಶಕರು, ಯವನರು, ಕಾಂಭೋಜರು, ಪಲ್ಲವರು, ಏಟಿನಮೇಲೆ ಏಟು ತಿನ್ನುತ್ತಾ ಆತನ ತೊಂದರೆಯನ್ನು ತಡೆಯದೆ ವಸಿಷ್ಠನನ್ನು ಶರಣು ಹೊಂದಿದರು. ಆ ವಸಿಷ್ಠನು ಇಬ್ಬರಿಗೂ ಒಂದು ರೀತಿಯಾದ ನಿಬಂಧನೆಯಿಂದ ಅಭಯವನ್ನು ಕೊಟ್ಟು ಸಗರನನ್ನು ಸಮಾಧಾನ ಪಡಿಸಿದನು. ಆಗ ಗುರುವಾದ ವಸಿಷ್ಠನ ಮಾತನ್ನು ಕೇಳಿ ಸಗರನು ಅವರನ್ನು ಧರ್ಮದಿಂದ ಕೊಂದನು. ಅವರ ತಲೆಯನ್ನು

ಧರ್ಮೈರ್ಜಘಾನ ತಾಂಶ್ಚೈಷಾಂ ವಿಕೃತತ್ವಂ ಚಕಾರ ಹ ।
ಅರ್ಧಂ ಶಕಾನಾಂ ಶಿರಸೋ ಮುಂಡಂ ಕೃತ್ವಾ ವ್ಯಸರ್ಜಯತ್ ॥ ೩೨ ॥

ಯವನಾನಾಂ ಶಿರಸ್ಸರ್ವಂ ಕಾಂಭೋಜಾನಾಂ ತಥೈವ ಚ ।
ಪಾರದಾ ಮುಂಡಕೇಶಾಶ್ಚ ಪಲ್ಲವಾಃ ಶ್ಮಶ್ರುರಕ್ಷಕಾಃ ॥ ೩೩ ॥

ಏವಂ ವಿಜಿತ್ಯ ಸರ್ವಾನ್ಸ್ವೈ ಕೃತವಾನ್ ಧರ್ಮ ಸಂಗ್ರಹಂ ।
ಸರ್ವಧರ್ಮಜಯೀ ರಾಜಾ ವಿಜಿತ್ಯೇಮಾಂ ವಸುಂಧರಾಂ ॥ ೩೪ ॥

ಅಶ್ವಂ ಸಂಚಾರಯಾಮಾಸ ವಾಜಿಮೇಧಾಯ ಪಾರ್ಥಿವ ।
ತಸ್ಯ ಚಾರಯತಸ್ಸೋಽಶ್ವಃ ಸಮುದ್ರೇ ಪೂರ್ವದಕ್ಷಿಣೇ ॥ ೩೫ ॥

ವೇಲಾ ಸಮೀಪೇಽಪಹೃತೋ ಭೂಮಿಂ ಚೈವ ಪ್ರವೇಶಿತಃ ।
ಸ ತಂ ದೇಶಂ ತದಾ ಪುತ್ರೈಃ ಖಾನಯಾಮಾಸ ಸರ್ವತಃ ॥ ೩೬ ॥

---

ಅರ್ಧಕ್ಕೆ ಬೋಳಿಸಿ ವಿಕಾರವನ್ನು ಮಾಡಿ ಬಿಟ್ಟುಬಿಟ್ಟನು. ಇದೇ ಅವಮಾನವು ಧರ್ಮದಿಂದ ಅವರನ್ನು ಕೊಂದಂತಾಯಿತು.

೩೩. ಯವನರ ತಲೆಯೆಲ್ಲವನ್ನೂ ಬೋಳಿಸಿದನು. ಕಾಂಭೋಜರಿಗೂ ಅವರಂತೆಯೇ ಮಾಡಿದನು. ಪಾರದರೂ ತಲೆಯನ್ನು ಬೋಳಿಸಿಕೊಂಡರು. ಪಲ್ಲವರು ಮಾತ್ರ ಮೀಸೆಗಳನ್ನು ಬಿಡಿಸಿಕೊಂಡರು.

೩೪–೩೬. ಈ ರೀತಿಯಾಗಿ ಸಗರನು ಎಲ್ಲರನ್ನೂ ಜಯಿಸಿ ಧರ್ಮದ ಕೆಲಸಗಳನ್ನು ಮಾಡಿದನು. ಈ ರೀತಿಯಾಗಿ ರಾಜನು ಧರ್ಮದಿಂದ ಪ್ರಪಂಚವೆಲ್ಲವನ್ನೂ ಗೆದ್ದು ಅಶ್ವಮೇಧಕ್ಕೋಸ್ಕರ ಕುದುರೆಯನ್ನು ಬಿಟ್ಟು ಎಲ್ಲಾ ಕಡೆಯಲ್ಲಿಯೂ ಸಂಚರಿಸಿದನು. ಹೀಗೆ ಅವನ ಕುದುರೆಯು ಸಂಚರಿಸುತ್ತಿದ್ದಾಗ ಆಗ್ನೇಯದ ಮೂಲೆಯಲ್ಲಿ ಸಮುದ್ರದ ಹತ್ತಿರ ಆ ಕುದುರೆಯು ಯಾರಿಂದಲೋ ಕದಿಯಲ್ಪಟ್ಟು ಭೂಮಿಯೊಳಕ್ಕೆ ಒಯ್ಯಲ್ಪಟ್ಟಿತು. ಆಗ ಸಗರನು ತನ್ನ ಮಕ್ಕಳಿಂದ ಆ ಜಾಗವನ್ನು ಅಗೆಯಿಸಿದನು.

ನಾಶ್ವಂ ಪ್ರಾಪುಸ್ತದಾ ತೇ ವೈ ಖನ್ಯಮಾನೇ ಮಹಾರ್ಣವೇ ।
ತತ್ರೈಕಮಾದಿಪುರುಷಂ ದದೃಶುಸ್ತೇ ತ್ವರಾನ್ವಿತಾಃ　　॥ ೩೭ ॥

ಚೋರೋಽಯಮವದಂಶ್ಚೇತಿ ಕಪಿಲಂ ಜಗತಾಂ ಪ್ರಭುಂ ।
ತಸ್ಯ ಚಕ್ಷುಸ್ಸಮುತ್ಥೇನ ವಹ್ನಿನಾ ಪ್ರತಿಬುಧ್ಯತಃ　　॥ ೩೮ ॥

ದಗ್ಧಾಃ ಷಷ್ಟಿಸಹಸ್ರಾಣಿ ಚತ್ವಾರಸ್ತೇಽವಶೇಷಿತಾಃ ।
ಹೃಷೀಕೇತುಸ್ಸುಕೇತುಶ್ಚ ತಥಾ ಧರ್ಮರಥೋಽಪರಃ　　॥ ೩೯ ॥

ಶೂರಃ ಪಂಚಜನಶ್ಚೈವ ತಸ್ಯ ವಂಶಕರಾ ದ್ವಿಜ ।
ಪ್ರಾದಾಚ್ಚ ತಸ್ಮೈ ಭಗವಾನ್ ಹರಿಃ ಪಂಚವರಾನ್ಸ್ವಯಂ　　॥ ೪೦ ॥

ವಂಶಂ ಮೋಕ್ಷಂ ಸುಕೀರ್ತಿಂ ಚ ಸಮುದ್ರಂ ತನಯಂ ವಿಭುಃ ।
ಸಾಗರತ್ವಂ ಚ ಲೇಭೇಥ ಕರ್ಮಣಾ ತೇನ ತಸ್ಯ ವೈ　　॥ ೪೧ ॥

---

೩೭. ಅಲ್ಲಿ ಸಮುದ್ರದ ಬಳಿ ಅಗೆಯುತ್ತಾ ನೋಡಿದರೂ ಕುದುರೆಯು ಸಿಕ್ಕಲೇ ಇಲ್ಲ. ಅಲ್ಲಿ ಮಾತ್ರ ಒಬ್ಬ ಪುರಾಣಪುರುಷನಿದ್ದುದನ್ನು ಕಂಡರು.

೩೮–೪೦. ಅವನು ಜಗತ್ತಿಗೆ ಒಡೆಯನಾದ ಕಪಿಲ ಋಷಿಯಾಗಿದ್ದನು. ಅವನನ್ನು ಕಂಡು ಈತನೇ ಕಳ್ಳನೆಂದು ಹೇಳುತ್ತಾ ಮೇಲೆ ಬೀಳಲು ಅವನು ಕಣ್ಣು ಬಿಟ್ಟನು. ಅವನ ಕಣ್ಣಿನಿಂದ ಹೊರಟ ಅಗ್ನಿಯಿಂದ ಅವರೆಲ್ಲರೂ ಸುಟ್ಟು ಹೋದರು. ಆದರೆ ಅವರಲ್ಲಿ ನಾಲ್ಕು ಜನರು ಮಾತ್ರ ಉಳಿದುಕೊಂಡರು. ಹೃಷಿಕೇತು, ಸುಕೇತು, ಧರ್ಮರಥ, ಶೂರನಾದ ಪಂಚಜನ ಎಂಬುವರು ನಾಲ್ವರು ಅವನ ವಂಶವನ್ನುದ್ಧರಿಸಲು ಉಳಿದರು. ಈ ಯಾಗದಲ್ಲಿ ಹರಿಯು ಆ ಸಗರನಿಗೆ ಪ್ರಸನ್ನನಾಗಿ ಐದು ವರಗಳನ್ನು ಕೊಟ್ಟನು.

೪೧. ವಂಶ ಉಳಿಯುವಿಕೆ, ಮೋಕ್ಷವನ್ನು ಹೊಂದುವುದು, ಕೀರ್ತಿಯು ಬರುವುದು, ಸಮುದ್ರನು ಮಗನಾಗುವುದು ಈ ನಾಲ್ಕು ವರಗಳನ್ನು ಕೊಟ್ಟು ನೀನು ಮಾಡಿದ ಅಸಾಧ್ಯವಾದ ಕೆಲಸದಿಂದ ನಿನಗೆ ಸಾಗರನೆಂದು ಪ್ರಸಿದ್ಧವಾದ ಹೆಸರಿರಲೆಂದು ಮತ್ತೊಂದು ವರವನ್ನೂ ಕೊಟ್ಟನು.

**ತನಾಶ್ವಮೇಧಿಕಂ ಸೋಽಶ್ವಂ ಸಮುದ್ರಾದುಪಲಬ್ಧವಾನ್ ।**
**ಆಜಹಾರಾಶ್ವಮೇಧಾನಾಂ ಶತಂ ಸ ಚ ಮಹಾಯಶಾಃ ॥ ೪೨ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ನಾರದ ಮಹಾದೇವ ಸಂವಾದೇ ಸಗರೋಪಾಖ್ಯಾನಂ ನಾಮ ಏಕವಿಂಶೋಽಧ್ಯಾಯಃ**

---

೪೨. ಅನಂತರ ಸಮುದ್ರದಿಂದ ಆ ಕುದುರೆಯನ್ನು ಹೊಂದಿ ಅಶ್ವಮೇಧ ಯಾಗವನ್ನು ಮಾಡಿದನು. ಅನಂತರ ನೂರು ಅಶ್ವಮೇಧಯಾಗಗಳನ್ನು ಮಾಡಿ ಕೀರ್ತಿಯನ್ನು ಪಡೆದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ನಾರದ ಮಹಾದೇವ ಸಂವಾದದ ಸಗರೋಪಾಖ್ಯಾನ ಎಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಾವಿಂಶೋಽಧ್ಯಾಯಃ ॥



॥ ನಾರದ ಉವಾಚ ॥

ಸಗರಸ್ಯಾತ್ಮಜಾ ವೀರಾ ಕಥಂ ಜಾತಾ ಮಹಾಬಲಾಃ ।
ವಿಕ್ರಾಂತಾಷ್ಷಷ್ಟಿಸಾಹಸ್ರಾ ವಿಜ್ಞಾನೇಶ್ವರ ತದ್ವದ ॥ ೧ ॥

॥ ಶಿವ ಉವಾಚ ॥

ದ್ವೇ ಪತ್ನ್ಯೌ ಸಗರಸ್ಯಾಸ್ತಾಂ ತಪಸಾ ದಗ್ಧಕಿಲ್ಬಿಷೇ ।
ಔರ್ವಸ್ತಾಭ್ಯಾಂ ವರಂ ಪ್ರಾದಾತ್ತೋಷಿತೋ ಮುನಿಸತ್ತಮಃ ॥ ೨ ॥

ಷಷ್ಟಿಂ ಪುತ್ರಸಹಸ್ರಾಣಿ ಏಕಾ ವವ್ರೇ ತರಸ್ವಿನೀ ।
ಏಕಂ ವಂಶಧರಂ ತ್ವೇಕಾ ಯಥೇಷ್ಟವರಶಾಲಿನೀ ॥ ೩ ॥

---

## ಇಪ್ಪತ್ತೆರಡನೆಯ ಅಧ್ಯಾಯವು

೧. ನಾರದನು ಹೇಳಿದನು- ಸಗರನಿಗೆ ಆ ಮಹಾವೀರರಾದ ಅರವತ್ತು ಸಾವಿರ ಜನ ಮಕ್ಕಳು ಹೇಗೆ ಆದರೆಂಬುದನ್ನು ದಯೆಯಿಟ್ಟು ಹೇಳಬೇಕು.

೨. ಶಿವನು ಹೇಳಿದನು- ಸಗರನಿಗೆ ಇಬ್ಬರು ಹೆಂಡರಿದ್ದರು. ಅವರು ತಪಸ್ಸನ್ನು ಮಾಡಿ ಪಾಪವನ್ನು ನಾಶಮಾಡಿಕೊಂಡಿದ್ದರು. ಒಂದು ಸಾರಿ ಔರ್ವ ಮಹರ್ಷಿಯು ಅವರ ಮನೆಗೆ ಬರಲು ಅವನನ್ನು ಇಬ್ಬರೂ ಸೇವಿಸಿದರು. ಅದರಿಂದ ಸಂತೋಷಗೊಂಡ ಈ ಋಷಿಯು ಅವರಿಗೆ ವರವನ್ನು ಕೊಟ್ಟನು.

೩. ಇಬ್ಬರಲ್ಲಿ ಆತುರವುಳ್ಳವಳೊಬ್ಬಳು ಅರವತ್ತು ಸಾವಿರ ಜನ ಮಕ್ಕಳನ್ನೂ ಯೋಚನಾಪರಳಾದ ಮತ್ತೊಬ್ಬಳು ವಂಶಪಾಲಕನಾದ ಒಬ್ಬ ಮಗನನ್ನೂ ಕೇಳಿದರು.

ತತ್ರೈಕಾ ಸುಷುವೇ ತಾಭ್ಯಾಂ ಪುತ್ರಾನ್ ಶೂರಾನ್ ಬಹೂನಥ ।
ತೇ ತು ಸರ್ವೇಽಪಿ ಧಾತ್ರೀಭಿರ್ವರ್ಧಿತಾಸ್ತು ಯಥಾಕ್ರಮಂ ॥ ೪ ॥

ಘೃತಪೂರ್ಣೇಷು ಕುಂಭೇಷು ಕುಮಾರಾಃ ಪ್ರತಿವರ್ಧಿತಾಃ ।
ಕಪಿಲಾನಾಂ ತು ದುಗ್ಧಾನಾಂ ತೇಷಾಂ ತತ್ರ ಮಹಾತ್ಮನಾಂ ॥ ೫ ॥

ತೇನೈವ ದುಗ್ಧಯೋಗೇನ ವವೃಧುಸ್ತೇ ಮಹಾತ್ಮನಃ ।
ಏಕಃ ಪಂಚಜನೋ ನಾಮ ಪುತ್ರೋ ರಾಜಾ ಬಭೂವ ಹ ॥ ೬ ॥

ತತಃ ಪಂಚಜನಸ್ಯಾಸೀದಂಶುಮಾನ್ನಾಮ ವೀರ್ಯವಾನ್ ।
ದಿಲೀಪಸ್ತನಯಸ್ತಸ್ಯ ಪುತ್ರೋ ಯಸ್ಯ ಭಗೀರಥಃ ॥ ೭ ॥

ಯಸ್ತು ಗಂಗಾಂ ಸರಿಚ್ಛ್ರೇಷ್ಠಾಮಾನಯಾಮಾಸ ಸುವ್ರತಃ ।
ಸಮುದ್ರಮಾನಯಿತ್ವೈನಾಂ ದುಹಿತೃತ್ವಮಕಲ್ಪಯತ್ ॥ ೮ ॥

---

೪. ಅವರಲ್ಲಿ ಒಬ್ಬಳು ಒಂದು ಚೀಲದಲ್ಲಿ ಶೂರರಾದ ಬಹು ಜನರನ್ನು ಹೆತ್ತಳು. ಅವರನ್ನು ದಾದಿಯರು ಕ್ರಮವಾಗಿ ಬೆಳೆಸಿದರು.

೫-೬. ಆ ಎಳೆಯ ಕೂಸುಗಳನ್ನು ತುಪ್ಪದ ಕೊಡಗಳಲ್ಲಿಟ್ಟು ಬೆಳೆಯಿಸಿದರು. ಅವರೆಲ್ಲರಿಗೂ ಕಪಿಲೆಯ ಹಸುವಿನ ಹಾಲನ್ನು ಕೊಡುತ್ತಿದ್ದರು. ಆ ಹಾಲಿನಿಂದಲೇ ಅವರೆಲ್ಲರೂ ಬೆಳೆದರು. ಅವರಲ್ಲಿ ಪಂಚಜನನೆಂಬ ಮಗನು ರಾಜನಾದನು.

೭. ಆ ಪಂಚಜನನಿಗೆ ಅಂಶುಮಂತನೆಂಬ ವೀರನು ಮಗನಾದನು. ಅವನಿಗೆ ದಿಲೀಪನೂ, ಆ ದಿಲೀಪನಿಗೆ ಭಗೀರಥನೂ ಮಕ್ಕಳಾದರು.

೮. ಆ ಭಗೀರಥನು ತಪಸ್ಸುಮಾಡಿ ಶ್ರೇಷ್ಠವಾದ ಗಂಗಾನದಿಯನ್ನು ಇಲ್ಲಿಗೆ ತಂದನು. ಮತ್ತು ಅದನ್ನು ಸಮುದ್ರಕ್ಕೆ ಸೇರುವಂತೆ ಮಾಡಿ ಮಗಳನ್ನಾಗಿ ಮಾಡಿಕೊಂಡನು.

|| ನಾರದ ಉವಾಚ ||

ಕಥಂ ಗಂಗಾ ಸಮಾನೀತಾ ಕಿಂ ತಪಸ್ತೇನ ವೈ ಕೃತಂ |
ತತ್ಸರ್ವಂ ಮೇ ಸಮಾಚಕ್ಷ್ವ ಸುವ್ರತೋಽಸಿ ದಯಾನಿಧೇ || ೯ ||

|| ಮಹಾದೇವ ಉವಾಚ ||

ಪೂರ್ವಜಾನಾಂ ಹಿತಾರ್ಥಾಯ ಗತೋಽಸೌ ಹೈಮಕೇ ಗಿರೌ |
ತತ್ರ ಗತ್ವಾ ತಪಸ್ತಪ್ತಂ ವರ್ಷಾಣಾಮಯುತಂ ತದಾ || ೧೦ ||

ಆದಿದೇವಃ ಪ್ರಸನ್ನೋಽಭೂದ್ಯೋಽಸೌ ದೇವೋ ನಿರಂಜನಃ |
ತೇನ ದತ್ತಾ ಇಯಂ ಗಂಗಾ ಆಕಾಶಾತ್ಸಮುಪಸ್ಥಿತಾ || ೧೧ ||

ತತ್ರ ವಿಶ್ವೇಶ್ವರೋ ದೇವೋ ಯತ್ರ ತಿಷ್ಠತಿ ನಿತ್ಯಶಃ |
ಗಂಗಾಂ ದೃಷ್ಟ್ವಾಽಽಗತಾಂ ಶರ್ವೋ ಗೃಹೀತ್ವಾ ಜಾಹ್ನವೀಂ ತದಾ|| ೧೨ ||

---

೯. ನಾರದನು ಹೇಳಿದನು–ಆ ಭಗೀರಥನು ಗಂಗೆಯನ್ನು ಹೇಗೆ ತಂದನು? ಅವನು ಯಾವ ತಪಸ್ಸನ್ನು ಮಾಡಿದನು? ಅದೆಲ್ಲವನ್ನೂ ನನಗೆ ಹೇಳು. ನೀನು ಬಹಳ ಉತ್ತಮ ಪುರುಷನಾಗಿದ್ದೀಯೆ.

೧೦. ಮಹಾದೇವನು ಹೇಳಿದನು– ತನ್ನ ಪೂರ್ವಿಕರಿಗೆ ಒಳ್ಳೆಯದನ್ನು ಮಾಡುವುದಕ್ಕೋಸ್ಕರ ತಾನು ಹಿಮವತ್ಪರ್ವತಕ್ಕೆ ಹೋದನು. ಅಲ್ಲಿಗೆ ಹೋಗಿ ಹತ್ತು ಸಾವಿರ ವರ್ಷಗಳವರೆಗೆ ತಪಸ್ಸನ್ನು ಮಾಡಿದನು.

೧೧. ಭಗೀರಥನು ಪರಮಾತ್ಮನೂ, ನಿರಂಜನನೂ ಆದ ಆದಿದೇವನನ್ನು ಕುರಿತು ತಪಸ್ಸು ಮಾಡಲು ಆ ಸ್ವಾಮಿಯು ಈ ಗಂಗೆಯನ್ನು ಅನುಗ್ರಹಿಸಿದನು. ಆ ಗಂಗೆಯು ಆಕಾಶದಿಂದ ಬಂದಿತು.

೧೨-೧೩. ವಿಶ್ವೇಶ್ವರನಿರುವಲ್ಲಿಯೇ ಆ ಗಂಗೆಯು ಮೇಲಿನಿಂದ ಬಂದಿತು. ಆ ಗಂಗೆಯು ಬರುತ್ತಿರುವುದನ್ನು ನೋಡಿ ಶಿವನು ತನ್ನ ಜಡೆಯಲ್ಲಿ ಅದನ್ನು

ಜಟಾಜೂಟೇ ಚ ಸಂಧಾರ್ಯ ವರ್ಷಾಣಾಮಯುತಂ ಸ್ಥಿತಃ ।
ನ ನಿಸ್ಸೃತಾ ತದಾ ಗಂಗಾ ಈಶಸ್ಯೈವ ಪ್ರಭಾವತಃ ॥ ೧೩ ॥

ವಿಚಾರಿತಂ ತದಾ ತೇನ ಕ್ವ ಗತಾ ಮಮ ಮಾತೃಕಾ ।
ಸಂಧ್ಯಾನೇನ ವಿಚಾರ್ಯೈವಂ ಗೃಹೀತಾ ಚೇಶ್ವರೇಣ ತು ॥ ೧೪ ॥

ತತಃ ಕೈಲಾಸಮಗಮತ್ ಭಗೀರಥಸ್ಸ ವೀರ್ಯವಾನ್ ।
ತತ್ರ ಗತ್ವಾ ಮುನಿಶ್ರೇಷ್ಠ ಹ್ಯಕರೋ ದುಲ್ಬಣಂ ತಪಃ ॥ ೧೫ ॥

ಆರಾಧಿತಸ್ತದಾ ತೇನ ದತ್ತವಾನಹಮಾಪಗಾಂ ।
ಏಕಂ ಕೇಶಂ ಪರಿತ್ಯಜ್ಯ ದತ್ತಾ ತ್ರಿಪಥಗಾ ತದಾ ॥ ೧೬ ॥

ಸ ಗೃಹೀತ್ವಾ ಗತೋ ಗಂಗಾಂ ಪಾತಾಳೇ ಯತ್ರ ಪೂರ್ವಜಾಃ ।
ಅಲಕನಂದಾ ತದಾ ನಾಮ ಗಂಗಾಯಾಃ ಪ್ರಥಮಂ ಸ್ಮೃತಂ ॥ ೧೭ ॥

---

ನಿಲ್ಲಿಸಿಕೊಂಡುಬಿಟ್ಟನು. ಹೀಗೆ ಹತ್ತು ಸಾವಿರ ವರ್ಷಗಳು ಕಳೆದುವು. ಈಶ್ವರನ ಪ್ರಭಾವದಿಂದಲೇ ಆ ಗಂಗೆಯು ಅವನ ತಲೆಯಿಂದ ಹೊರಗೆ ಬರಲಿಲ್ಲ.

೧೪–೧೫. ಅನಂತರ ಭಗೀರಥನು ತನ್ನ ತಾಯಿಯಾದ ಗಂಗೆಯು ಎಲ್ಲಿ ಹೋದಳೆಂದು ಯೋಚಿಸಿ ಕೊನೆಗೆ ಈಶ್ವರನು ಹಿಡಿದಿರುವನೆಂದು ತಿಳಿದನು. ಒಡನೆಯೇ ಭಗೀರಥನು ಕೈಲಾಸ ಪರ್ವತಕ್ಕೆ ಹೋಗಿ ಶಿವನನ್ನು ಕುರಿತು ಉಗ್ರವಾದ ತಪಸ್ಸನ್ನು ಮಾಡಿದನು.

೧೬. ನನ್ನನ್ನು ಅವನು ಪೂಜಿಸಲು ಅವನಿಗೆ ನನ್ನ ಒಂದು ಜಟೆಯಿಂದ ಗಂಗೆಯನ್ನು ಕೊಟ್ಟೆನು. ಅದು ಒಂದು ಕೇಶವನ್ನು ಸಡಲಿಸಲು ಮೂರು ಜಾಗದಲ್ಲಿ ಬಂದಿತು.

೧೭. ಭಗೀರಥನು ಆ ಗಂಗೆಯನ್ನು ಕರೆದುಕೊಂಡು ಪಾತಾಳದಲ್ಲಿ ತನ್ನ ಪೂರ್ವಿಕರು ಸುಟ್ಟುಹೋದ ಸ್ಥಳಕ್ಕೆ ಹೋದನು. ಇವುಗಳಲ್ಲಿ ಅಲಕನಂದಾ ಎಂಬುದು ಗಂಗೆಯ ಮೊದಲನೆಯ ಭಾಗವು.

**ಹರಿದ್ವಾರೇ ತದಾ ಯಾತಾ ವಿಷ್ಣುಪಾದೋದಕೀ ತದಾ ।**
**ತದೇವ ತೀರ್ಥಂ ಪ್ರವರಂ ದೇವಾನಾಮಪಿ ದುರ್ಲಭಂ || ೧೮ ||**

**ತತ್ತೀರ್ಥೇ ಚ ನರಃ ಸ್ನಾತ್ವಾ ಹರಿಂ ದೃಷ್ಟ್ವಾ ವಿಶೇಷತಃ ।**
**ಪ್ರದಕ್ಷಿಣಂ ಯೇ ಕುರ್ವಂತಿ ನ ಚೈತೇ ದುಃಖಭಾಗಿನಃ || ೧೯ ||**

**ಬ್ರಹ್ಮಹತ್ಯಾದಿಪಾಪಾನಾಂ ರಾಶಯಃ ಸಂತ್ಯನೇಕಶಃ ।**
**ವಿಲಯಂ ಯಾಂತಿ ತೇ ಸರ್ವೇ ಹರೇರ್ದರ್ಶನತಸ್ಸದಾ || ೨೦ ||**

**ಏಕದಾ ಕೇಶವಸ್ಥಾನೇ ಹರಿದ್ವಾರೇ ಹ್ಯಹಂ ಗತಃ ।**
**ತಸ್ಮಾತ್ತೀರ್ಥಪ್ರಭಾವಾಚ್ಚ ಜಾತೋಽಹಂ ವಿಷ್ಣುರೂಪವಾನ್ || ೨೧ ||**

**ಯೇ ಗಚ್ಛಂತಿ ನರಶ್ರೇಷ್ಠಾಸ್ತೇ ವೈ ಯಾಂತಿ ಹ್ಯನಾಮಯಂ ।**
**ಚತುರ್ಭುಜಾಸ್ತು ತೇ ಲೋಕಾ ನರಾ ನಾರ್ಯಶ್ಚ ಸರ್ವಶಃ || ೨೨ ||**

---

೧೮. ಆ ಗಂಗೆಯು ಹರಿದ್ವಾರದಲ್ಲಿ ಹೋಗಿ ಹರಿಯಿತು. ಅದೇ ಉತ್ತಮ ತೀರ್ಥವಾಯಿತು. ಈ ತೀರ್ಥವು ದೇವತೆಗಳಿಗೂ ಸಿಕ್ಕುವುದಿಲ್ಲ.

೧೯. ಆ ತೀರ್ಥದಲ್ಲಿ ಮನುಷ್ಯರು ಸ್ನಾನಮಾಡಿ ಅಲ್ಲಿರುವ ಹರಿಯನ್ನು ದರ್ಶನಮಾಡಿ ಪ್ರದಕ್ಷಿಣೆ ಮಾಡಿ ನಮಸ್ಕರಿಸಿದರೆ ಅವರು ದುಃಖವನ್ನು ಹೊಂದುವುದಿಲ್ಲ.

೨೦. ಬ್ರಹ್ಮಹತ್ಯೆಯೇ ಮುಂತಾದ ಪಾಪಗಳು ಬಹುವಾಗಿದ್ದರೂ ಅವೆಲ್ಲವೂ ಆ ಹರಿಯ ದರ್ಶನದಿಂದ ನಾಶವಾಗುತ್ತವೆ.

೨೧. ಒಂದು ಸಾರಿ ಆ ಕೇಶವನಿರುವ ಹರಿದ್ವಾರಕ್ಕೆ ಹೋಗಿ ಆ ತೀರ್ಥದಲ್ಲಿ ಸ್ನಾನಮಾಡಿ ಕೇಶವನ, ದರ್ಶನವನ್ನು ಮಾಡಲು ನಾನೂ ಕೂಡ ವಿಷ್ಣುವಿನ ರೂಪವನ್ನೇ ಹೊಂದಿದೆನು.

೨೨-೨೪. ಅಲ್ಲಿಗೆ ಹೆಂಗಸಾಗಲೀ, ಗಂಡಸಾಗಲೀ ಯಾರು ಹೋಗುವರೋ ಅವರು ನಾಲ್ಕು ಭುಜಗಳನ್ನು ಹೊಂದಿ ವಿಷ್ಣುವಿನ ರೂಪವನ್ನು ಹೊಂದಿ

ವೈಕುಂಠಂ ಯಾಂತಿ ತೇ ಸರ್ವೇ ಹರೇರ್ದರ್ಶನಮಾತ್ರತಃ ।
ಮಮಾಪ್ಯಧಿಕಂ ತೀರ್ಥಂ ತು ಹರಿದ್ವಾರಂ ಸುಶೋಭನಂ ॥ ೨೩ ॥

ತೀರ್ಥಾನಾಂ ಪ್ರವರಂ ತೀರ್ಥಂ ಚತುರ್ವರ್ಗಪ್ರದಾಯಕಂ ।
ಕಲೌ ಧರ್ಮಕರಂ ಪುಂಸಾಂ ಮೋಕ್ಷದಂ ಚಾರ್ಥದಂ ತಥಾ ॥ ೨೪ ॥

ಯತ್ರ ಗಂಗಾ ದುಹಾರಮ್ಯಾ ನಿತ್ಯಂ ವಹತಿ ನಿರ್ಮಲಾ ।
ಏತತ್ಕಥನಕಂ ಪುಣ್ಯಂ ಹರಿದ್ವಾರಾಖ್ಯಮುತ್ತಮಂ ॥ ೨೫ ॥

ಸುಯಶೋ ಯೇ ಚ ಶೃಣ್ವಂತಿ ತೇ ಚ ವೈ ಫಲಮಾಪ್ನುಯುಃ ।
ಅಶ್ವಮೇಧೇ ಕೃತೇ ಯಾಗೇ ಗೋಸಹಸ್ರೇ ತಥೈವ ಚ ॥ ೨೬ ॥

ತತ್ಪುಣ್ಯಂ ಲಭತೇ ವಿದ್ವಾನ್ ಹರೇರ್ದರ್ಶನಮಾತ್ರತಃ ।
ಗೋಹಂತಾ ಬ್ರಹ್ಮಹಾ ಚೈವ ಯೇ ಚಾನ್ಯೇ ಪಿತೃಘಾತಕಾಃ ॥ ೨೭ ॥

---

ವೈಕುಂಠವನ್ನು ಹೊಂದುತ್ತಾರೆ. ಅಲ್ಲಿರುವ ವಿಷ್ಣುವಿನ ದರ್ಶನದಿಂದ ಈ ಫಲವು ಸಿಕ್ಕುತ್ತದೆ. ಹರಿದ್ವಾರದಲ್ಲಿರುವ ತೀರ್ಥವು ನನಗೂ ಉತ್ತಮವಾದುದು. ಆ ತೀರ್ಥವು ತೀರ್ಥಗಳಲ್ಲೆಲ್ಲಾ ಉತ್ತಮವಾದುದು. ಅದು ಧರ್ಮಾರ್ಥಕಾಮ ಮೋಕ್ಷಗಳನ್ನು ಕೊಡುತ್ತದೆ. ಕಲಿಯುಗದಲ್ಲಿ ಜನರಿಗೆ ಧರ್ಮವನ್ನೂ ಮೋಕ್ಷ ವನ್ನೂ ಹಣವನ್ನೂಕೊಡುತ್ತದೆ.

೨೫–೨೮. ಆ ಹರಿದ್ವಾರದಲ್ಲಿ ಗಂಗೆಯು ಸುಂದರವಾಗಿಯೂ, ನಿರ್ಮಲ ವಾಗಿಯೂ ಹರಿಯುತ್ತದೆ. ಈ ಹರಿದ್ವಾರದ ಕಥೆಯು ಬಹು ಪುಣ್ಯಪ್ರದವಾ ದುದು. ಇದನ್ನು ಕೇಳಿದವರು ಯಶಸ್ಸನ್ನು ಹೊಂದುವುದಲ್ಲದೆ ಹರಿದ್ವಾರದ ಫಲವನ್ನು ಹೊಂದುತ್ತಾರೆ. ಅಶ್ವಮೇಧ ಯಾಗ ಮಾಡಿದರೆ, ಸಾವಿರ ಗೋದಾನ ವನ್ನು ಮಾಡಿದರೆ ಬರುವ ಪುಣ್ಯವನ್ನು ಈ ಹರಿದ್ವಾರದ ಹರಿಯ ದರ್ಶನದಿಂದ

ಏವಂ ವಿಧಾನಿ ಪಾಪಾನಿ ಬಹೂನ್ಯಪಿ ಚ ವೈ ದ್ವಿಜ ।
ವಿಲಯಂ ಯಾಂತಿ ಸರ್ವಾಣಿ ಹರೇರ್ದರ್ಶನಮಾತ್ರತಃ ॥ ೨೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ
ಸಂವಾದೇ ಗಂಗೋತ್ಪತ್ತಿ ವರ್ಣನ ಪೂರ್ವಕಂ ಹರಿದ್ವಾರ
ಮಾಹಾತ್ಮ್ಯಂ ನಾಮ ದ್ವಾವಿಂಶೋಽಧ್ಯಾಯಃ

---

ಹೊಂದುತ್ತಾನೆ. ಗೋಹತ್ಯೆ, ಬ್ರಹ್ಮಹತ್ಯೆ, ಪಿತೃಹತ್ಯೆ, ಮುಂತಾದ ಇಂತಹ ಪಾಪಗಳೂ ಕೂಡ ಅನೇಕವಿದ್ದರೂ ಈ ಹರಿದ್ವಾರದ ಹರಿಯ ದರ್ಶನದಿಂದ ನಾಶ ವಾಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶಂಭು ನಾರದ ಸಂವಾದದಲ್ಲಿ
ಗಂಗೋತ್ಪತ್ತಿ ವರ್ಣನ ಪೂರ್ವಕವಾದ ಹರಿದ್ವಾರ ಮಹಾತ್ಮೆ
ಎಂಬ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಯೋವಿಂಶೋಽಧ್ಯಾಯಃ ॥



॥ ಶಿವ ಉವಾಚ ॥

ವಕ್ಷ್ಯಾಮಿ ಗಂಗಾಮಾಹಾತ್ಮ್ಯಂ ಯಥೋಕ್ತಂ ಮುನಿಸತ್ತಮ ।
ಯಸ್ಯ ಶ್ರವಣ ಮಾತ್ರೇಣ ಅಘಂ ನಶ್ಯತಿ ತತ್‌ಕ್ಷಣಾತ್ ॥ ೧ ॥

ಗಂಗಾ ಗಂಗೇತಿ ಯೋ ಬ್ರೂಯಾದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥ ೨ ॥

ಚರಣಾಬ್ಜ ಸಮುದ್ಭೂತಾ ಗಂಗಾ ನಾಮೇತಿ ವಿಶ್ರುತಾ ।
ಪಾಪಾನಾಂ ಸ್ಥೂಲರಾಶೀನಾಂ ನಾಶಿನೀ ಚೇತಿ ನಾರದ ॥ ೩ ॥

---

## ಇಪ್ಪತ್ತಮೂರನೆಯ ಅಧ್ಯಾಯವು

೧. ಶಿವನು ಹೇಳಿದನು– ಎಲೈ ಋಷಿಯೇ ! ಗಂಗೆಯ ಮಹಿಮೆಯನ್ನು ಸತ್ಯವಾಗಿ ಹೇಳುತ್ತೇನೆ. ಅದನ್ನು ಕೇಳಿದೊಡನೆಯೇ ಪಾಪಗಳೆಲ್ಲವೂ ಹೋಗುತ್ತವೆ.

೨. ನೂರು ಯೋಜನಗಳ ದೂರದಲ್ಲಿದ್ದರೂ ಕೂಡ ಗಂಗೆ ಗಂಗೆ ಎಂದು ಹೇಳಿದರೆ ಅವನ ಪಾಪಗಳು ನಾಶವಾಗಿ ಅವನು ವಿಷ್ಣುಲೋಕವನ್ನು ಹೊಂದುತ್ತಾನೆ.

೩. ಗಂಗೆಯು ವಿಷ್ಣುವಿನ ಪಾದಕಮಲದಿಂದ ಹುಟ್ಟಿದಳು. ಗಂಗೆಯು ಮಹತ್ತರವಾದ ಪಾಪಗಳೆಲ್ಲವನ್ನೂ ನಾಶಮಾಡುತ್ತಾಳೆ.

ನರ್ಮದಾ ಸರಯೂ ಚೈವ ತಥಾ ವೇತ್ರವತೀ ನದೀ ।
ತಾಪೀ ಪಯೋಷ್ಣೀ ಚಂದ್ರಾ ಚ ವಿಪಾಶಾ ಕರ್ಮನಾಶಿನೀ ॥ ೪ ॥

ಪುಷ್ಪಾ ಪೂರ್ಣಾ ತಥಾ ದೀಪಾ ವಿದೀಪಾ ಸೂರ್ಯನಂದನಾ ।
ಸ್ನಾನೇನ ತಾಸಾಂ ಯತ್ಪುಣ್ಯಂ ತತ್ಪುಣ್ಯಂ ಸಮವಾಪ್ನುಯುಃ ॥ ೫ ॥

ಸಸಾಗರಾಂ ಚ ಪೃಥಿವೀಂ ಯೇ ದದಂತಿ ಮನೀಷಿಣಃ ।
ಗವಾಂ ದಾನಸಹಸ್ರೇಣ ಅಶ್ವಮೇಧಶತೇನ ಚ ॥ ೬ ॥

ಸಹಸ್ರವೃಷದಾನೇನ ಯತ್ಫಲಂ ಲಭತೇ ಧ್ರುವಂ ।
ತತ್ಫಲಂ ಸಮವಾಪ್ನೋತಿ ಗಂಗಾದರ್ಶನಮಾತ್ರತಃ ॥ ೭ ॥

ಇಯಂ ಗಂಗಾ ಮಹಾಪುಣ್ಯಾ ಬ್ರಹ್ಮಘ್ನಾನಾಂ ವಿಶೇಷತಃ ।
ತೇಷಾಂ ನಿರಯಯುಕ್ತಾನಾಂ ಗಂಗಾ ಪಾಪಪ್ರಹಾರಿಣೀ ॥ ೮ ॥

---

೪–೫. ನರ್ಮದೆ, ಸರಯೂ, ವೇತ್ರವತೀ, ತಪತೀ, ಪಯೋಷ್ಣೀ, ಚಂದ್ರಭಾಗಾ, ವಿಪಾಶೆ, ಕರ್ಮನಾಶಿನೀ, ಪುಷ್ಪಾ, ಪೂರ್ಣ, ದೀಪಾ, ವಿದೀಪಾ ಸೂರ್ಯನಂದನೆ ಈ ನದಿಗಳಲ್ಲಿ ಸ್ನಾನಮಾಡುವುದರಿಂದ ಬರುವ ಪುಣ್ಯವು ಈ ದರಿಾಹ್ವರದ ಗಂಗಾ ನದಿಯಲ್ಲಿ ಸ್ನಾನಮಾಡುವುದರಿಂದ ಬರುತ್ತದೆ.

೬–೭. ಸಮುದ್ರ ಸಹಿತವಾದ ಭೂಮಿಯನ್ನು ದಾನಮಾಡಿದ ಪುಣ್ಯವನ್ನೂ, ಸಾವಿರ ಗೋದಾನಮಾಡಿದ ಪುಣ್ಯವನ್ನೂ, ನೂರು ಅಶ್ವಮೇಧ ಯಾಗಗಳನ್ನು ಮಾಡಿದ ಪುಣ್ಯವನ್ನೂ, ಸಾವಿರ ಹೋರಿಗಳನ್ನು ದಾನಮಾಡಿದರೆ ಬರುವ ಫಲವನ್ನೂ ಈ ಗಂಗೆಯ ದರ್ಶನ ಒಂದರಿಂದಲೇ ಹೊಂದುತ್ತಾನೆ.

೮. ಈ ಗಂಗೆಯು ಬಹು ಪುಣ್ಯಕರವಾದುದು. ಬ್ರಹ್ಮಹತ್ಯೆ ಮುಂತಾದುವುಗಳನ್ನು ಮಾಡಿದವರಿಗೆ ಬಹು ಉತ್ತಮವಾದುದು. ಪಾಪಮಾಡಿ ನರಕಭಾಗಿಗಳಾಗುವವರಿಗಂತೂ ಅವರ ಪಾಪಗಳನ್ನು ನಾಶಮಾಡತಕ್ಕದ್ದು.

ಚಂದ್ರಸೂರ್ಯೋಪರಾಗೇ ಚ ಯತ್ಫಲಂ ವಿದ್ಯತೇನಘ ।
ತತ್ಫಲಂ ಸಮವಾಪ್ನೋತಿ ಗಂಗಾದರ್ಶನಮಾತ್ರತಃ ॥ ೯ ॥

ಯಥಾ ಸೂರ್ಯೋದಯೇ ತಾತ ತಮೋ ಗಚ್ಛತಿ ದೂರತಃ ।
ತಥಾ ಗಂಗಾ ಪ್ರಭಾವೇನ ವಿಲಯಂ ಯಾತಿ ಪಾತಕಂ ॥ ೧೦ ॥

ಮಾತೇಯಂ ಸರ್ವದಾ ಲೋಕೇ ಪವಿತ್ರಾ ಪಾಪನಾಶಿನೀ ।
ಕಲ್ಯಾಣರೂಪಾ ಸತತಂ ವಿಷ್ಣುನಾ ನಿರ್ಮಿತಾ ಪುರಾ ॥ ೧೧ ॥

ದಿವ್ಯರೂಪಾ ತು ಜನನೀ ದೀನಾನಾಂ ಪಾವನೀ ಸ್ಮೃತಾ ।
ದೇವಾನಾಂ ಚ ಯಥಾ ವಿಷ್ಣುಃ ತಥಾ ಗಂಗೋತ್ತಮಾ ನದೀ ॥ ೧೨ ॥

ಯೇ ಕುರ್ವಂತಿ ನರಾಃ ಸ್ನಾನಂ ಮಾಘಮಾಸೇ ನಿರಂತರಂ ।
ನ ತೇಷಾಂ ವಿದ್ಯತೇ ದುಃಖಂ ಕಲ್ಪಾನಾಂ ಚ ಶತತ್ರಯಂ ॥ ೧೩ ॥

---

೯. ಸೂರ್ಯ ಚಂದ್ರರ ಗ್ರಹಣಕಾಲದಲ್ಲಿ ಉಳಿದ ತೀರ್ಥಗಳಲ್ಲಿ ಸ್ನಾನ ಮಾಡಿದರೆ ಯಾವ ಫಲವು ಬರುತ್ತದೆಯೋ ಆ ಫಲವು ಈ ಗಂಗೆಯನ್ನು ನೋಡುವುದರಿಂದಲೇ ಬರುತ್ತದೆ.

೧೦. ಸೂರ್ಯನು ಉದಯವಾದೊಡನೆಯೇ ಕತ್ತಲೆಯು ದೂರವಾಗಿ ಹೊರಟು ಹೋಗುವಂತೆ ಗಂಗೆಯ ಪ್ರಭಾವದಿಂದ ಪಾಪಗಳು ನಾಶವಾಗುತ್ತವೆ.

೧೧. ಇದು ಲೋಕಕ್ಕೆಲ್ಲಾ ತಾಯಿಯು. ಪವಿತ್ರವಾದುದು, ಪಾಪ ನಾಶಕವು, ಶುಭಕರವಾದುದು, ಇಂತಹದನ್ನು ವಿಷ್ಣುವು ನಿರ್ಮಿಸಿರುವನು-

೧೨. ಈ ತಾಯಿಯು ಉತ್ತಮೋತ್ತಮಳು. ಪಾಪಗಳೆಲ್ಲವನ್ನೂ ನಾಶ ಮಾಡತಕ್ಕವಳು. ದೇವತೆಗಳಲ್ಲಿ ವಿಷ್ಣುವು ಹೇಗೆ ಉತ್ತಮನೋ ಹಾಗೆ ಗಂಗೆಯು ನದಿಗಳಲ್ಲಿ ಉತ್ತಮವಾದ ನದಿಯು.

೧೩. ಮಾಘಮಾಸದಲ್ಲಿ ಆ ತಿಂಗಳೆಲ್ಲವೂ ಗಂಗೆಯಲ್ಲಿ ಯಾರು ಸ್ನಾನ ಮಾಡುತ್ತಾರೆಯೋ ಅವರಿಗೆ ಮುನ್ನೂರು ಕಲ್ಪಗಳವರೆಗೂ ಪಾಪದ ಭಯವಿಲ್ಲ. ಸ್ವರ್ಗದಲ್ಲಿ ಸುಖಿಸುತ್ತಾರೆ.

ಯತ್ರ ಗಂಗಾ ಚ ಯಮುನಾ ಯತ್ರ ಚೈವ ಸರಸ್ವತೀ ।
ತತ್ರ ಸ್ನಾತ್ವಾ ಚ ಪೀತ್ವಾ ಚ ಮುಕ್ತಿಭಾಗೀ ನ ಸಂಶಯಃ ॥ ೧೪ ॥

॥ ಮಹಾದೇವ ಉವಾಚ ॥

ತದ್ವಾರ್ತಾಂ ಪ್ರಯತೋ ಬ್ರವೀಮಿ ಯದಹಂ ಸಾಸ್ತು ಸ್ತುತಿಸ್ತೇ ವಿಭೋ
ಯದ್ಭುಂಜೇ ತವ ಸನ್ನಿವೇದನಮಥೋ ಯದ್ಯಾಮಿ ಸಾ ಪ್ರೇಷ್ಯತಾ ।
ಯಚ್ಛ್ರಾಂತಃ ಸ್ವಪಿಮಿ ತ್ವದಂಘ್ರಿಯುಗಳೇ ದಂಡಪ್ರಣಾಮೋಽಸ್ತು ಮೇ
ಸ್ವಾಮಿನ್ಯಚ್ಚ ಕರೋಮಿ ತೇನ ಸ ಭವಾನ್ವಿಶ್ವೇಶ್ವರಃ ಪ್ರೀಯತಾಂ ॥೧೫॥

ದೃಷ್ಟೇನ ವಂದಿತೇನಾಪಿ ಸ್ಪೃಷ್ಟೇನ ಚ ಧೃತೇನ ಚ ।
ನರಾ ಯೇ ನ ವಿಮುಚ್ಯಂತೇ ತದೇತದ್ಯಾಮುನಂಜಲಂ ॥ ೧೬ ॥

ತಾವದ್ಭ್ರಮಂತಿ ಭುವನೇ ಮನುಜಾ ಭವೋತ್ಥ ।
ದಾರಿದ್ರ್ಯರೋಗ ಮರಣ ವ್ಯಸನಾಭಿಭೂತಾಃ ॥ ೧೭ ॥

---

೧೪. ಗಂಗೆ, ಯಮುನೆ, ಸರಸ್ವತಿ ಇವುಗಳಲ್ಲಿ ಸ್ನಾನಮಾಡಿದರೂ ಆ ನೀರನ್ನು ಕುಡಿದರೂ ಮನುಷ್ಯನು ಪುಣ್ಯಭಾಗಿಯಾಗುವನು. ಇದರಲ್ಲಿ ಸಂಶಯವಿಲ್ಲ.

೧೫. ಮಹಾದೇವನು ಹೇಳಿದನು– ಎಲೈ ಪ್ರಭುವೇ ! ನಾನು ಸಂತೋಷ ದಿಂದ ಆಡಿದ ಮಾತುಗಳೆಲ್ಲವೂ ನಿನ್ನ ಸ್ತುತಿಯಾಗಲಿ. ನಾನು ಊಟಮಾಡು ವುದೆಲ್ಲವೂ ನಿನಗೆ ನಿವೇದನ ಮಾಡಿದ್ದಾಗಲಿ. ನಾನು ಓಡಾಡುವುದೆಲ್ಲವೂ ನಿನಗೆ ಆಳಾಗಿ ಮಾಡಿದ ಸೇವೆಯಾಗಲಿ. ನಾನು ಕಷ್ಟಪಟ್ಟು ಮಲಗಿದುದು ಅದು ನಿನ್ನ ಪಾದಪದ್ಮಗಳಿಗೆ ದಂಡನಮಸ್ಕಾರ ಮಾಡಿದುದಾಗಲಿ. ಎಲೈ ಸ್ವಾಮಿಯೇ ! ನಾನು ಮಾಡಿದುದೆಲ್ಲವೂ ವಿಶ್ವೇಶ್ವರನ ಪ್ರೀತ್ಯರ್ಥವಾಗಿ ಆಗಲಿ.

೧೬. ಯಮುನೆಯ ನೀರನ್ನು ನೋಡಿದರೂ, ನಮಸ್ಕರಿಸಿದರೂ, ಮುಟ್ಟಿದರೂ, ಧರಿಸಿಕೊಂಡರೂ ಮನುಷ್ಯರು ಪಾಪದಿಂದ ಬಿಡುಗಡೆಯನ್ನು ಹೊಂದುತ್ತಾರೆ.

೧೭. ಎಲೈ ಸೂರ್ಯಪುತ್ರಿಯಾದ ಯಮುನೆಯೇ ! ನಿನ್ನ ನೀಲವಾದ ನೀರನ್ನು ನರನು ಎಲ್ಲಿಯವರೆಗೆ ನೋಡುವುದಿಲ್ಲವೋ, ಧರಿಸುವುದಿಲ್ಲವೋ, ಅಲ್ಲಿಯವರೆಗೆ ಅವನು ಪ್ರಪಂಚದಲ್ಲಿ ಉಂಟಾಗುವ ದಾರಿದ್ರ್ಯ ಮೊದಲಾದ ರೋಗಗಳಿಂದ ಕೂಡಿಕೊಂಡು ಸುತ್ತುತ್ತಿರುತ್ತಾನೆ.

ಯಾವಜ್ಜಲಂ ತವ ಮಹಾನದಿ ನೀಲನೀಲಂ ಪಶ್ಯಂತಿ ।
ನೋ ದಧತಿ ಮೂರ್ಧಸು ಸೂರ್ಯಪುತ್ರಿ ॥ ೧೮ ॥

ಯತ್ಸಂಸ್ಮೃತಿಸ್ಸಪದಿ ಕೃಂತತಿ ದುಷ್ಕೃತೌಘಂ
ಪಾಪಾವಳೀಂ ಜಯತಿ ಯೋಜನ ಲಕ್ಷತೋಽಪಿ ।
ಯನ್ನಾಮ ನಾಮ ಜಗದುಚ್ಚರಿತಂ ಪುನಾತಿ
ದಿಷ್ಟ್ಯಾ ಹಿ ಸಾ ಪಥಿ ದೃಶೋರ್ಭವಿತಾದ್ಯ ಗಂಗಾ ॥ ೧೯ ॥

ಆಲೋಕೋತ್ಕಂಠಿತೇನ ಪ್ರಮುದಿತಮನಸಾ ವರ್ತ್ಮ ಯಸ್ಯಾಃಪ್ರಯಾತಂ
ಸತ್ಯಸ್ಮಿನ್ ಕೃತ್ಯಮೇತಾಮಥ ಪ್ರಥಮಕೃತೀ ಜಜ್ಞಿವಾನ್ ಸ್ವರ್ಗಸಿಂಧುಂ
ಸ್ನಾನಂ ಸಂಧ್ಯಾ ನಿವಾಪಃ ಸುರಯಜನಮಪಿ ಶ್ರಾದ್ಧವಿಪ್ರಾಶನಾದ್ಯಂ ।
ಸರ್ವಂ ಸಂಪೂರ್ಣಮೇತದ್ಭವತಿ ಭಗವತಃ ಪ್ರೀತಿದಂ ನಾತ್ರ ಚಿತ್ರಂ ॥೨೦॥

---

೧೮. ಎಲೈ ಸೂರ್ಯಪುತ್ರಿಯಾದ ಮಹಾನದಿಯಾದ ಯಮುನೆಯೇ ! ನೀಲ ನೀಲವಾದ ನಿನ್ನ ನೀರನ್ನು ನೋಡಿ ತಲೆಯಲ್ಲಿ ಧರಿಸಿಕೊಳ್ಳದಿರುವವರೆಗೂ ಈ ಸಂಸಾರವು ಇರುತ್ತದೆ. ಹಾಗೆ ತಲೆಯಲ್ಲಿ ನಿನ್ನ ನೀರನ್ನು ಧರಿಸಿಕೊಂಡರೆ ಆ ಸಂಸಾರವು ನಾಶವಾಗುತ್ತದೆ.

೧೯. ಗಂಗೆಯ ಸ್ಮರಣೆಯು ಪಾಪಗಳನ್ನು ಒಡನೆಯೇ ನಾಶಮಾಡುತ್ತದೆ. ಅದರ ಸ್ಮರಣೆಯು ಲಕ್ಷ ಯೋಜನಗಳ ದೂರದಲ್ಲಿದ್ದರೂ ಪಾಪಗಳನ್ನು ನಾಶ ಮಾಡುತ್ತದೆ. ಆ ಗಂಗೆಯ ಸ್ಮರಣೆಯನ್ನು ಮಾಡಿದರೆ ಜಗತ್ತೇ ಪವಿತ್ರವಾಗುತ್ತದೆ. ಅಂತಹ ಗಂಗೆಯು ಕಣ್ಣಿಗೆ ಬಿದ್ದಾಳೆಯೇ !

೨೦. ಆ ಗಂಗೆಯನ್ನು ನೋಡಬೇಕೆಂಬ ಮನಸ್ಸಿನಿಂದ ಸಂತೋಷಪಟ್ಟು ಆ ದಾರಿಯನ್ನು ಹೊಂದಿದರೇನೇ ಅವನು ಧನ್ಯರಲ್ಲಿ ಉತ್ತಮನು. ಆ ನದಿಯನ್ನು ಹೊಂದಿ ಸ್ನಾನಮಾಡಿ ಸಂಧ್ಯಾವಂದನೆ, ತರ್ಪಣ, ದೇವತಾಪೂಜೆ, ಶ್ರಾದ್ಧ, ಬ್ರಾಹ್ಮಣಭೋಜನ, ಇವೆಲ್ಲವನ್ನೂ ಮಾಡಿದರೆ ಅದು ಭಗವಂತನಿಗೆ ಪ್ರೀತಿಯನ್ನುಂಟುಮಾಡಿದಂತಾಗುತ್ತದೆ. ಇದರಲ್ಲಿ ಆಶ್ಚರ್ಯವೇನೂ ಇರುವುದಿಲ್ಲ.

ದೇವಿ ಭೂತಂ ಪರಂ ಬ್ರಹ್ಮ ಪರಮಾನಂದದಾಯಿನೀ ।
ಅರ್ಘ್ಯಂ ಗೃಹಾಣ ಮೇ ಗಂಗೇ ಪಾಪಂ ಹರ ನಮೋಸ್ತುತೇ ॥ ೨೧ ॥

ಸಾಕ್ಷಾದ್ಧರ್ಮದ್ರವೌಘಂ ಮುರರಿಪುಚರಣಾಂಭೋಜಪೀಯೂಷಸಾರಂ
ದುಃಖಸ್ಯಾಬ್ಧೇಸ್ತರಿತ್ರಂ ಸುರದನುಜನುತಂ ಸ್ವರ್ಗಸೋಪಾನಮಾರ್ಗಂ ।
ಸರ್ವಾಂಹೋಹಾರಿ ವಾರಿ ಪ್ರವರಗುಣಗಣಂ ಭಾಸಿ ಯಾ ಸಂವಹಂತೀ
ತಸ್ಯೈ ಭಾಗೀರಥಿ ಶ್ರೀಮತಿ ಮುದಿತಮನಾ ದೇವಿ ಕುರ್ವೇ ನಮಸ್ತೇ॥೨೨॥

ಸ್ವಸ್ಸಿಂಧೋ ದುರಿತಾಬ್ಧಿಮಗ್ನಜನತಾಸಂತಾರಣಿ ಪ್ರೋಲ್ಲಸ
ತ್ಕಲ್ಲೋಲಾಮಲಕಾಂತಿನಾಶಿತತಮಸ್ತೋಮೇ ಜಗತ್ಪಾವನಿ ।
ಗಂಗೇ ದೇವಿ ಪುನೀಹಿ ದುಷ್ಕೃತಭಯಕ್ರಾಂತಂ ಕೃಪಾಭಾಜನಂ ।
ಮಾತರ್ಮಾಂ ಶರಣಾಗತಂ ಶರಣದೇ ರಕ್ಷಾದ್ಯಭೋ ಭೀಷಿತಂ ॥ ೨೩ ॥

---

೨೧. ಎಲೈ ದೇವಿಯೇ ! ಆ ಪರಬ್ರಹ್ಮನು ನಿನ್ನ ರೂಪನಾಗಿದ್ದಾನೆ. ನೀನು ಪರಮಾನಂದವನ್ನು ಕೊಡತಕ್ಕವಳು. ಎಲೈ ಗಂಗೆಯೇ! ನನ್ನ ಈ ಅರ್ಘ್ಯವನ್ನು ತೆಗೆದುಕೊಂಡು ನನ್ನ ಪಾಪವನ್ನು ನಾಶಮಾಡು. ನಿನಗೆ ನಮಸ್ಕಾರವು.

೨೨. ಎಲೈ ಗಂಗೆಯೇ! ನಿನ್ನನೀರು ಪ್ರತ್ಯಕ್ಷವಾದ ಧರ್ಮದ ನೀರು ವಿಷ್ಣು ವಿನ ಪಾದಕಮಲದ ಅಮೃತಸಾರವು. ದುಃಖವೆಂಬ ಸಮುದ್ರಕ್ಕೆ ದೋಣಿಯು. ಸುರಾಸುರರಿಂದ ಹೊಗಳಲ್ಪಟ್ಟ ಸ್ವರ್ಗದ ಸೋಪಾನದ ದಾರಿಯು. ಎಲ್ಲಾ ಪಾಪಗಳನ್ನೂ ನಾಶಮಾಡುವ ನೀರು. ಉತ್ತಮವಾದ ಗುಣಗಳುಳ್ಳದ್ದು. ಇಂತಹ ನೀರು ನಿನ್ನಲ್ಲಿ ಹರಿಯುತ್ತಿರುವುದು. ಎಲೈ ಭಾಗೀರಥಿಯೇ ! ಇಂತಹ ನಿನಗೆ ಸಂತೋಷದಿಂದ ನಮಸ್ಕರಿಸುತ್ತೇನೆ.

೨೩. ಎಲೈ ಗಂಗೆಯೇ ! ನೀನು ಪಾಪವೆಂಬ ಸಮುದ್ರದಲ್ಲಿ ಮುಳುಗಿವ ಜನಗಳನ್ನು ದಾಟಿಸತಕ್ಕವಳು. ಪ್ರಕಾಶಮಾನವಾದ ನಿನ್ನ ಅಲೆಗಳಿಂದ ಕತ್ತಲೆಯನ್ನು ನಾಶಮಾಡುತ್ತಿದ್ದೀಯೆ. ಜಗತ್ತಿಗೆ ಪಾವನ ಸ್ವರೂಪಳು. ಎಲೈ ದೇವಿಯೇ ಪಾಪದ ಭಯದಿಂದ ಕೂಡಿದ ನಿನ್ನ ದಯೆಗೆ ಪಾತ್ರನಾದ ನನ್ನನ್ನು ಪವಿತ್ರನನ್ನಾಗಿ ಮಾಡು. ಎಲೈ ತಾಯಿಯೇ ! ನಿನ್ನ ಶರಣು ಹೊಕ್ಕಿರುವ ನನ್ನನ್ನು ಕಾಪಾಡು. ನಾನು ಬಹುವಾಗಿ ಹೆದರಿದ್ದೇನೆ.

ಹಂಹೋ ಮಾನಸ ಕಂಪಸೇ ಕಿಮು ಸಖೇ ತ್ರಸ್ತೋ ಭಯನ್ನಾರಕಾತ್ ।
ಕಿಂ ತೇ ಭೀತಿರಿತಿ ಶ್ರುತಿರ್ದುರಿತಕೃತ್ಸಂಜಾಯತೇ ನಾರಕೀ ॥
ಮಾ ಭೈಷೀಃ ಶೃಣು ಮೇ ಮತಿಂ ನನು ಗಯಾ ಪಾಪಾಚಲಸ್ಪರ್ಧಿನೀ ।
ಪ್ರಾಪ್ತಾ ತೇ ನಿರಯಃ ಕಥಂ ಕಿಮಪರಂ ಕಿಂ ನೋ ನ ಧರ್ಮಂ
ಧನಂ ॥೨೪॥

ಸ್ವರ್ಗಸಾಧಿಪ್ರಶಂಸಾ ಮುದಮನುಭವನಂ ಮಜ್ಜನಂ ಯತ್ರ ಚೋಕ್ತಂ
ಸ್ವರ್ಗಾರ್ಥ್ಯೋ ವೀಕ್ಷ್ಯ ಹೃಷ್ಟಾ ವಿಬುಧಸುರಪತಿಪ್ರಾಪ್ತಿಸಂಭಾವನೇನ ।
ನೀರೇ ಶ್ರೀ ಜಹ್ನುಕನ್ಯೇ ಯಮನಿಯಮರತಾಃ ಸ್ನಾಂತಿ ಯೇ ತಾವಕೀನೇ
ದೇವತ್ವಂ ತೇ ಲಭಂತೇ ಸ್ಫುಟಮಶುಭಕೃತೋಽಪ್ಯತ್ರ ವೇದಾಃ
ಪ್ರಮಾಣಂ ॥೨೫॥

---

೨೪. ಎಲೈ ಸ್ನೇಹಿತನಾದ ಮನಸ್ಸೇ! ಏಕೆ ಭಯ ಪಡುತ್ತಿದ್ದೀಯೆ? ನರಕದ ದೆಸೆಯಿಂದ ಹೆದರಿಕೆಯಾಗಿದೆಯೆಂದೇ? ಪಾಪ ಮಾಡಿದವನಿಗೆ ನರಕವು. ಬರುತ್ತದೆಯೆಂದು ವೇದವು ಹೇಳಿರುವುದನ್ನು ಹೇಳುವಿಯಾ? ನೀನು ಹೆದರಬೇಡ. ನನ್ನ ಮಾತನ್ನು ಕೇಳು. ಪಾಪವೆಂಬ ಬೆಟ್ಟವನ್ನು ನಾಶಮಾಡಲು ಸಿದ್ಧವಾಗಿರುವ ಗಯೆಗೆ ನೀನು ಹೋದರೆ ನಿನಗೆ ಪಾಪವೆಲ್ಲಿಂದ ಬಂದೀತು? ಇದಕ್ಕಿಂತಲೂ ಮತ್ತೇನು ಬೇಕು? ಅಲ್ಲಿಗೆ ಹೋದರೆ ಬರುವ ಧರ್ಮವೇ ಧನವಲ್ಲವೇ?

೨೫. ಎಲೈ ಗಂಗೆಯೇ! ನಿನ್ನಲ್ಲಿ ಸ್ನಾನಮಾಡಿದರೆ ಸ್ವರ್ಗವಾಸವು ಸಿಕ್ಕುತ್ತದೆ. ಮತ್ತೂ ಸಂತೋಷಾನುಭವಗಳು ಸಿಕ್ಕುತ್ತವೆ. ದೇವೇಂದ್ರನು ಇವರನ್ನು ಗೌರವಿಸುವುದರಿಂದ ಇವನ ವಿಷಯದಲ್ಲಿ ದೇವತಾ ಸ್ತ್ರೀಯರು ಸಂತೋಷಗೊಳ್ಳುತ್ತಾರೆ. ಎಲೈ ಗಂಗೆಯೇ! ಯಾರು ನಿನ್ನಲ್ಲಿ ನಿಯಮದಿಂದ ಸ್ನಾನಮಾಡುತ್ತಾರೋ ಅವರೆಲ್ಲರೂ ದೇವತೆಗಳಾಗುತ್ತಾರೆ ನಿಶ್ಚಯವು. ಈ ವಿಷಯದಲ್ಲಿ ವೇದಗಳೇ ಪ್ರಮಾಣವು.

ಬುದ್ಧೇ ಸದ್ಬುದ್ಧಿರೇವಂ ಭವತು ತವ ಸಖೇ ಮಾನಸ ಸ್ವಸ್ತಿ ತೇಸ್ತು
ಪ್ರಾಸ್ತಾಂ ಪಾದೌ ಪದಸ್ಥೌ ಸತತಮಿಹ ಯುವಾಂ ಸಾಧುದೃಷ್ಟೀ ಚ
ದೃಷ್ಟೀ ।
ವಾಣಿ ಪ್ರಾಣಪ್ರಿಯೇಧಿಪ್ರಕಟಗುಣವಪುಃ ಪ್ರಾಪ್ನುಹಿ ಪ್ರಾಣಪುಷ್ಟಿಂ
ಯಸ್ಮಾತ್ಸರ್ವೈರ್ಭವದ್ಭಿಃ ಸುಖಮತುಲಮಹಂ ಪ್ರಾಪ್ನುಯಾಂ
ತೀರ್ಥಪುಣ್ಯಂ ॥ ೨೬ ॥

ಶ್ರೀ ಜಾಹ್ನವೀ ರವಿಸುತಾ ಪರಮೇಷ್ಠಿ ಪುತ್ರೀ ।
ಸಿಂಧುತ್ರಯಾಭರಣತೀರ್ಥವರ ಪ್ರಯಾಗ ॥
ಸರ್ವೇಶ ಮಾಮನುಗೃಹಾಣ ನ ಯಸ್ವ ಚೋರ್ಧ್ವಂ ।
ಮಂತಸ್ತಮೋ ದಶವಿಧಂ ದಳಯಸ್ವಧಾಮ್ನಾ ॥ ೨೭ ॥

---

೨೬. ಎಲೈ ಬುದ್ಧಿಯೇ ! ನಿನಗೆ ಈ ರೀತಿಯಾದ ಒಳ್ಳೆಯ ಬುದ್ಧಿಯು ಬರಲಿ. ಸ್ನೇಹಿತನಾದ ಮನಸ್ಸೇ ! ನಿನಗೆ ಶುಭವಾಗಲಿ. ಎಲೈ ಕಾಲುಗಳೇ ! ನೀವು ಆ ಗಂಗಾ ನದಿಗೆ ಹೋಗುವ ದಾರಿಯನ್ನು ಹಿಡಿಯಿರಿ. ಎಲೈ ಕಣ್ಣುಗಳೆ! ನೀವು ಆ ಗಂಗೆಯನ್ನು ನೋಡಿ ಕೃತಾರ್ಥರಾಗಿರಿ. ಎಲೈ ವಾಕ್ಕೆ ! ನಿನ್ನನ್ನು ನೀನು ಹೆಚ್ಚಿಸಿಕೊಂಡು ಆ ಗಂಗೆಯ ಸ್ತೋತ್ರದಿಂದ ದಪ್ಪವಾಗಿ ಬೆಳೆ. ನೀವೆಲ್ಲರೂ ಕೃತಾರ್ಥರಾದರೆ ನಾನು ತೀರ್ಥ ಪುಣ್ಯವನ್ನು ಹೊಂದಿ ಹೆಚ್ಚಾದ ಸುಖವನ್ನು ಹೊಂದುವೆನು.

೨೭. ಗಂಗೆ, ಯಮುನೆ, ಸರಸ್ವತಿಯೆಂಬ ಉತ್ತಮೋತ್ತಮಗಳಾದ ಮೂರು ತೀರ್ಥಗಳು ಹರಿಯತಕ್ಕ ಸರ್ವೇಶ್ವರನಾದ ಪ್ರಯಾಗವೇ! ನನ್ನಲ್ಲಿ ಅನುಗ್ರಹವನ್ನಿಡು. ನನ್ನನ್ನು ಸ್ವರ್ಗಕ್ಕೆ ಸೇರಿಸು. ನನ್ನ ದೇಹದೊಳಗಿರುವ ಹತ್ತು ವಿಧವಾದ ಪಾಪಗಳನ್ನು ನಿನ್ನ ತೇಜಸ್ಸಿನಿಂದ ನಾಶಮಾಡು. (ಬಹಿರಿಂದ್ರಿಯಗಳು ಐದು ಅಂತರಿಂದ್ರಿಯಗಳು ಐದು ಇವುಗಳಿಂದ ಮಾಡಿದ ಪಾಪವು ಹತ್ತು ಬಗೆಯದು)

ವಾಗೀಶವಿಷ್ಣ್ವೀಶಪುರಂದರಾದ್ಯಾಃ
ಪಾಪಪ್ರಣಾಶಾಯ ವಿದಾಂ ವಿದೋಽಪಿ ।
ಭಜಂತಿ ಯತ್ತೀರಮನೀಲನೀರಂ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೮ ॥

ಕಳಿಂದಜಾ ಸಂಗಮವಾಪ್ಯಯತ್ರ
ಪ್ರತ್ಯಾಗತಾಸ್ವರ್ಗಧುನೀ ಧುನೋತಿ ।
ಅಧ್ಯಾತ್ಮತಾಪತ್ರಿತಯಂ ಜನಸ್ಯ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೨೯ ॥

ಶ್ಯಾಮೋ ವಟೋಽಶ್ಯಾಮಗುಣಂ ಕೃಣೋತಿ
ಸ್ವಚ್ಛಾಯಯಾ ಶ್ಯಾಮಲಯಾ ಜನಾನಾಂ ।
ಶ್ಯಾಮಶ್ರಮಂ ಕೃಂತತಿ ಯತ್ರ ದೃಷ್ಟಃ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೦ ॥

---

೨೮. ತಿಳಿದವರಲ್ಲಿ ತಿಳಿವಳಿಕೆಯುಳ್ಳವರಾದ ಬ್ರಹ್ಮ, ವಿಷ್ಣು, ಇಂದ್ರಾದಿ ದೇವತೆಗಳು ತಮ್ಮ ಪಾಪವನ್ನು ಕಳೆದುಕೊಳ್ಳಲು ಯಾವ ಗಂಗೆಯ ದಡವನ್ನು ಪ್ರಯಾಗದಲ್ಲಿ ಆಶ್ರಯಿಸುತ್ತಾರೆಯೋ ಅಂತಹ ತೀರ್ಥರಾಜನಾದ ಪ್ರಯಾಗವು ಉತ್ತಮವಾದುದಾಗಿದೆ.

೨೯. ಯಮುನೆಯೊಡನೆ ಸಂಗಮವಾದ ಮೇಲೆ ಗಂಗಾ ನದಿಯು ಹರಿಯುತ್ತಾ ಬಂದು ಯಾವ ಜಾಗದಲ್ಲಿ ಆದಿಭೌತಿಕ, ಆದಿವ್ಯಾಧಿಕ, ಆಧ್ಯಾತ್ಮಿಕ ಗಳೆಂಬ ಮೂರು ಬಗೆಯ ತಾಪಗಳನ್ನೂ ನಾಶಮಾಡುತ್ತದೆಯೋ ಅಂತಹ ಪ್ರಯಾಗವು ಉತ್ತಮವಾಗಿ ಪ್ರಕಾಶಿಸುತ್ತಿರುವುದು.

೩೦. ಯಾವ ಜಾಗದಲ್ಲಿ ಶ್ಯಾಮವೆಂಬ (ಕಪ್ಪಾದ) ಆಲದ ಮರವು ತನ್ನ ಕಪ್ಪಾದ (ಗಾಢವಾದ) ನೆರಳಿನಿಂದ ಜನಗಳಿಗೆ ಉತ್ತಮ ಗುಣವನ್ನು ಹೊಂದಿಸಿ ಜನಗಳ ಪಾಪಗಳನ್ನು ನಾಶಮಾಡುತ್ತದೆಯೋ ಅಂತಹ ಮರವಿರುವ ತೀರ್ಥ ರಾಜನಾದ ಪ್ರಯಾಗವು ಸರ್ವೋತ್ಕೃಷ್ಟವಾಗಿರುತ್ತದೆ.

ಬ್ರಹ್ಮಾದಯೋಪ್ಯಾತ್ಮಕೃತಿಂ ವಿಹಾಯ
ಭಜಂತಿ ಪುಣ್ಯಾತ್ಮಕಭಾಗಧೇಯಂ ।
ಯತ್ರೋಜ್ಝಿತಾ ದಂಡಧರಸ್ಸ್ವದಂಡಂ
ಸ ತೀರ್ಥರಾಜೋ ಜಯತಿ ಪ್ರಯಾಗಃ　　　　|| ೩೧ ||

ಯತ್ಸೇವಯಾ ದೇವನೃದೇವತಾದಿ
ದೇವರ್ಷಯಃ ಪ್ರತ್ಯಹಮಾಮನಂತಿ ।
ಸ್ವರ್ಗಂ ಚ ಸರ್ವೋತ್ತಮಭೂಮಿರಾಜ್ಯಂ
ಸ ತೀರ್ಥರಾಜೋ ಜಯತಿ ಪ್ರಯಾಗಃ　　　　|| ೩೨ ||

ಏನಾಂಸಿ ಹಂತೀತಿ ಪ್ರಸಿದ್ಧವಾರ್ತಾ
ನಾಮ ಪ್ರತಾಪೇನ ದಿಶೋ ದ್ರವಂತೀ ।
ಯಸ್ಯ ತ್ರಿಲೋಕೀ ಪ್ರತತಾ ಯಶೋಭಿಃ
ಸ ತೀರ್ಥರಾಜೋ ಜಯತಿ ಪ್ರಯಾಗಃ　　　　|| ೩೩ ||

---

೩೧. ಬ್ರಹ್ಮಾದಿಗಳೂ ಕೂಡ ತಮ್ಮ ತಮ್ಮ ಕೆಲಸವನ್ನು ಬಿಟ್ಟು ಪುಣ್ಯರೂಪವಾದ ಯಾವ ಸ್ಥಳವನ್ನು ಹೊಂದುತ್ತಾರೆಯೋ ಯಮನೂ ಕೂಡಾ ತನ್ನ ದಂಡವನ್ನು ಬಿಟ್ಟು ಎಲ್ಲಿನ ಪುಣ್ಯಕ್ಷೇತ್ರವನ್ನು ಆಶ್ರಯಿಸುವನೋ ಅಂತಹ ತೀರ್ಥರಾಜನಾದ ಪ್ರಯಾಗವು ಶೋಭಿಸುತ್ತದೆ.

೩೨. ದೇವತೆಗಳೂ, ರಾಜರುಗಳೂ, ದೇವರ್ಷಿಗಳೂ ಕೂಡ ಯಾವುದನ್ನು ಸೇವಿಸುವುದರಿಂದ ಸ್ವರ್ಗವೂ, ಉತ್ತಮ ರಾಜ್ಯವೂ, ಬರುತ್ತದೆಂದು ತಿಳಿದು ಇರುವರೋ ಅಂತಹ ಪ್ರಯಾಗವು ಉತ್ತಮೋತ್ತಮವಾಗಿರುವುದು.

೩೩. ಯಾವುದರ ಹೆಸರನ್ನು ಕೇಳಿದರೆ ಪಾಪಗಳೆಲ್ಲವೂ ನಾಶವಾಗುತ್ತವೆ. ಎಂಬ ವಿಷಯವು ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾಗಿರುವುದೋ, ಯಾವುದರ ಯಶಸ್ಸು ಮೂರು ಲೋಕದಲ್ಲಿಯೂ ಹರಡಿದೆಯೋ, ಅಂತಹ ಪ್ರಯಾಗವು ಸರ್ವೋತ್ಕೃಷ್ಟವಾಗಿರುವುದು.

ಛತ್ರೋಽಭೂತಶ್ಚಾಮರ ಚಾರುಕಾಂತೀ
ಸಿತಾಸಿತೇ ಯತ್ರ ಸರಿದ್ವರೇಣ್ಯೇ ।
ಆದ್ಯೋ ವಟಚ್ಛತ್ರಮಿವಾತಿಭಾತಿ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೪ ॥

ಬ್ರಾಹ್ಮೀಸಪುತ್ರೀತ್ರಿಪಥಾಸ್ತ್ರಿವೇಣೀ
ಸಮಾಗತೇನಾಕ್ಷತಯೋಗಮಾತ್ರಾನ್ ।
ಯತ್ರಾಪ್ಲುತಾನ್ ಬ್ರಹ್ಮಪದಂ ನಯಂತಿ
ಸ ತೀರ್ಥರಾಜೋ ಜಯತಿ ಪ್ರಯಾಗಃ ॥ ೩೫ ॥

ಕೇಷಾಂಚಿಜ್ಜನ್ಮಕೋಟಿರ್ವ್ರಜತಿ ಸುವಚಸಾ ಯಾಮಿ ಯಾಮೀತಿ
ಯಸ್ಮಿನ್
ಕೇಷಾಂ ಚಿತ್ಪ್ರೋಷಿತಾನಾಂ ನಿಯತಮತಿಪತೇದ್ವರ್ಷವೃಂದಂವರಿಷ್ಠಂ ।
ಭೆಯಃ ಪ್ರಾಪ್ತೋ ಭಾಗ್ಯಲಕ್ಷ್ಮ್ಯೈವತಿ ಭವತಿ ನೋ ವಾ ಸ
ವಾಚಾಮವಾಚ್ಯೋ
ದಿಷ್ಟ್ಯಾವೇಣೀವಿಶಿಷ್ಟೋ ಭವತಿ ದೃಗತಿಥಿಃ ಕಿಂ ಪ್ರಯಾಗಃ
ಪ್ರಯಾಗಃ ॥ ೩೬ ॥

---

೩೪. ಯಾವ ಜಾಗದಲ್ಲಿ ಗಂಗೆಯು ಯಮುನೆಯೂ ಚಾಮರದ ಕಾಂತಿಯಂತೆ ಸುತ್ತಲೂ ಪ್ರವಹಿಸುತ್ತವೆಯೋ ಎಲ್ಲಿ ಆದಿವಟವು (ಪೂರ್ವದ ಆಲದ ಮರವು) ಛತ್ರಿಯಂತೆ ಪ್ರಕಾಶಿಸುತ್ತದೆಯೋ ಅಂತಹ ಪ್ರಯಾಗವು ಪ್ರಕಾಶಿಸುತ್ತದೆ.

೩೫. ಗಂಗೆ, ಯಮುನೆ, ಸರಸ್ವತಿಗಳು ಈ ಮೂರು ನದಿಗಳೂ ಸೇರಿಕೊಂಡು ಎಲ್ಲಿ ತಮ್ಮಲ್ಲಿ ಸ್ನಾನಮಾಡಿದವರಿಗೆ ಬ್ರಹ್ಮಪದವನ್ನು ಕೊಡುತ್ತವೆಯೋ ಅಂತಹ ಪ್ರಯಾಗವು ಸರ್ವೋತ್ಕೃಷ್ಟವಾಗಿದೆ,

೩೬. ಆ ಪ್ರಯಾಗಕ್ಕೆ ಹೋಗಬೇಕೆಂದು ಹೇಳುತ್ತಲೇ ಕೆಲವರಿಗೆ ಕೋಟಿ ಜನ್ಮಗಳು ಕಳೆಯುತ್ತವೆ. ಕೆಲವರು ಪ್ರಯಾಗಕ್ಕೆ ಹೊರಟು ಸಾವಿರಾರು ವರ್ಷಗಳನ್ನು ದಾರಿಯಲ್ಲಿಯೇ ಕಳೆಯುತ್ತಾರೆ. ಇವರಲ್ಲಿ ಯಾವನಾದರೂ ಭಾಗ್ಯವಶದಿಂದ ಆ ಪ್ರಯಾಗವನ್ನು ಹೊಂದಿದರೆ ಅವನ ವಿಷಯವನ್ನು ಬಾಯಿಯಲ್ಲಿ ಹೇಳುವುದಕ್ಕೇ ಆಗುವುದೇ ಇಲ್ಲ. ಅಷ್ಟು ಪುಣ್ಯಭಾಗಿಯಾಗಿರುತ್ತಾನೆ. ಆ ಪ್ರಯಾಗಕ್ಕೆ ಹೋಗಿ ಅದನ್ನು ನೋಡಿ ಅಲ್ಲಿ ಸ್ನಾನಮಾಡಿ ತ್ರಿವೇಣಿಯನ್ನು ದರ್ಶನ ಮಾಡಬೇಕು. ಆ ಪ್ರಯಾಗವು ಇಂತಹ ಮಹತ್ತರವಾದುದು.

ಲೋಕಾನಾಮುಕ್ಷಮಾಣಾಂ ಮುಖಕೃತಿಷು ಕಲೌ ಸ್ವರ್ಗಕಾಮ್ಯೈರ್ಜಯಸ್ತು
ತ್ಯಾದಿ ಸ್ತೋತ್ರೈರ್ವಚೋಭಿಃ ಕಥಮಮರಪದ ಪ್ರಾಪ್ತಿಚಿಂತಾತುರಾಣಾಂ
ಅಗ್ನಿಷ್ಟೋಮಾಶ್ವಮೇಧ ಪ್ರಮುಖಮುಖಫಲಂ ಸಮ್ಯಗಾಲೋಚ್ಯ
ಸಾಂಗಂ
ಬ್ರಹ್ಮಾದ್ಯೈಸ್ತೀರ್ಥರಾಜೋಭಿಮತದ ಉಪದಿಷ್ಟೋಯಮೇವ
ಪ್ರಯಾಗಃ ||೩೭||

ಮಯಾ ಪ್ರಮಾದಾತುರತಾದಿದೋಷತಃ
ಸಂಧ್ಯಾವಿಧಿರ್ನೋ ಸಮುಪಾಸಿತೋಭೂತ್ ।
ಚೇದತ್ರ ಸಂಧ್ಯಾಂ ಚರತೋಽಪ್ರಮಾದತಃ
ಸಂಧ್ಯಾಸ್ತು ಪೂರ್ಣಾಖಿಲ ಜನ್ಮನೋಪಿ ಮೇ　　|| ೩೮ ||

---

೩೭. ಕಲಿಯುಗದಲ್ಲಿ ಯಾಗಾದಿಗಳನ್ನು ಮಾಡಲಾರದೆ ಜಯ ಜಯ ಎಂದು ಎಲ್ಲರನ್ನೂ ಯಾವಾಗಲೂ ಸ್ತೋತ್ರಮಾಡುತ್ತಾ ಇದ್ದುಕೊಂಡು ಸ್ವರ್ಗವನ್ನು ಅಪೇಕ್ಷಿಸಿದರೆ ಅದರಿಂದ ಸ್ವರ್ಗವು ಹೇಗೆ ಸಿಕ್ಕೀತು? ಜಯದ ಸ್ತುತಿಗಳನ್ನು ಹೇಳುವ ಬರೀ ಮಾತುಗಳಿಂದ (ವೇದೋಚ್ಚಾರಣೆಯಿಂದ) ಸ್ವರ್ಗ ಪ್ರಾಪ್ತಿಯಾಗುವುದು ಹೇಗೆ ಎಂದು ಚಿಂತಿಸುತ್ತಿರುವ ಜನಗಳ ಹಿತಕ್ಕೋಸ್ಕರ ಬ್ರಹ್ಮಾದಿಗಳು ಅಗ್ನಿಷ್ಟೋಮವೇ ಮುಂತಾದ ಯಾಗಗಳ ಫಲವನ್ನೂ ಅದರ ಅಂಗಗಳ ಫಲವನ್ನೂ ಸರಿಯಾಗಿ ಯೋಚಿಸಿ ತೀರ್ಥರಾಜನಾದ ಪ್ರಯಾಗವನ್ನು ನಿರ್ಮಿಸಿರುವನು. ಅಂತಹ ಉತ್ತಮವಾದ ಕ್ಷೇತ್ರವು ಈ ಪ್ರಯಾಗವು.

೩೮. ಪ್ರಮಾದ, ಆತುರ ಮುಂತಾದ ದೋಷಗಳಿಂದ ನಾನು ಸಂಧ್ಯಾವಂದನೆಯನ್ನೇ ಮಾಡಲಿಲ್ಲ. ಅಂತಹ ನಾನು ಇಲ್ಲಿ ಸಾವಧಾನದಿಂದ ಸಂಧ್ಯಾವಂದನೆಯನ್ನು ಮಾಡಿದರೆ ಅದು ನನಗೆ ಎಲ್ಲಾ ಜನ್ಮದಲ್ಲಿಯೂ ಪರಿಪೂರ್ತಿಯಾಗಲಿ.

ಅನ್ಯತ್ರಾಪಿ ಪ್ರಗರ್ಜನ್ಮಮ ಹಿ ಮನಸಿ ಚೇನ್ನಾನುಭಿ ರ್ವಿಪ್ರಕೃಷ್ಟೈಃ
ಧ್ಯಾತಃ ಸಂಕೀರ್ತಿತೋ ಯೋಭಿಮತಪದ ವಿಧಾತಾನಿಶಂ ನಿರ್ವ್ಯಪೇಕ್ಷಂ ।
ತ್ರಿವಮತ್ಯಾಸೂತವೇಣೀಪರಿದೃಢಮತುಲಂ ತೀರ್ಥರಾಜಂ ಪ್ರಯಾಗಂ
ಗೋಲಂಕಾರಪ್ರರಾಶಿಂ ಸ್ವಯಮಮರವರ್ಯೈ ಶ್ಚಾರ್ಚಿತಂ ತಂ ನಮಾಮಿ
|| ೩೯ ||

ಅಸ್ಮಾಭಿಸ್ಸುತಪೋಽನ್ಯತಾಪಿ ಕಿಮಹೋಽಯಜ್ಯಂತ ಕಿಂ ವಾಧ್ವರಾಃ
ಪಾತ್ರೇ ದಾನಮದಾಯಿ ಕಿಂ ಬಹುವಿಧಂ ಕಿಂ ವಾ ಸುರಾಶ್ಚಾರ್ಚಿತಾಃ
ಕಿಂ ಸತ್ತೀರ್ಥಮಸೇವಿ ಕಿಂ ದ್ವಿಜಕುಲಂ ಪೂಜಾದಿಭಿಃ ಸತ್ಕೃತಂ
ಯೇನ ಪ್ರಾಪ ಸದಾಶಿವಸ್ಯ ಶಿವದಾ ಸಾ ರಾಜಧಾನೀ ಸ್ವಯಂ || ೪೦ ||

---

೩೯. ಪ್ರಯಾಗವು ಬೇರೆಕಡೆಯಲ್ಲಿದ್ದರೂ, ದೂರದಲ್ಲಿದ್ದರೂ, ಮನಸ್ಸಿನಲ್ಲಿ ಅದನ್ನೇ ಧ್ಯಾನಿಸುತ್ತ ಅದರ ಹೆಸರನ್ನೇ ಹೇಳುತ್ತ ಇದ್ದರೆ ಮತ್ತೊಂದರ ಅಪೇಕ್ಷೆ ಇಲ್ಲದಂತೆ ಯಾವಾಗಲೂ ನಮಗೆ ಬೇಕಾದ ಸ್ಥಾನವನ್ನು ಕೊಡುತ್ತದೆ. ತ್ರಿವೇಣಿಗಳಿಂದ ಕೂಡಿರುವ, ತೀರ್ಥರಾಜನಾದ, ಉತ್ತಮವಾದ, ಗೋಳಾಕಾರವಾಗಿರುವ ದೇವತೆಗಳಿಂದ ಪೂಜಿತವಾದ, ಅಂತಹ ಪ್ರಯಾಗವನ್ನು ನಮಸ್ಕರಿಸುತ್ತೇವೆ.

೪೦. ನಾವು ಸದಾಶಿವನ ರಾಜಧಾನಿಯಾದ ಮಂಗಳಕರವಾದ ಕಾಶಿಯನ್ನು ಹೊಂದಿರುವುದನ್ನು ನೋಡಿದರೆ ನಾವು ಯಾವ ಉತ್ತಮ ತಪಸ್ಸನ್ನು ಆಚರಿಸಿದೆವು ? ಯಾವ ಯಾಗಗಳನ್ನು ಮಾಡಿದೆವು ? ಎಂತಹ ಉತ್ತಮ ಪಾತ್ರದಲ್ಲಿ ದಾನ ಮಾಡಿರುವೆವು ? ಎಂತಹ ದೇವತೆಗಳನ್ನು ಪೂಜಿಸಿರುವೆವು ? ಯಾವ ತೀರ್ಥವನ್ನು ಸೇವಿಸಿರುವೆವು ? ಯಾವ ಬ್ರಾಹ್ಮಣರನ್ನು ಸತ್ಕಾರದಿಂದ ಪೂಜಿಸಿರುವೆವು ? ಎಂದುಕೊಳ್ಳುತ್ತಾ ಮನುಷ್ಯನು ಆಶ್ಚರ್ಯ ಪಡುತ್ತಿರುವನು.

ವಿಶೇಷ:– ಮೇಲೆ ಹೇಳಿದ ಕರ್ಮಗಳನ್ನು ಮಾಡಿದರೇನೇ ಕಾಶಿಯು ಸಿಗತಕ್ಕದ್ದು. ಪಾಪಿಗಳಿಗೆ ಸಿಕ್ಕುವುದಿಲ್ಲ. ಪುಣ್ಯಮಾಡಿದವರಿಗೂ ಸಿಕ್ಕುವುದಿಲ್ಲ.

ಭಾಗ್ಯೈರ್ನೇಽಧಿಗತಾ ಹ್ಯನೇಕ ಜನುಷಾಂ ಸರ್ವಾಘವಿಧ್ವಂಸಿನೀ
ಸರ್ವಾಶ್ಚರ್ಯಮಯೀ ಮಯಾ ಶಿವಪುರೀ ಸಂಸಾರಸಿಂಧೋಸ್ತರೀ ।
ಲಬ್ಧಂ ತಜ್ಜನುಷಃ ಫಲಂ ಕುಲಮಲಂ ಚಕ್ರೇ ಪವತ್ರೀಕೃತಃ
ಸ್ವಾತ್ಮಾಚಾಪ್ಯಖಿಲಂ ಕೃತಂ ಕಿಮಪರಂ ಸರ್ವೋಽಪರಿಷ್ಟಾತ್ ಸ್ಥಿತಂ ||೪೧||

ಜೀವನ್ನರಃ ಪಶ್ಯತಿ ಭದ್ರಲಕ್ಷನೇವಂ ವದಂತೀತಿ ನ್ಮೃಷಾ ನ ಯಸ್ಮಾತ್ ।
ತಸ್ಮಾನ್ಮಯಾ ವೈ ವಪುಷೇದೃಶೇನ ಪ್ರಾಪ್ತಾಪಿ ಕಾಶೀ ಕ್ಷಣ ಭಂಗುರೇಣ

ಕಾಶ್ಯಾಂ ವಿಧಾತುಮಮರೈರಪಿ ದಿವ್ಯಭೂಮಾ
ಸತ್ತೀರ್ಥಲಿಂಗಗಣನಾರ್ಚನತೋ ನ ಶಕ್ಯಾ ।
ಯಾನೀಹ ಗುಪ್ತವಿವೃತಾನಿ ಪುರಾತನಾನಿ
ಸಿದ್ಧಾನಿ ಯೋಜಿತಕರಃ ಪ್ರಣಮಾಮಿ ತೇಭ್ಯಃ || ೪೩ ||

---

೪೧. ಅನೇಕ ಜನ್ಮಗಳಿಂದ ಮಾಡಿದ ಭಾಗ್ಯಗಳಿಂದ ಪಾಪನಾಶಕವೂ, ಆಶ್ಚರ್ಯಕರವೂ ಸಂಸಾರವೆಂಬ ಸಮುದ್ರಕ್ಕೆ ದೋಣಿಯೂ ಆದ ಕಾಶಿಯು ನನಗೆ ಸಿಕ್ಕಿತು. ಜನ್ಮವನ್ನು ಎತ್ತಿದುದಕ್ಕೆ ಸಾರ್ಥಕವಾಯಿತು. ನನ್ನಿಂದ ವಂಶವು ಅಲಂಕೃತವಾಯಿತು. ನನ್ನ ಆತ್ಮವು ಪವಿತ್ರವಾಯಿತು. ನಾನು ಎಲ್ಲವನ್ನೂ ಮಾಡಿದಂತೆಯೇ ಆಯಿತು. ಮತ್ತೇನಿದೆ ? ಎಲ್ಲಕ್ಕಿಂತಲೂ ಉತ್ತಮನಾದೆನು,

೪೨. ಮನುಷ್ಯನು ಬದುಕಿದ್ದರೆ ನೂರಾರು ಒಳ್ಳೆಯದನ್ನು ಹೊಂದ ಬಹುದು ಸುಳ್ಳಲ್ಲ. ಆದ್ದರಿಂದಲೇ ಕ್ಷಣಭಂಗುರವಾದ ಈ ದೇಹದಿಂದಲೇ ನಾನು ಕಾಶಿಯನ್ನು ಹೊಂದಿರುವುದು.

೪೩. ಈ ದಿವ್ಯ ಭೂಮಿಯಾದ ಕಾಶಿಯಲ್ಲಿ ದೇವತೆಗಳೂ ಕೂಡ ತೀರ್ಥಗಳನ್ನೂ ಲಿಂಗಗಳನ್ನೂ ಎಣಿಸಲು ಸಾಧ್ಯವಿಲ್ಲ. ಅವುಗಳನ್ನು ಪೂಜಿಸಲೂ ಸಾಧ್ಯವಿಲ್ಲ. ಆದ್ದರಿಂದ ಪ್ರಕಾಶವಾದ ಗುಟ್ಟಾದ ಯಾವ ತೀರ್ಥಗಳಿವೆಯೋ ಮತ್ತು ಅಂತಹ ಯಾವ ಸಿದ್ಧರಿರುವರೋ ಅವರೆಲ್ಲರಿಗೂ ಕೈಗಳನ್ನು ಜೋಡಿಸಿ ಕೊಂಡು ನಮಸ್ಕರಿಸುತ್ತೇನೆ.

ಕಿಂ ನೀತ್ಯಾ ದುರಿತಾತ್ಕೃತಾ ಕ್ತಿಮು ಮುದಾ ಪುಣ್ಯೈರಗಣ್ಯೈಃಕೃತೈಃ
ಕಿಂ ವಿದ್ಯಾಭ್ಯಸನಾನ್ಮದೇನ ಜಡತಾ ದೋಷಾದ್ವಿಷಾದೇನ ಕಿಂ ।
ಕಿಂ ಗರ್ವೇಣ ಘನೋದಯಾ ದಘಸತಾಪಾಯೇನ ಕಿಂ ಭೋಃ ಜನಾಃ
ಸ್ನಾತ್ವಾ ಶ್ರೀ ಮಣಿಕರ್ಣಿಕಾ ಪಯಸಿ ಚೇದ್ವಿಶ್ವೇಶ್ವರೋ ದೃಶ್ಯತೇ॥ ೪೪ ॥

ಅಲ್ಪಸ್ಫೀತಿ ನಿರಾಮಯತ್ವತನುತಾ ಪ್ರವ್ಯಕ್ತಶಕ್ತ್ಯಾತ್ಮತಾ
ಪ್ರೋತ್ಸಾಹಾಢ್ಯ ಬಲೇನ ಕೇವಲ ಮನೋರಾಗದ್ವಿತೀಯೇನ ಯತ್ ।
ಅಪ್ರಾಪ್ಯಾಪಿ ಮನೋರಥೈರವಿಷಯಾಸ್ವಪ್ನಪ್ರವೃತ್ತೇರಪಿ
ಪ್ರಾಪ್ತಾ ಸಾಪಿ ಗದಾಧರಸ್ಯ ನಗರೀ ಸದ್ಯೋಽಪವರ್ಗಪ್ರದಾ ॥ ೪೫ ॥

---

೪೪. ಎಲೈ ಜನಗಳಿರಾ ! ಕಾಶಿಗೆ ಹೋಗಿ ಮಣಿಕರ್ಣಿಕೆಯ ತೀರ್ಥದಲ್ಲಿ ಸ್ನಾನಮಾಡಿ ವಿಶ್ವೇಶ್ವರನ ದರ್ಶನವನ್ನು ಮಾಡಿದವನಿಗೆ ನೀತಿಯಿಂದ ಹೊಂದ ಬೇಕಾದ ಅನುಕೂಲವು ಬೇಕಿಲ್ಲ. ತಾನು ಮಾಡಿದ ಪಾಪಗಳು ಏನೂ ಮಾಡ ಲಾರವು. ಸಂತೋಷದಿಂದ ಆಚರಿಸಿದ ಅನೇಕ ಪುಣ್ಯಗಳಿಂದಲೂ ಪ್ರಯೋಜನ ವಿಲ್ಲವು. ವಿದ್ಯಾಭ್ಯಾಸದಿಂದಲೂ ಅವನಿಗೆ ಪ್ರಯೋಜನವಿಲ್ಲ. ಮದವಾಗಲಿ, ದಡ್ಡತನವಾಗಲಿ, ಅವನನ್ನು ಉತ್ಕರ್ಷಾಕರ್ಷಗಳಿಗೆ ಗುರಿಮಾಡಲಾರವು. ದಾರಿದ್ರ್ಯವೂ ಏನೂ ಮಾಡಲಾರದು. ಇವೆಲ್ಲವನ್ನೂ ಮೀರಿಸಿ ಅವನಿಗೆ ಆ ತೀರ್ಥ ಸ್ನಾನವೂ, ಆ ವಿಶ್ವೇಶ್ವರನ ದರ್ಶನವೂ ಉತ್ತಮಗತಿಯನ್ನು ಕೊಡುತ್ತವೆ.

೪೫. ಬಡಕಲು ಬೊಜ್ಜು ರೋಗಗಳಿಲ್ಲದೆ, ಗಟ್ಟಿಯಾದ, ಶರೀರವಿದ್ದು ಇತರರು ಹೋಗೆಂದು ಹೇಳುತ್ತಿದ್ದರೂ ಯಾವುದೋ ಆಸೆಗೆ ಅಧೀನರಾಗಿ ಇರುವರು. ಕನಸ್ಸು ಮನಸ್ಸುಗಳಲ್ಲಿಯೂ ಹೊಂದಲಾಗದ, ಮೋಕ್ಷಪ್ರದವಾದ, ಗದಾಧರನ ಪಟ್ಟಣವಾದ, ಗಯೆಯನ್ನು ಪುಣ್ಯವಿಶೇಷದಿಂದ ನಾನು ಹೊಂದಿದ್ದೇನೆ.

ಮನ್ಯೇ ನಾತ್ಮಕೃತಿರ್ನಪೂರ್ವಪುರುಷಪ್ರಾಪ್ತೇರ್ಬಲಂ ಚಾಕೃತ
ನ್ನಾಪೀದಂ ಸ್ವಜನಪ್ರಮಾಣಮಬಲಂ ನಿಸ್ವಾಪತಾಪಾದಿಕಂ ।
ಯಾ ದುಷ್ಪ್ರಾಪಗಯಾಪ್ರಯಾಗಯಮುನಾಕಾಶೀಷು ಪರ್ವಾಗಮಾತ್
ಪ್ರಾಪ್ತಿಸ್ತತ್ರ ಮಹಾಫಲೋ ವಿಜಯತೇ ಶ್ರೀ ಶಾರದಾನುಗ್ರಹ ॥ ೪೬ ॥

ಯಃ ಶ್ರಾದ್ಧ ಸಮಯೇ ದೂರಾನ್ ಸ್ಮೃತೋಽಪಿ ಪಿತೃಮುಕ್ತಿದಃ ।
ತಂ ಗಯಾಯಾಂ ಸ್ಥಿತಂ ಸಾಕ್ಷಾತ್ ನಮಾಮಿ ಶ್ರೀಗದಾಧರಂ ॥ ೪೭ ॥

ಪಂಥಾನಂ ಸಮತೀತ್ಯ ದುಸ್ತರಮಿಮಂ ದೂರಾದ್ದವೀಯಸ್ತರಂ ।
ಕ್ಷುದ್ರವ್ಯಾಘ್ರತರಕ್ಷು ಕಂಟಕಫಣಿಪ್ರತ್ಯರ್ಥಿಭಿಃ ಸಂಕುಲಂ ।
ಆಗತ್ಯಪ್ರಥಮನ್ವಯಂ ಕೃಪಣವಾಗ್ಯಾಚೇಜ್ಜನಃ ಕಂ ಪರಂ
ಶ್ರೀಮದ್ದ್ವಾರಿಗದಾಧರ ಪ್ರತಿದಿನಂ ತ್ವಾಂ ದ್ರಷ್ಟು ಮುತ್ಕಂಠತೇ ॥ ೪೮ ॥

---

೪೬. ನನಗೆ ಬಂದಿರತಕ್ಕ ಶಾರದಾನುಗ್ರಹರೂಪವಾದ ಮಹಾಫಲವು ಗಯೆ, ಪ್ರಯಾಗ, ಯಮುನೆ, ಕಾಶಿಗಳಲ್ಲಿ ಪರ್ವದಿನದಲ್ಲಿ ಮಾಡಿದ ತೀರ್ಥ ಸೇವನೆಯ ಫಲವೇ ಹೊರತು ಅದು ನನ್ನ ಕೆಲಸದಿಂದ ಬಂದುದಲ್ಲ. ನನ್ನ ಹಿಂದಿನವರೂ ಮಾಡಿದ ಪುಣ್ಯಫಲವೂ ಅಲ್ಲ. ನನ್ನ ಹತ್ತಿರದ ಬಂಧುಗಳು ಮಾಡಿದ ಕೆಲಸವೂ ಅಲ್ಲ. ನಿದ್ದೆಗೆಟ್ಟು ಮಾಡಿರತಕ್ಕ ತಪಸ್ಸಿನ ಫಲವೂ ಅಲ್ಲ.

೪೭. ಯಾವ ನಗರದಲ್ಲಿರುವ ಸ್ವಾಮಿಯನ್ನು ದೂರದಿಂದಲೇ ಶ್ರಾದ್ಧ ಕಾಲದಲ್ಲಿ ಸ್ಮರಿಸಿದರೆ ಪಿತೃಗಳಿಗೆ ಮುಕ್ತಿಯುಂಟಾಗುವುದೋ ಅಂತಹ ಗಯೆಯಲ್ಲಿ ರುವ ಗದಾಧರನನ್ನು ನಮಸ್ಕರಿಸುತ್ತೇನೆ.

೪೮. ಎಲೈ ಗದಾಧರನೇ! ಬಹುದೂರವಾದ, ನಡೆಯಲು ಅಸಾಧ್ಯವಾದ ಕ್ರೂರವಾದ ಹುಲಿ ಕರಡಿ ಕಲ್ಲು ಮುಳ್ಳು ಹಾವು ಕಳ್ಳರು ವೈರಿಗಳು ಇವರಿಂದ ಕೂಡಿದ, ಕಷ್ಟವಾದ ದಾರಿಯಲ್ಲಿ ನಿನ್ನವರೆಗೂ ಬಂದು ಜನವು ದೀನವಾದ ವಾಣಿ ಯಿಂದ ಉತ್ತಮೋತ್ತಮನಾದ ನಿನ್ನನ್ನು ಹೊರತು ಯಾರನ್ನು ತಾನೇ ಯೋಚಿಸಬೇಕು ? ಎಲೈ ಗದಾಧರನೆ ! ನಾನು ನಿನ್ನನ್ನೇ ಪ್ರತಿದಿನವೂ ಆಸೆ ಪಟ್ಟು ಯಾಚಿಸುತ್ತಿರುತ್ತೇನೆ. ಅಲ್ಲದೆ ನೋಡಲು ಕೂಡ ಆಸೆ ಪಡುತ್ತಲಿದ್ದೇನೆ.

ಸರ್ವಾತ್ಮನ್ನಿಜ ದರ್ಶನೇನ ಚ ಗಯಾಶ್ರಾದ್ಧೇನ ವೈ ದೈವತಾ
ಪ್ರೀಣನ್ವಿಶ್ವಮನೀಹವತ್ಕಥಮಿಹೌದಾಸೀನ್ಯ ಮಾಲಂಬಸೇ ।
ಕಿಂ ತೇ ಸರ್ವದ ನಿರ್ದಯತ್ವಮಧುನಾ ಕಿಂ ಪ್ರಭುತ್ವಂ ಕಲೇಃ ।
ಕಿಂ ವಾ ಸತ್ವನಿರೀಕ್ಷಣಂ ನೃಷು ಚಿರಂ ಕಿಂ ವಾಸ್ಯಸೇವಾರುಚಿಃ ॥ ೪೯ ॥

ಗದಾಧರ ಮಯಾ ಶ್ರಾದ್ಧಂ ಯಚ್ಚೀರ್ಣಂ ತ್ವತ್ಪ್ರಸಾದತಃ ।
ಅನುಜಾನೀಹಿ ಮಾಂ ದೇವ ಗಮನಾಯ ಗೃಹಂ ಪ್ರತಿ ॥ ೫೦ ॥

ಏವಂ ಹಿ ದೇವತಾನಾಂ ಚ ಸ್ತೋತ್ರಂ ಚ ಭುವಿ ದುರ್ಲಭಂ ।
ಜಪನ್ ಹಿ ಮುಚ್ಯತೇ ಪಾಪಾತ್ ಆಜನ್ಮಮರಣಾಂತಿಕಾತ್ ॥ ೫೧ ॥

ಚತುರ್ಣಾಂ ಸ್ತೋತ್ರಯುಕ್ತಾನಾಂ ದೇವಾನಾಂ ತಚ್ಚ ನಾರದ ।
ಯೇ ಪಠಿಷ್ಯಂತಿ ವೈ ಸ್ತೋತ್ರಂ ತೇಷಾಂ ಸ್ವರ್ಗಾರ್ಥದಾಯಕಂ ॥ ೫೨ ॥

---

೪೯. ಎಲೈ ಸರ್ವಾತ್ಮಕನಾದ ಗದಾಧರನೇ ! ನೀನು ವಿಶ್ವಾತ್ಮಕನು ನಿನ್ನ ದರ್ಶನದಿಂದಲೂ ಗಯಾ ಶ್ರಾದ್ಧದಿಂದಲೂ, ದೇವತೆಗಳನ್ನೂ, ಪ್ರಪಂಚವನ್ನೂ ಸಂತೋಷಪಡಿಸುತ್ತಾ ಆಸೆಯಿಲ್ಲದಿರುವವನಂತೆ ಏತಕ್ಕೋಸ್ಕರ ಇಲ್ಲಿ ಉದಾಸೀನತೆಯನ್ನು ಹೊಂದಿದ್ದೀಯೆ ? ಎಲೈ ಕೇಳಿದ್ದೆಲ್ಲವನ್ನೂ ಕೊಡುವವನೇ!. ಈಗ ನೀನು ದಯವಿಲ್ಲದವನಾಗಿರುವೆಯಾ ? ಅಥವಾ ಕಲಿಯ ಯಾಜಮಾನ್ಯವು ಹೆಚ್ಚಿ ನಿನ್ನ ಮೇಲೆಯೂ ಪ್ರಸರಿಸುವುದೇ ? ಇಲ್ಲವೇ ಮನುಷ್ಯರ ಬಲವನ್ನು ನೋಡುತ್ತಿರುವೆಯಾ? ಇಲ್ಲವೇ ನನ್ನಿಂದ ಸೇವೆ ತೆಗೆದುಕೊಳ್ಳುವುದರಲ್ಲಿ ಆಸೆಯೋ? ಹೇಳು-

೫೦. ಎಲೈ ಗದಾಧರನೇ ! ನಿನ್ನ ಅನುಗ್ರಹದಿಂದ ಗಯಾ ಶ್ರಾದ್ಧವನ್ನು ಮಾಡಿದೆನು. ಸ್ವಾಮಿ ನಾನು ಮನೆಗೆ ಹೋಗಬೇಕು. ಅಪ್ಪಣೆ ಕೊಡು.

೫೧. ದೇವತೆಗಳಿಗೂ ದುರ್ಲಭವಾದ ಸ್ತೋತ್ರದಿಂದ ಈ ರೀತಿಯಾಗಿ ಸ್ತುತಿಸುತ್ತಾ ಇರುವವನು ತನ್ನ ಜನ್ಮ ಪೂರ್ತಿಯಾಗಿ ಮಾಡಿದ ಪಾಪವನ್ನು ಕಳೆದುಕೊಳ್ಳುತ್ತಾನೆ.

೫೨. ಬ್ರಹ್ಮ, ವಿಷ್ಣು, ಶಿವ, ಗದಾಧರ ಈ ನಾಲ್ಕು ಜನರ ಸ್ತೋತ್ರದಿಂದ ಕೂಡಿದ ಈ ಸ್ತೋತ್ರವನ್ನು ಪಠಿಸುವವರು ಸ್ವರ್ಗಮೋಕ್ಷಗಳನ್ನು ಹೊಂದುತ್ತಾರೆ.

ಶ್ರಾದ್ಧಕಾಲೇ ಪಠೇನ್ನಿತ್ಯಂ ಸ್ನಾನಕಾಲೇ ತು ಯಃ ಪಠೇತ್ ।
ಸರ್ವತೀರ್ಥಸಮಂ ಸ್ನಾನಂ ಶ್ರವಣಾತ್ಪಠನಾಜ್ಜಪಾತ್ || ೫೩ ||

ಪ್ರಯಾಗಸ್ಯ ಚ ಗಂಗಾಯಾ ಯಮುನಾಯಾಃ ಸ್ತುತೇರ್ದ್ವಿಜ ।
ಶ್ರವಣೇನ ವಿನಶ್ಯಂತಿ ದೋಷಾಶ್ಚೈವ ತು ಕರ್ಮಜಾಃ || ೫೪ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ
ಸಂವಾದೇ ಗಂಗಾ ಪ್ರಯಾಗ ಯಮುನಾ ಸ್ತುತಿರ್ನಾಮ
ತ್ರಯೋವಿಂಶೋಽಧ್ಯಾಯಃ

---

೫೩. ಇದನ್ನು ಶ್ರಾದ್ಧಕಾಲದಲ್ಲಿ ಹೇಳಬೇಕು. ಸ್ನಾನ ಕಾಲದಲ್ಲಿ ಹೇಳಿವರೆ ಕೇಳಿದರೆ ಅಥವಾ ಜಪಿಸಿದರೆ ಸರ್ವತೀರ್ಥಗಳಲ್ಲಿಯೂ ಸ್ನಾನಮಾಡಿದಂತೆ ಆಗುತ್ತದೆ.

೫೪. ಪ್ರಯಾಗ, ಗಂಗೆ, ಯಮುನೆಗಳ ಸ್ತುತಿಗಳನ್ನು ಕೇಳುವುದರಿಂದ ಪಾಪಗಳು ನಾಶವಾಗುತ್ತವೆ. ಮತ್ತು ಕರ್ಮದಿಂದ ಬಂದ ದೋಷಗಳು ನಾಶವಾಗುತ್ತವೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದ
ಮಹಾದೇವರ ಸಂವಾದದಲ್ಲಿ ಪ್ರಯಾಗ ಗಂಗೆ ಯಮುನೆಗಳ ಸ್ತುತಿ
ಎಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಚತುರ್ವಿಂಶೋಽಧ್ಯಾಯಃ ॥



॥ ಶಿವ ಉವಾಚ ॥

ಶೃಣು ನಾರದ ವಕ್ಷ್ಯಾಮಿ ಮಾಹಾತ್ಮ್ಯಂ ತುಳಸೀಭವಂ ।
ಯಚ್ಛ್ರುತ್ವಾ ಮುಚ್ಯತೇ ಪಾಪಾತ್ ಆಜನ್ಮಮರಣಾಂತಿಕಾತ್ ॥ ೧ ॥

ಪತ್ರಂ ಪುಷ್ಪಂ ಫಲಂ ಮೂಲಂ ಶಾಖಾ ತ್ವಕ್ ಸ್ಕಂಧಸಂಜ್ಞಿತಂ ।
ತುಲಸೀಸಂಭವಂ ಸರ್ವಂ ಪಾವನಂ ಮೃತ್ತಿಕಾದಿಕಂ ॥ ೨ ॥

ಶರೀರಂ ದಹ್ಯತೇ ಯೇಷಾಂ ತುಳಸೀ ಕಾಷ್ಠವಹ್ನಿನಾ ।
ನ ತೇಷಾಂ ಪುನರಾವೃತ್ತಿರ್ವಿಷ್ಣುಲೋಕಾತ್ಕಥಂಚನ ॥ ೩ ॥

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಶಿವನು ಹೇಳಿದನು—ಎಲೈ ನಾರದನೇ ! ತುಲಸಿಯ ಮಹಿಮೆಯನ್ನು ಹೇಳುತ್ತೇನೆ ಕೇಳು. ಅದನ್ನು ಕೇಳಿದರೆ ಹುಟ್ಟಿದ ಮೊದಲು ಸಾಯುವವರೆಗೂ ಮಾಡಿದ ಪಾಪಗಳೆಲ್ಲವೂ ಹೋಗುತ್ತವೆ.

೨. ಆ ತುಳಸಿಯ ಎಲೆ, ಹೂ, ತಾಳು, ಬೇರು, ಕಡ್ಡಿ, ಸಿಪ್ಪೆ, ಕೊಂಬೆ ಅದರ ಬುಡದ ಮಣ್ಣು, ಇವೆಲ್ಲವೂ ಪವಿತ್ರವಾದುವುಗಳು.

೩. ತುಳಸಿಯ ಕಡ್ಡಿಯಿಂದ ಯಾವನ ದೇಹವನ್ನು ಸುಡುತ್ತಾರೆಯೋ ಅವನು ವೈಕುಂಠವನ್ನು ಹೊಂದುತ್ತಾನೆ. ಮತ್ತೆ ಹಿಂತಿರುಗುವುದಿಲ್ಲ.

ಗ್ರಸ್ತೋ ಯದಿ ಮಹಾಪಾಪೈರಗಮ್ಯಾಗಮನಾದಿಕೈಃ ।
ಮೃತಶ್ಶುದ್ಧ್ಯತಿ ದೇಹೇನ ತುಲಸೀಕಾಷ್ಠವಹ್ನಿನಾ ॥ ೪ ॥

ದತ್ವಾ ಚ ತುಲಸೀಕಾಷ್ಠಂ ಸರ್ವಾಂಗೇಷು ಮೃತಸ್ಯ ವೈ ।
ಪಶ್ಚಾದ್ಯಃ ಕುರುತೇ ದಾಹಂ ಸೋಽಪಿ ಪಾಪಾತ್ಪ್ರಮುಚ್ಯತೇ ॥ ೫ ॥

ಮರಣೇ ಯಸ್ಯ ಸಂಪ್ರಾಪ್ತಂ ಕೀರ್ತನಂ ಸ್ಮರಣಂ ಹರೇಃ ।
ತುಳಸೀ ದಾರುಣಾ ದಾಹೋ ನ ತಸ್ಯ ಪುನರಾಗತಿಃ ॥ ೬ ॥

ಯದ್ಯೇಕಂ ತುಳಸೀಕಾಷ್ಠಂ ಮಧ್ಯೇ ಕಾಷ್ಠಸ್ಯ ತಸ್ಯ ಹಿ ।
ದಾಹಕಾಲೇ ಭವೇನ್ಮುಕ್ತಿಃ ಕೋಟಿಪಾಪಯುತಸ್ಯ ಚ ॥ ೭ ॥

ಗಂಗಾಂಭಸಾಽಭಿಷೇಕೇಣ ಯಾಂತಿ ಪುಣ್ಯಾನಿ ಪುಣ್ಯತಾಂ ।
ತುಲಸೀ ಕಾಷ್ಠಮಿಶ್ರಾಣಿ ಯಾಂತಿ ದಾರೂಣಿ ಪುಣ್ಯತಾಂ ॥ ೮ ॥

---

೪. ಅಗಮ್ಯಾಗಮನವೇ ಮುಂತಾದ ಪಾಪಗಳಿಂದ ಕೂಡಿಕೊಂಡಿದ್ದರೂ ಕೂಡ ಸತ್ತವನನ್ನು ತುಳಸಿಯ ಕಡ್ಡಿಯ ಬೆಂಕಿಯಿಂದ ಸುಟ್ಟರೆ ಅವನು ಶುದ್ಧನಾಗುತ್ತಾನೆ.

೫. ಸತ್ತವನ ಅಂಗಾಗಗಳಿಗೆಲ್ಲಾ ಯಾವನು ತುಳಸಿಯ ಕಡ್ಡಿಯನ್ನು ಕಟ್ಟಿ ಅನಂತರದಲ್ಲಿ ಸುಡುತ್ತಾನೆಯೋ ಆ ಕಡ್ಡಿಯನ್ನು ಕಟ್ಟಿದವನೂ ಪಾಪದಿಂದ ಮುಕ್ತನಾಗುತ್ತಾನೆ.

೬. ಮರಣ ಕಾಲದಲ್ಲಿ ಯಾವನು ಹರಿಯ ಕೀರ್ತನವನ್ನೂ ಸ್ಮರಣೆಯನ್ನೂ ಮಾಡುತ್ತಾನೆಯೋ ತುಳಸಿಯ ಕಡ್ಡಿಯಿಂದ ಸುಡಿಸಿಕೊಳ್ಳುತ್ತಾನೆಯೋ ಅವನು ಮತ್ತೆ ಹುಟ್ಟುವುದಿಲ್ಲ.

೭. ಶವವನ್ನು ಸುಡಲು ಮಾಡಿರುವ ಚಿತೆಯ ಮಧ್ಯದಲ್ಲಿ ಒಂದು ತುಳಸಿ ಕಡ್ಡಿಯಿಟ್ಟು ಸುಟ್ಟರೂ ಅವನು ಕೋಟಿಪಾಪದಿಂದ ಕೂಡಿದ್ದರೂ ಮುಕ್ತನಾಗುತ್ತಾನೆ.

೮. ಗಂಗೆಯ ನೀರಿನಿಂದ ಸ್ನಾನಮಾಡಿದರೆ ಪುಣ್ಯಗಳೂ ಕೂಡ ಇನ್ನೂ ಹೆಚ್ಚು ಪುಣ್ಯಗಳಾಗುತ್ತವೆ. ಚಿತೆಯಲ್ಲಿ ತುಳಸಿಯ ಕಡ್ಡಿಯಿದ್ದರೆ ಆ ಉಳಿದ ಸೌದೆಗಳೆಲ್ಲವೂ ಪುಣ್ಯವುಳ್ಳ ಸೌದೆಗಳಾಗುತ್ತವೆ.

ತುಳಸೀಕಾಷ್ಠಸಂಮಿಶ್ರಾ ಯಾ ಸತ್ಪ್ರಜ್ವಲಿತಾ ಚಿತಾ ।
ದಹ್ಯಂತೇ ತಸ್ಯ ಪಾಪಾನಿ ಕಲ್ಪಕೋಟಿಕೃತಾನಿ ಚ ॥ ೯ ॥

ದಹ್ಯಮಾನಂ ನರಂ ದೃಷ್ಟ್ವಾ ತುಳಸೀಕಾಷ್ಠವಹ್ನಿನಾ ।
ನಯಂತಿ ತಂ ವಿಷ್ಣುದೂತಾ ನ ಚ ವೈ ಯಮಕಿಂಕರಾಃ ॥ ೧೦ ॥

ಜನ್ಮಕೋಟಿಸಹಸ್ರೈಸ್ತು ಮುಕ್ತೋ ಯಾತಿ ಜನಾರ್ದನಂ ।
ದಹ್ಯಂತೇ ಯೇ ನರಾ ಲೋಕೇ ತುಳಸೀಕಾಷ್ಠವಹ್ನಿನಾ ॥ ೧೧ ॥

ತಾನ್ವಿಮಾನಸ್ಥಿತಾನ್ದೇವಾಃ ಕ್ಷಿಪಂತಿ ಕುಸುಮಾಂಜಲಿಂ ।
ನೃತ್ಯಂತ್ಯಪ್ಸರಸಸ್ಸರ್ವಾ ಗೀತಂ ಗಾಯಂತಿ ಗಾಯಕಾಃ ॥ ೧೨ ॥

ಜಾಯತೇ ವೀಕ್ಷ್ಯ ತಂ ವಿಷ್ಣುಃ ಸಂತುಷ್ಟಶ್ಶಂಭುನಾ ಸಹ ।
ಗೃಹೀತ್ವಾ ತಂ ಕರೇ ಶೌರಿಃ ಗೃಹಂ ನೀತ್ವಾಽಸ್ಯ ಚಾಽಗ್ರತಃ ॥ ೧೩ ॥

---

೯. ತುಳಸಿಯ ಕಡ್ಡಿಯನ್ನು ಹಾಕಿ ಚಿತೆಗೆ ಬೆಂಕಿ ಹಚ್ಚಿದರೆ ಆ ಮೃತನ ಕೋಟಿಕಲ್ಪಕೃತ ಪಾಪಗಳೆಲ್ಲವೂ ನಾಶವಾಗುತ್ತವೆ.

೧೦. ತುಳಸಿಯ ಕಡ್ಡಿಯಿಂದ ಮೃತನನ್ನು ಸುಡುತ್ತಿರುವುದನ್ನು ನೋಡಿದರೇನೇ ಅವನನ್ನು ವಿಷ್ಣುದೂತರು ಕರೆದುಕೊಂಡು ಹೋಗುತ್ತಾರೆ. ಯಮಕಿಂಕರರು ಅವನ ಬಳಿಗೆ ಬರುವುದೇ ಇಲ್ಲ.

೧೧. ಲೋಕದಲ್ಲಿ ತುಳಸಿಯ ಕಡ್ಡಿಯಿಂದ ಸುಡಿಸಿಕೊಂಡವನು ಕೋಟಿ ಜನ್ಮಗಳ ಪಾಪಗಳನ್ನು ಕಳೆದುಕೊಂಡು ಜನಾರ್ದನನ್ನು ಹೊಂದುತ್ತಾನೆ.

೧೨. ಅವರು ವಿಮಾನದಲ್ಲಿ ಕುಳಿತು ಹೋಗುತ್ತಿರುವಾಗ ದೇವತೆಗಳು ಅವರ ಮೇಲೆ ಹೂಮಳೆಯನ್ನು ಕರೆಯುತ್ತಾರೆ. ಅವರ ಸುತ್ತಲೂ ಅಪ್ಸರಸ್ತ್ರೀಯರು ಕುಣಿಯುತ್ತಾರೆ. ಗಂಧರ್ವರು ಹಾಡುತ್ತಾರೆ.

೧೩–೧೪. ಅಂತಹವನನ್ನು ನೋಡಿ ವಿಷ್ಣುವೂ, ಶಂಭುವೂ, ಸಂತೋಷಗೊಳ್ಳುತ್ತಾರೆ. ಅವನನ್ನು ವಿಷ್ಣುವು ಕೈಯಲ್ಲಿ ಹಿಡಿದುಕೊಂಡು ಮುಂದೆ ಬಿಟ್ಟುಕೊಂಡು ಮನೆಗೆ ಕರೆದುಕೊಂಡು ಹೋಗುತ್ತಾನೆ. ಮತ್ತು ದೇವತೆಗಳ

ಮಾರ್ಜಯೇತ್ಸರ್ವಪಾಪಾನಿ ಪಶ್ಯತಾಂ ತ್ರಿದಿವೌಕಸಾಂ ।
ಮಹೋತ್ಸವಂ ಕಾರಯಿತ್ವಾ ಜಯಶಬ್ದ ಪುರಸ್ಸರಂ ॥ ೧೪ ॥

ಜ್ವಲತೇ ಯತ್ರ ಚಾಜ್ಯೇನ ತುಳಸೀ ಕಾಷ್ಠ ಪಾವಕಃ ।
ಅಗ್ನ್ಯಾಗಾರೇ ಶ್ಮಶಾನೇ ವಾ ದ ಹ್ಯತೇ ಪಾತಕಂ ನೃಣಾಂ ॥ ೧೫ ॥

ಹೋಮಂ ಕುರ್ವಂತಿ ಯೇ ವಿಪ್ರಾಸ್ತುಲಸೀಕಾಷ್ಠವಹ್ನಿನಾ ।
ಸಿಕ್ಥೇ ಸಿಕ್ಥೇ ತಿಲೇ ವಾಽಪಿ ಅಗ್ನಿಷ್ಟೋಮಫಲಂ ಲಭೇತ್ ॥ ೧೬ ॥

ಯೋ ದದಾತಿ ಹರೇರ್ಧೂಪಂ ತುಲಸೀಕಾಷ್ಠ ಸಂಭವಂ ।
ಶತಕ್ರತುಸಮಂ ಪುಣ್ಯಂ ಲಭತೇ ಗೋಶತಂ ಫಲಂ ॥ ೧೭ ॥

ನೈವೇದ್ಯಂ ಪಚತೇ ಯಸ್ತು ತುಲಸೀಕಾಷ್ಠವಹ್ನಿನಾ ।
ಮೇರುತುಲ್ಯಂ ಭವೇದ್ದತ್ತಂ ತದನ್ನಂ ಕೇಶವಸ್ಯ ಹಿ ॥ ೧೮ ॥

---

ಎದುರಿಗೇನೇ ಅವನ ಪಾಪಗಳನ್ನೆಲ್ಲಾ ನಾಶಮಾಡುತ್ತಾನೆ. ಜಯ ಜಯ ಎಂದು ಕೂಗುತ್ತಾ ಉತ್ಸವವನ್ನು ಮಾಡಿಸುತ್ತಾನೆ.

೧೫. ತುಳಸಿಯ ಕಡ್ಡಿಯಿಂದ ಬೆಂಕಿಯನ್ನು ಹತ್ತಿಸಿ ಮನೆಯಲ್ಲಾಗಲೀ, ಸ್ಮಶಾನದಲ್ಲಿಯಾಗಲಿ, ತುಪ್ಪವನ್ನು ಹಾಕಿ ಉರಿಸಿದರೆ (ಹೋಮ ಮಾಡಿದರೆ) ಆ ಮನುಷ್ಯನ ಪಾಪವೆಲ್ಲವೂ ಹೋಗುತ್ತವೆ.

೧೬. ಯಾರು ತುಳಸಿಯ ಕಡ್ಡಿಯ ಬೆಂಕಿಯಲ್ಲಿ ಹೋಮ ಮಾಡುತ್ತಾರೆಯೋ ಅವರು ಒಂದೊಂದು ಅಗುಳಿಗೂ ಎಳ್ಳಿನಲ್ಲಾದರೆ ಒಂದೊಂದು ಎಳ್ಳಿಗೂ ಅಗ್ನಿಷ್ಟೋಮದ ಫಲವನ್ನು ಹೊಂದುತ್ತಾರೆ.

೧೭. ಯಾವನು ತುಳಸೀ ಕಡ್ಡಿಯ ಬೆಂಕಿಯಲ್ಲಿ ಧೂಪವನ್ನು ಹರಿಗೆ ಹಾಕುತ್ತಾನೆಯೋ ಅವನು ನೂರು ಹಸುಗಳನ್ನು ದಾನಮಾಡಿದ ಪುಣ್ಯವನ್ನೂ ಹೊಂದುತ್ತಾನೆ.

೧೮. ತುಳಸಿಯ ಕಡ್ಡಿಯನ್ನು ಉರಿಹಾಕಿ ಅನ್ನವನ್ನು ಮಾಡಿ ಅದನ್ನು ಕೇಶವನಿಗೆ ನಿವೇದನ ಮಾಡಿದರೆ ಆ ಅನ್ನವು ಮೇರುಸಮಾನ ವೃದ್ಧಿಯಾಗಿ ಪರಿಣಮಿಸುವುದು.

ತುಲಸೀಪಾವಕೇನಾಽಥ ಯೋ ದೀಪಂ ಕುರುತೇ ಹರೇಃ ।
ದೀಪಲಕ್ಷಸಹಸ್ರಾಣಾಂ ಪುಣ್ಯಂ ಸ ಲಭತೇ ಫಲಂ ॥ ೧೯ ॥

ನ ತೇನ ಸದೃಶೋ ಲೋಕೇ ವೈಷ್ಣವೋ ಭುವಿ ದೃಶ್ಯತೇ ।
ಯಃ ಪ್ರಯಚ್ಛತಿ ಕೃಷ್ಣಸ್ಯ ತುಳಸೀಕಾಷ್ಠಚಂದನಂ ॥ ೨೦ ॥

ಸ ಜಾಯತೇ ಕೃಪಾಪಾತ್ರಂ ವಿಷ್ಣೋರ್ಬಾಡವ ಸತ್ತಮ ।
ತುಲಸೀದಾರುಜಾತೇನ ಚಂದನೇನ ಕಲೌ ಹರಿಂ ॥ ೨೧ ॥

ವಿಲಿಪ್ಯ ಭಕ್ತಿತೋ ನಿತ್ಯಂ ರಮತೇ ಹರಿಸನ್ನಿಧೌ ।
ತುಳಸೀಪಂಕಲಿಪ್ತಾಂಗಃ ಕುರುತೇ ವಿಷ್ಣುಪೂಜನಂ ॥ ೨೨ ॥

ಪೂಜಾಶತಾದಿನೈಕಾಹ್ನಾ ಲಭತೇ ಗೋಶತಂ ಫಲಂ ।
ವಿಲೇಪಾರ್ಥೇ ತು ಕೃಷ್ಣಸ್ಯ ತುಲಸೀಕಾಷ್ಠಚಂದನಂ ॥ ೨೩ ॥

---

೧೯. ತುಳಿಸಿಯ ಬೆಂಕಿಯಿಂದ ಹರಿಗೆ ದೀಪಹಚ್ಚಿದರೆ ಲಕ್ಷದೀಪಗಳನ್ನು ಹಚ್ಚಿದ ಪುಣ್ಯಗಳನ್ನು ಅವನು ಹೊಂದುತ್ತಾನೆ.

೨೦. ಯಾವನು ತುಳಸಿಯ ಕಡ್ಡಿಯನ್ನು ತೇದು ಆ ಗಂಧವನ್ನು ಹರಿಗೆ ಕೊಡುತ್ತಾನೆಯೋ ಅವನಿಗಿಂತಲೂ ಹೆಚ್ಚಿನ ವೈಷ್ಣವನು ಲೋಕದಲ್ಲಿರುವುದಿಲ್ಲ.

೨೧. ಕಲಿಯುಗದಲ್ಲಿ ತುಳಸಿಯ ಗಂಧವನ್ನು ತೇದು ವಿಷ್ಣುವಿಗೆ ಹಚ್ಚಿದರೆ ಅವನು ವಿಷ್ಣುವಿಗೆ ಕೃಪಾಪಾತ್ರನಾಗುತ್ತಾನೆ.

೨೨–೨೬. ದೇವರಿಗೆ ಆ ತುಳಸೀ ಚಂದನವನ್ನು ಬಳಿದರೆ ಅವನು ಹರಿಯ ಸನ್ನಿಧಿಯಲ್ಲಿಯೇ ರಮಿಸುತ್ತಾನೆ. ಯಾವನು ತುಳಸಿಯ ಗಂಧವನ್ನು ಬಳಿದು ಕೊಂಡು ವಿಷ್ಣುವನ್ನು ಪೂಜಿಸುತ್ತಾನೆಯೋ ಅವನು ಒಂದು ಹೊತ್ತಿನ ಪೂಜೆಯಲ್ಲಿಯೇ ನೂರಾರು ಪೂಜೆಗಳ ಫಲವನ್ನು ಹೊಂದುತ್ತಾನೆ. ಅಲ್ಲದೆ ನೂರು ಗೋದಾನದ ಫಲವನ್ನೂ ಹೊಂದುತ್ತಾನೆ. ಕೃಷ್ಣನಿಗೆ ಬಳಿದು ಪೂಜಿಸುವುದಕ್ಕೋಸ್ಕರ ತುಳಸಿಯ ಗಂಧವು ಮನೆಯಲ್ಲಿದ್ದರೆ ಅದರ ಫಲವನು

ಮಂದಿರೇ ತಿಷ್ಠತೇ ಯಾವತ್ ತಾವತ್ಪುಣ್ಯಫಲಂ ಶೃಣು ।
ತಿಲಪ್ರಸ್ಥಾಷ್ಟಕಂ ದತ್ವಾ ಯತ್ಪುಣ್ಯಂ ಪ್ರಾಪ್ನುಯಾನ್ನರಃ ॥ ೨೪ ॥

ತತ್ಫಲಂ ಜಾಯತೇ ಪುಂಸಾಂ ಪ್ರಸಾದಾಚ್ಚಕ್ರಪಾಣಿನಃ ।
ಯೋ ದದಾತಿ ಪಿತೄಣಾಂ ತು ಪಿಂಡೇ ತುಳಸಿಸಂಭವಂ ॥ ೨೫ ॥

ದಳಂ ಸಂಜಾಯತೇ ತೃಪ್ತಿಃ ಪತ್ರೇ ಪತ್ರೇ ಶತಾಬ್ದಿಕಾ ।
ತುಲಸೀ ಮೂಲಮೃತ್ಸ್ನೈವ ಸ್ನಾನಂ ಕುರ್ಯಾದ್ವಿಶೇಷತಃ ॥ ೨೬ ॥

ತೇನ ತೀರ್ಥೇ ಕೃತಂ ಸ್ನಾನಂ ಯಾವಚ್ಚಾಂಗೇ ಚ ಮೃತ್ತಿಕಾ ।
ನವೀನ ಯಾ ಚ ಮಂಜರ್ಯಾ ಪೂಜನಂ ಚ ಕರೋತಿ ಯಃ ॥ ೨೭ ॥

ನಾನಾಪುಷ್ಪೈಃ ಕೃತಾ ಪೂಜಾ ಯಾವಚ್ಚಂದ್ರದಿವಾಕರೌ ।
ಯಸ್ಮಿನ್ಗೃಹೇ ಚ ತಿಷ್ಠೇತ ತುಳಸೀ ವೃಕ್ಷವಾಟಿಕಾ ॥ ೨೮ ॥

ದರ್ಶನಾತ್ ಸ್ಪರ್ಶನಾಚ್ಚೈವ ಬ್ರಹ್ಮಹತ್ಯಾದಿಪಾತಕಂ ।
ತತ್ಸರ್ವಂ ವಿಲಯಂ ಯಾತಿ ದರ್ಶನೇನೈವ ನಾರದ ॥ ೨೯ ॥

---

ಹೇಳುತ್ತೇನೆ ಕೇಳು. ಎಂಟು ಕೊಳಗ ಎಳ್ಳನ್ನು ದಾನಮಾಡಿದರೆ ಬರುವ ಪುಣ್ಯವನ್ನು ಆ ಕೃಷ್ಣನ ಅನುಗ್ರಹದಿಂದ ಮನುಷ್ಯನು ಹೊಂದುತ್ತಾನೆ. ಶ್ರಾದ್ಧ ಮಾಡುವಾಗ ಪಿಂಡದ ಮೇಲೆ ಯಾವನು ತುಳಸಿಯ ದಳವನ್ನು ಇಡುತ್ತಾನೆಯೋ ಆ ದಳದಿಂದ ಆ ಪಿತೃಗಳಿಗೆ ಒಂದೊಂದು ಎಲೆಗೂ ನೂರು ನೂರು ವರ್ಷಗಳ ವರೆಗೂ ತೃಪ್ತಿಯುಂಟಾಗುತ್ತದೆ. ತುಳಸಿಯ ಬುಡದ ಮಣ್ಣಿನಿಂದ ಸ್ನಾನವನ್ನು ಮಾಡಿದರೆ ಅತಿಶಯವುಂಟು.

೨೭–೨೯. ಮೈಯ್ಯಲ್ಲಿ ತುಳಸಿಯ ಬುಡದ ಮೃತ್ತಿಕೆಯನ್ನು ಬಳಿದು ಕೊಂಡು ಸ್ನಾನಮಾಡಿದರೆ ತೀರ್ಥಸ್ನಾನಮಾಡಿದ ಫಲವು ಬರುತ್ತದೆ. ಯಾವನು ಹೊಸದಾಗಿ ತುಳಸಿಯ ಹೂಗಳಿರುವ ಗೊಂಚಲನ್ನು ತಂದು ಪೂಜೆಯನ್ನು ಮಾಡುತ್ತಾನೆಯೋ ಅವನು ಚಂದ್ರಸೂರ್ಯರಿರುವವರೆಗೂ ಬಗೆಬಗೆಯ ಪುಷ್ಪಗಳಿಂದ ಪೂಜೆಮಾಡಿದ ಫಲವನ್ನು ಹೊಂದುತ್ತಾನೆ. ಯಾವ ಮನೆಯಲ್ಲಿ ತುಳಸಿಯ ತೋಟವಿರುವುದೋ ಅದನ್ನು ನೋಡುವುದರಿಂದಲೂ ಮುಟ್ಟು ವುದರಿಂದಲೂ ಬ್ರಹ್ಮಹತ್ಯಾದಿಪಾಪಗಳು ಹೋಗುತ್ತವೆ. ಎಲೈ ನಾರದನೇ ! ಇದು ನಿಶ್ಚಯ.

|| ಮಹಾದೇವ ಉವಾಚ ||

ಅಥಾऽನ್ಯತ್ರೇ ಪ್ರವಕ್ಷ್ಯಾಮಿ ಶೃಣುಷ್ವೈಕಾಗ್ರಮಾನಸಃ |
ನ ಕಸ್ಯಾಪೀಹ ಕಥಿತಂ ಶೃಣು ದೇವರ್ಷಿ ಸತ್ತಮ || ೩೦ ||

ಯತ್ರ ಯತ್ರ ಗೃಹೇ ಗ್ರಾಮೇ ವನೇ ವಾ ತುಳಸೀ ಭವೇತ್ |
ತತ್ರ ತತ್ರ ಜಗತ್ಸ್ವಾಮೀ ಪ್ರೀತಾತ್ಮಾ ಚ ವಸೇದ್ಧರಿಃ || ೩೧ ||

ಗ್ರಹೇ ತಸ್ಮಿನ್ನ ದಾರಿದ್ರ್ಯಂ ನಾऽಯೋಗೋ ಬಂಧು ಸಂಭವಃ |
ನ ದುಃಖಂ ನ ಭಯಂ ರೋಗಾಃ ತುಲಸೀ ಯತ್ರ ತಿಷ್ಠತಿ || ೩೨ ||

ಸರ್ವತ್ರ ತುಲಸೀ ಪುಣ್ಯಾ ಪುಣ್ಯಕ್ಷೇತ್ರೇ ವಿಶೇಷತಃ |
ಸನ್ನಿಧೌ ತಸ್ಯ ದೇವಸ್ಯ ರೋಪಣಾತೃಥಿವೀತಲೇ || ೩೩ ||

ತೇಷಾಂ ವಿಷ್ಣುಪದಂ ನಿತ್ಯಂ ತುಲಸ್ಯಾರೋಪಣೇ ಕೃತೇ |
ಉತ್ಪಾತಾನ್ದಾರುಣಾನ್ರೋಗಾ ದುರ್ನಿಮಿತ್ತಾನ್ಯನೇಕಶಃ || ೩೪ ||

ತುಲಸ್ಯಾऽಭ್ಯರ್ಚಿತೋ ಭಕ್ತ್ಯಾ ಹಂತಿ ಶಾಂತಿಕರೋ ಹರಿಃ |
ತುಲಸೀಗಂಧಮಾಘ್ರಾಯ ಯತ್ರ ಗಚ್ಛತಿ ಮಾರುತಃ || ೩೫ ||

---

೩೦. ಎಲೈ ನಾರದನೇ! ಮತ್ತೊಂದು ವಿಷಯವನ್ನು ಹೇಳುತ್ತೇನೆ. ಒಂದೇ ಮನಸ್ಸಿನಿಂದ ಕೇಳು. ಇದನ್ನು ಮತ್ತಾರಿಗೂ ಹೇಳಿಯೇ ಇಲ್ಲ.

೩೧. ಯಾವ ಮನೆಯಲ್ಲಾಗಲೀ ಯಾವ ಊರಿನಲ್ಲಾಗಲಿ ಕಾಡಿನಲ್ಲಿ ಆಗಲಿ ತುಲಸಿಯ ವನವಿರುವುದೋ ಅಲ್ಲೆಲ್ಲಾ ಜಗತ್ತಿಗೆ ಸ್ವಾಮಿಯಾದ ಹರಿಯು ಸಂತೋಷದಿಂದಿರುವನು.

೩೨. ತುಳಸಿಯು ಇರುವ ಮನೆಯಲ್ಲಿ ದಾರಿದ್ರ್ಯವಿರುವುದಿಲ್ಲ. ಭಯವೂ ರೋಗವೂ ಇರುವುದಿಲ್ಲ.

೩೩–೪೨. ತುಳಸಿಯು ಎಲ್ಲೆಲ್ಲಿದ್ದರೂ ಪುಣ್ಯವೇ. ಪುಣ್ಯಕ್ಷೇತ್ರಗಳಲ್ಲಿದ್ದರೆ ಹೆಚ್ಚು ಪುಣ್ಯವು. ದೇವರಿರುವ ಜಾಗದಲ್ಲಿ ಆ ತುಳಸಿಯನ್ನು ಬೆಳೆಸಿದರೆ ಅವರಿಗೆ ವೈಕುಂಠವು ದೊರೆಯುತ್ತದೆ. ತುಳಸಿಯನ್ನು ಭಕ್ತಿಯಿಂದ ಪೂಜಿಸಿದರೆ ಶಾಂತಿಯನ್ನುಂಟುಮಾಡುವ ಹರಿಯು ಕ್ರೂರವಾದ ಉತ್ಪಾತ (ಕೆಡಕು) ಗಳನ್ನೂ ರೋಗಗಳನ್ನೂ ಅಪಶಕುನಗಳನ್ನೂ ನಾಶಮಾಡುತ್ತಾನೆ. ತುಳಸಿಯ ಗಂಧವನ್ನು

ದಿಶೋ ದಶ ಚ ತಾಃ ಪೂತಾಃ ಭೂತಗ್ರಾಮಶ್ಚತುರ್ವಿಧಃ ।
ಯಸ್ಮಿನ್ಗೃಹೇ ಮುನಿಶ್ರೇಷ್ಠ ತುಲಸೀಮೂಲಮೃತ್ತಿಕಾ || ೩೬ ||

ಸರ್ವದಾ ತತ್ರ ತಿಷ್ಠಂತಿ ದೇವತಾಶ್ಚ ಶಿವೋ ಹರಿಃ ।
ತುಲಸೀವನಜಾ ಛಾಯಾ ಯತ್ರ ಯತ್ರ ಭವೇದ್ದ್ವಿಜ || ೩೭ ||

ತರ್ಪಣಂ ಕುರುತೇ ತತ್ರ ಪಿತೄಣಾಂ ತೃಪ್ತಿ ಹೇತವೇ ।
ತುಲಸೀನಿಕರೋ ಯತ್ರ ಪತತೇ ಯತ್ರ ನಾರದ || ೩೮ ||

ಪಿಂಡದಾನಾದಿಕಂ ತತ್ರ ಪಿತೄಣಾಂ ದತ್ತಮಕ್ಷಯಂ ।
ತಸ್ಯಾ ಮೂಲೇ ಸ್ಥಿತೋ ಬ್ರಹ್ಮಾ ಮಧ್ಯೇ ದೇವೋ ಜನಾರ್ದನಃ || ೩೯ ||

ಮಂಜರ್ಯಾಂ ವಸತೇ ರುದ್ರಃ ತುಲಸೀ ತೇನ ಪಾವನೀ ।
ಶಿವಾಲಯೇ ವಿಶೇಷೇಣ ರೋಪಯೇತ್ತುಲಸೀಂ ಯದಿ || ೪೦ ||

ಬೀಜಸಂಖ್ಯಾವಸೇತ್ಸ್ವರ್ಗೇ ಪ್ರತ್ಯೇಕಂ ಯುಗಸಂಖ್ಯಯಾ ।
ಉಮಯಾ ತ್ವಂ ಪುರಾ ದೇವಿ ಶಂಕರಾರ್ಥಂ ಹಿಮಾಲಯೇ || ೪೧ ||

---

ತೆಗೆದುಕೊಂಡು ಗಾಳಿಯು ಹೋದರೆ ಆ ಹತ್ತುದಿಕ್ಕುಗಳಲ್ಲಿಯೂ ಇರುವ ಪ್ರಾಣಿಗಳೆಲ್ಲವೂ ಪವಿತ್ರವಾಗುತ್ತವೆ. ಎಲೈ ಋಷಿಯೇ! ಯಾವ ಮನೆಯಲ್ಲಿ ಶ್ರೇಷ್ಠವಾದ ತುಳಸಿಯ ಮೃತ್ತಿಕೆಯು ಇರುವುದೋ ಅಲ್ಲಿ ದೇವತೆಗಳೂ ಶಿವನೂ ಯಾವಾಗಲೂ ಇರುವರು. ಎಲ್ಲೆಲ್ಲಿ ತುಳಸಿಯ ಗಿಡದ ನೆರಳಿರುವುದೋ ಅಲ್ಲಲ್ಲಿ ಪಿತೃಗಳಿಗೆ ತರ್ಪಣಮಾಡಿದರೆ ಅವರಿಗೆ ಬಹಳ ತೃಪ್ತಿಯುಂಟಾಗುವುದು. ತುಳಸಿಯ ವನವಿರುವ ಸ್ಥಳದಲ್ಲಿ ಶ್ರಾದ್ಧಮಾಡಿ ಆ ನೆರಳಲ್ಲಿ ಪಿಂಡವನ್ನು ಹಾಕಿದರೆ ಪಿತೃಗಳಿಗೆ ಅದು ಅಕ್ಷಯವಾಗುತ್ತದೆ. ತುಳಸಿಯ ಬುಡದಲ್ಲಿ ಬ್ರಹ್ಮನೂ ಮಧ್ಯದಲ್ಲಿ ವಿಷ್ಣುವೂ ತುದಿಯಲ್ಲಿ ರುದ್ರನೂ ಇರುವರು. ಆದುದರಿಂದಲೇ ತುಲಸಿಯು ಪವಿತ್ರವಾದುದು. ಶಿವಾಲಯದಲ್ಲಿ ಮುಖ್ಯವಾಗಿ ತುಲಸಿಯನ್ನು ಬೆಳೆಸಬೇಕು. ಹಾಗೆ ಬೆಳೆಸಿದರೆ ಅವುಗಳಲ್ಲಿ ಬಿಡುವ ಬೀಜದಷ್ಟು ಯುಗಗಳ ಕಾಲವವರೆಗೂ ಸ್ವರ್ಗದಲ್ಲಿ ಸುಖಿಸುವನು. ಎಲೈ ತುಲಸಿಯೆ! ನಿನ್ನನ್ನು ಪೂರ್ವದಲ್ಲಿ ಪಾರ್ವತಿಯು ಹಿಮವತ್ಪರ್ವತದಲ್ಲಿ ಶತವೃಕ್ಷವೆಂಬಲ್ಲಿ ಬೆಳೆಸಿದಳು. ಅಂತಹ

ರೋಪಿತಾ ಶತವೃಕ್ಷೇ ತು ತುಲಸೀಂ ಪ್ರಣತೋಽಸ್ಮ್ಯಹಂ ।
ಪಾರ್ವಣಾವಸರೇ ಯಸ್ತು ಶ್ರಾವಣೇ ಚಾಽಥರೋಪಯೇತ್ ॥ ೪೨ ॥

ಸಂಕ್ರಾಂತಿದಿವಸೇ ಚೈವ ತುಲಸೀ ಚಾಽತಿಪುಣ್ಯದಾ ।
ತುಲಸ್ಯಾ ಪೂಜಯೇನ್ನಿತ್ಯಂ ದರಿದ್ರೋಽಪೀಶ್ವರೋ ಭವೇತ್ ॥ ೪೩ ॥

ಸರ್ವಸಿದ್ಧಿಕರಾ ಮೂರ್ತಿಃ ಕೃಷ್ಣಕೀರ್ತಿಂ ದದಾತಿ ಚ ।
ಸಾಲಗ್ರಾಮಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ ॥ ೪೪ ॥

ತತ್ರ ಸ್ನಾನಂ ಚ ದಾನಂ ಚ ವಾರಾಣಸ್ಯಾಃ ಶತಾಧಿಕಂ ।
ಕುರುಕ್ಷೇತ್ರಂ ಪ್ರಯಾಗಂ ಚ ನೈಮಿಶಾರಣ್ಯಮೇವ ಚ ॥ ೪೫ ॥

ತಸ್ಯಕೋಟಿಗುಣಂ ಪುಣ್ಯಂ ಸಾಲಗ್ರಾಮ ಶಿಲಾರ್ಚನಾತ್ ।
ಶಾಲಗ್ರಾಮಮಯೀ ಮುದ್ರಾ ಸಂಸ್ಥಿತಾ ಯತ್ರ ಹಿ ಕ್ವಚಿತ್ ॥ ೪೬ ॥

---

ತುಳಸಿಯೇ ! ನಿನಗೆ ನಮಸ್ಕಾರಗಳು. ತುಲಸಿಯನ್ನು ಪರ್ವಕಾಲದಲ್ಲಿ ಹಾಕಿ ಬೆಳೆಸಬೇಕು. ಅಥವಾ ಶ್ರಾವಣದಲ್ಲಿ ಬೆಳೆಸಬೇಕು.

೪೩–೪೭. ಇಲ್ಲದಿದ್ದರೆ ಸಂಕ್ರಾಂತಿ ದಿನದಲ್ಲಿ ಹಾಕಿ ಬೆಳೆಸಬೇಕು. ಹಾಗೆ ಮಾಡಿದರೆ ಬಹು ಪುಣ್ಯವು ಬರುತ್ತದೆ. ಸ್ವಾಮಿಯನ್ನು ತುಳಸಿಯಿಂದ ಪೂಜಿಸುತ್ತಿದ್ದರೆ ದರಿದ್ರನು ಪುಣ್ಯವಂತನಾಗುವನು. ಅದು ಸರ್ವಸಿದ್ಧಿಯನ್ನು ಕೊಡುತ್ತದೆ. ಮತ್ತು ಕೃಷ್ಣನಿಗಿರುವ ಕೀರ್ತಿಯನ್ನು ಕೊಡುತ್ತದೆ. ಸಾಲಗ್ರಾಮವು ಇರುವೆಡೆಯಲ್ಲಿ ಹರಿಯು ಇರುತ್ತಾನೆ. ಅಲ್ಲಿ ಮಾಡುವ ಸ್ನಾನದಾನಗಳು ಕಾಶಿಯಲ್ಲಿ ಮಾಡಿದುದಕ್ಕಿಂತ ನೂರರಷ್ಟು ಹೆಚ್ಚು ಫಲವನ್ನು ಕೊಡುತ್ತವೆ. ಆ ತುಳಸಿಯಿಂದ ಸಾಲಗ್ರಾಮವನ್ನು ಪೂಜಿಸುವುದರಿಂದ ಕುರುಕ್ಷೇತ್ರ, ಪ್ರಯಾಗ ನೈಮಿಶಾರಣ್ಯಗಳಲ್ಲಿ ಮಾಡಿದಪೂಜೆಗಿಂತ ಕೋಟಿಯಷ್ಟು ಹೆಚ್ಚು ಫಲಕೊಡುತ್ತದೆ. ಸಾಲಗ್ರಾಮದ ಶಿಲೆ ಇರುವಲ್ಲಿ ದಾನ ಮೊದಲಾದವನ್ನು ಮಾಡಿದರೆ

ವಾರಾಣಸ್ಯಾಂ ಚ ಯತ್ಪುಣ್ಯಂ ಸರ್ವಂ ತತ್ರೈವ ತದ್ಭವೇತ್ ।
ಬ್ರಹ್ಮಹತ್ಯಾದಿಕಂ ಪಾಪಂ ಯತ್ಕಿಂಚಿತ್ಕುರುತೇ ನರಃ ॥
ತತ್ಸರ್ವಂ ನಾಶಯೇದಾಶು ಶಾಲಗ್ರಾಮಶಿಲಾರ್ಚನಾತ್ ॥ ೪೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ
ಸಂವಾದೇ ತುಳಸೀಕಾಷ್ಠ ಸಾಲಗ್ರಾಮ ಮಾಹಾತ್ಮ್ಯಂ
ನಾಮ ಚತುರ್ವಿಂಶೋಽಧ್ಯಾಯಃ

---

ಕಾಶಿಯಲ್ಲಿ ಮಾಡಿದರೆ ಯಾವ ಪುಣ್ಯವು ಬರುವುದೋ ಅದರಂತೆಯೇ ಅಲ್ಲಿ ಪುಣ್ಯವು ಬರುತ್ತದೆ. ಬ್ರಹ್ಮಹತ್ಯಾದಿ ಪಾಪಗಳನ್ನು ಮಾಡಿದ್ದರೂ ಆತನ ಆ ಪಾಪವೆಲ್ಲವನ್ನೂ ಈ ಸಾಲಗ್ರಾಮದ ಪೂಜೆಯು ನಾಶಮಾಡುತ್ತದೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಶಂಭು ನಾರದ ಸಂವಾದದಲ್ಲಿ
ತುಳಸೀಕಾಷ್ಠ ಮಹಿಮೆ, ಸಾಲಿಗ್ರಾಮ ಮಹಿಮೆ ಎಂಬ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚವಿಂಶೋಽಧ್ಯಾಯಃ ॥



### ॥ ಮಹಾದೇವ ಉವಾಚ ॥

**ಪ್ರಯಾಗತೀರ್ಥಮಾಹಾತ್ಮ್ಯಂ ವಕ್ಷ್ಯಾಮಿ ಚ ಯಥಾಶ್ರುತಂ ।**
**ಯೇ ನರಾಃ ಪುಣ್ಯಕರ್ಮಾಣಃ ತೇ ತತ್ರ ನಿವಸಂತಿ ಹಿ ॥ ೧ ॥**

**ಯತ್ರ ಗಂಗಾ ಚ ಯಮುನಾ ಯತ್ರ ಚೈವ ಸರಸ್ವತೀ ।**
**ತದೇವ ತೀರ್ಥಪ್ರವರಂ ದೇವಾನಾಮಪಿ ದುರ್ಲಭಂ ॥ ೨ ॥**

**ಈದೃಶಂ ತ್ರಿಷು ಲೋಕೇಷು ನ ಭೂತಂ ನ ಭವಿಷ್ಯತಿ ।**
**ಗ್ರಹಾಣಾಂ ಚ ಯಥಾ ಸೂರ್ಯೋ ನಕ್ಷತ್ರಾಣಾಂ ಯಥಾ ಶಶೀ ॥ ೩ ॥**

---

## ಇಪ್ಪತ್ತೈದನೆಯ ಅಧ್ಯಾಯವು

೧. ಮಹಾದೇವ ಹೇಳಿದನು– ಎಲೈ ನಾರದನೇ ! ಪ್ರಯಾಗ ಮಹಿಮೆಯನ್ನು ಸರಿಯಾಗಿ ಹೇಳುತ್ತೇನೆ. ಯಾರು ಪುಣ್ಯವಂತರೋ ಅವರು ಅಲ್ಲಿ ವಾಸಮಾಡುತ್ತಾರೆ.

೨–೬. ಗಂಗೆ ಯಮುನೆ ಸರಸ್ವತಿಗಳು ಎಲ್ಲಿ ಸೇರಿವೆಯೋ ಅಂತಹ ತೀರ್ಥವು ದೇವತೆಗಳಿಗೂ ಸಿಕ್ಕುವುದು ಕಷ್ಟ. ಇಂತಹ ಉತ್ತಮವಾದ ಕ್ಷೇತ್ರವೂ ತೀರ್ಥವೂ ಮೂರುಲೋಕಗಳಲ್ಲಿಯೂ ಇರುವುದಿಲ್ಲ. ಗ್ರಹಗಳಲ್ಲಿ ಸೂರ್ಯನು ಉತ್ತಮವಾಗಿರುವಂತೆಯೂ ನಕ್ಷತ್ರಗಳಲ್ಲಿ ಚಂದ್ರನು ಉತ್ತಮವಾಗಿರುವಂತೆಯೂ

ತೀರ್ಥಾನಾಮುತ್ತಮಂ ತೀರ್ಥಂ ಪ್ರಯಾಗಾಖ್ಯಮನುತ್ತಮಂ |
ಪ್ರಾತಃ ಕಾಲೇ ತು ಭೋ ವಿದ್ವನ್ ಪ್ರಯಾಗೇ ಸ್ನಾನಮಾಚರೇತ್ || ೪ ||

ಮಹಾಪಾಪಾದ್ವಿನಿರ್ಮುಕ್ತಃ ಸ ಯಾತಿ ಪರಮಂ ಪದಂ |
ದೇಯಂ ಕಿಂಚಿದ್ಯಥಾಶಕ್ತಿ ದಾರಿದ್ರ್ಯಾಭಾವಮಿಚ್ಛತಾ || ೫ ||

ಯೋನರಸ್ತತ್ರ ಗತ್ವಾ ವೈ ಪ್ರಯಾಗೇ ಸ್ನಾನಮಾಚರೇತ್ |
ಧನಿಕೋ ದೀರ್ಘಜೀವೀ ಚ ಜಾಯತೇ ನಾತ್ರ ಸಂಶಯಃ || ೬ ||

ಯತ್ರ ವಟಸ್ಯಾಕ್ಷಯಸ್ಯ ದರ್ಶನಂ ಕುರುತೇ ನರಃ ।
ತೇನ ದರ್ಶನಮಾತ್ರೇಣ ಬ್ರಹ್ಮಹತ್ಯಾ ವಿನಶ್ಯತಿ || ೭ ||

ಆದಿವಟಃ ಸಮಾಖ್ಯಾತಃ ಕಲ್ಪಾಂತೇಽಪಿ ಚ ದೃಶ್ಯತೇ ।
ಶೇತೇ ವಿಷ್ಣುರ್ಯಸ್ಯ ಪತ್ರೇ ಅತೋಽಯಮವ್ಯಯಃ ಸ್ಮೃತಃ || ೮ ||

---

ಪ್ರಯಾಗವು ತೀರ್ಥಗಳಲ್ಲೆಲ್ಲಾ ಉತ್ತಮವು. ಎಲೈ ವಿದ್ವಾಂಸನಾದ ನಾರದನೇ ! ಪ್ರಾತಃಕಾಲದಲ್ಲಿ ಯಾರು ಈ ಪ್ರಯಾಗದಲ್ಲಿ ಸ್ನಾನಮಾಡುತ್ತಾರೆಯೋ ಅವರು ಮಹಾಪಾತಕಗಳಿಂದ ಮುಕ್ತರಾಗಿ ಮುಕ್ತಿಯನು ಹೊಂದುತ್ತಾರೆ. ಅಲ್ಲಿ ಶಕ್ತಿಗನುಗುಣವಾಗಿ ದಾನಮಾಡಿದರೆ ದರಿದ್ರನಾಗುವುದಿಲ್ಲ. ಪ್ರಯಾಗಕ್ಕೆ ಹೋಗಿ ಸ್ನಾನಮಾಡಿದವನು ಧನಿಕನಾಗಿಯೂ ಬಹುಕಾಲ ಬದುಕುವವನಾಗಿಯೂ ಆಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

೭. ಆ ಪ್ರಯಾಗದಲ್ಲಿ ಅಕ್ಷಯವಾದ ವಟವಿರುವುದರಿಂದ ಅದರ ದರ್ಶನಮಾಡುವುದರಿಂದ ಮನುಷ್ಯನು ಬ್ರಹ್ಮಹತ್ಯಾ ಪಾಪವನ್ನು ಕಳೆದು ಕೊಳ್ಳುತ್ತಾನೆ.

೮. ಆ ಆಲದಮರವು ಆದಿವಟವೆನಿಸಿಕೊಂಡಿದೆ. ಅದು ಕಲ್ಪಕಾಲದ ಕೊನೆಯಲ್ಲಿಯೂ ಇರುತ್ತದೆ. ಅದರ ಎಲೆಯಮೇಲೆಯೇ ವಿಷ್ಣುವು ಮಲಗುತ್ತಾನೆ. ಆದ್ದರಿಂದಲೇ ಅದು ನಾಶರಹಿತವಾದುದು.

ತತ್ರ ಪೂಜಾಂ ಪ್ರಕುರ್ವಂತಿ ಮಾನವಾ ವಿಷ್ಣುವಲ್ಲಭಾಃ ।
ಸೂತ್ರೇಣಾಚ್ಛಾದಿತಂ ಕೃತ್ವಾ ಪೂಜಾಂ ಚೈವ ತು ಕಾರಯೇತ್ ॥ ೯ ॥

ಮಾಧವಾಖ್ಯಸ್ತತ್ರ ದೇವಃ ಸುಖಂ ತಿಷ್ಠತಿ ನಿತ್ಯಶಃ ।
ತಸ್ಯ ವೈ ದರ್ಶನಂ ಕಾರ್ಯಂ ಮಹಾಪಾಪೈಃ ಪ್ರಮುಚ್ಯತೇ ॥ ೧೦ ॥

ಯತ್ರ ದೇವಾಶ್ಚ ಋಷಯೋ ಮನುಷ್ಯಾಶ್ಚಾಪಿ ಸರ್ವಶಃ ।
ಸ್ವಂ ಸ್ವಂ ಸ್ಥಲಂ ಸಮಾಶ್ರಿತ್ಯ ತತ್ರ ತಿಷ್ಠಂತಿ ನಿತ್ಯಶಃ ॥ ೧೧ ॥

ಗೋಘ್ನೋ ವಾಪಿ ಚ ಚಾಂಡಾಲೋ ದುಷ್ಟೋ ವಾ ದುಷ್ಟಚೇತನಃ ।
ಬಾಲಘಾತೀ ತಥಾ ವಿದ್ವಾನ್ ಮ್ರಿಯತೇ ತತ್ರ ವೈ ಯದಾ ॥ ೧೨ ॥

ಸ ವೈ ಚತುರ್ಭುಜೋ ಭೂತ್ವಾ ವೈಕುಂಠೇ ವಸತೇ ಚಿರಂ ।
ಪ್ರಯಾಗೇ ತು ನರೋ ಯಸ್ತು ಮಾಘಸ್ನಾನಂ ಕರೋತಿ ಚ ॥ ೧೩ ॥

ನ ತಸ್ಯ ಫಲಸಂಖ್ಯಾಸ್ತಿ ಶೃಣು ದೇವರ್ಷಿಸತ್ತಮ ।
ಆಪೋ ನಾರಾ ಇತಿ ಪ್ರೋಕ್ತಾಃ ಸರ್ವಲೋಕೇಷು ಶುಶ್ರುಮ ॥ ೧೪ ॥

---

೯–೧೦. ಅಲ್ಲಿ ವೈಷ್ಣವರು ಆ ವಟಕ್ಕೆ ನೂಲನ್ನು ಸುತ್ತಿ ಪೂಜೆಯನ್ನು ಮಾಡುತ್ತಾರೆ. ಆ ವಟವೃಕ್ಷದಲ್ಲಿ ಮಾಧವನೆಂಬ ದೇವರು ಸುಖವಾಗಿರುವನು. ಅಲ್ಲಿ ಅವನ ದರ್ಶನವನ್ನು ಮಾಡಿದರೆ ಮಹಾಪಾಪಗಳೆಲ್ಲವೂ ಹೋಗುತ್ತವೆ.

೧೧. ಆ ವಟದ ಬಳಿಯಲ್ಲಿ ದೇವತೆಗಳೂ ಋಷಿಗಳೂ ಮನುಷ್ಯರೂ ತಮತಮಗೆ ಸರಿಯಾದ ಜಾಗದಲ್ಲಿ ನಿತ್ಯವೂ ಇರುವರು.

೧೨–೧೭. ಗೋಹತ್ಯೆ ಮಾಡಿದವನಾಗಲೀ ಚಾಂಡಾಲನಾಗಲೀ ದುಷ್ಟನಾಗಲೀ, ದುರಭಿಪ್ರಾಯವುಳ್ಳವನಾಗಲೀ, ಬಾಲನನ್ನು ಕೊಂದವನಾಗಲೀ, ಯೋಗ್ಯನೇ ಆಗಲೀ ಅಲ್ಲಿ ಸತ್ತರೆ ಅವನು ವಿಷ್ಣುವಿನಂತೆ ನಾಲ್ಕು ಕೈಗಳನ್ನು ಹೊಂದಿ ವೈಕುಂಠದಲ್ಲಿ ಸುಖಿಸುವನು. ಪ್ರಯಾಗದಲ್ಲಿ ಮಾಘಸ್ನಾನವನ್ನು ಮಾಡಿದವನಿಗೆ ಬರುವ ಫಲಗಳಿಗೆ ಲೆಕ್ಕವೇ ಇರುವುದಿಲ್ಲ. ಇದು ನಿಶ್ಚಯವು. ನಾರಾಯಣ ಎಂಬ ಸ್ವಾಮಿಯ ಹೆಸರಿನಲ್ಲಿ ನಾರಾ ಎಂದರೆ ನೀರೆಂದು ಹೆಸರು. ಇದು ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾಗಿದೆ. ಅಯನವೆಂದರೆ ಜಾಗ ಅಥವಾ

ತೇನ ನಾರಾಯಣಃ ಪ್ರೋಕ್ತಃ ಸ್ನಾತಾನಾಂ ಭುಕ್ತಿಮುಕ್ತಿದಃ ।
ಗ್ರಹಾಣಾಂ ಚ ಯಥಾ ಸೂರ್ಯೋ ನಕ್ಷತ್ರಾಣಾಂ ಯಥಾ ಶಶೀ ॥ ೧೫ ॥

ಮಾಸಾನಾಂ ಹಿ ತಥಾ ಮಾಘಃ ಶ್ರೇಷ್ಠಸ್ಸರ್ವೇಷು ಕರ್ಮಸು ।
ಮಕರಸ್ಥೇ ರವೌ ಮಾಘೇ ಪ್ರಾತಃ ಕಾಲೇ ತಥಾಮಲೇ ॥ ೧೬ ॥

ಗೋಷ್ಪದೇಪಿ ಜಲೇ ಸ್ನಾನಂ ಸ್ವರ್ಗದಂ ಪಾಪಿನಾಮಪಿ ।
ಯೋಗೋಯಂ ದುರ್ಲಭೋ ವಿದ್ವಂಸ್ತ್ರೈಲೋಕ್ಯೇ ಸಚರಾಚರೇ ॥ ೧೭ ॥

ಅಸ್ಮಿನ್ಯೋ ಯತ್ನಮಾಪನ್ನೋ ಸ್ನಾಯಾದಪಿ ದಿನತ್ರಯಂ ।
ಪಂಚ ವಾ ಸಪ್ತ ವಾ ಯತ್ರ ಸ್ನಾನಂ ಕುರ್ವನ್ಪ್ರಯಾಗಜಂ ॥ ೧೮ ॥

ಚಂದ್ರವದ್ವರ್ತತೇ ಸೋಪಿ ಕುಲೇ ಬಾಡವಸತ್ತಮ ।
ಚರಾಚರಾಶ್ಚ ಯೇ ಜೀವಾ ಸ್ತಥೈವ ಮನುಜಾದಯಃ ॥ ೧೯ ॥

---

ಆಶ್ರಯವೆಂದು ಅರ್ಥ. ಆದ್ದರಿಂದ ಈ ನೀರಿಗೆ ನಾರಾಯಣನೆಂದೇ ಹೆಸರು. ಇಲ್ಲಿ ಸ್ನಾನಮಾಡಿದರೆ ಅವರಿಗೆ ಊಟಕ್ಕೆ ಅನುಕೂಲವಾಗುವುದಲ್ಲದೆ ಮುಕ್ತಿಯೂ ಸಿಗುತ್ತದೆ. ಗ್ರಹಗಳಲ್ಲಿ ಸೂರ್ಯನು ಉತ್ತಮನು. ನಕ್ಷತ್ರಗಳಲ್ಲಿ ಚಂದ್ರನು ಉತ್ತಮನು. ಮಾಸಗಳಲ್ಲಿ ಹಾಗೆಯೇ ಮಾಘಮಾಸವು ಉತ್ತಮವಾದುದು. ಈ ಮಾಘಮಾಸವು ಎಲ್ಲಾ ಕೆಲಸಗಳಿಗೂ ಉತ್ತಮವಾದುದು. ಮಕರಮಾಸವೂ ಸೇರಿರಬೇಕು. ಆಗ ಪ್ರಾತಃಕಾಲದಲ್ಲಿ ಗೋಷ್ಪದದಲ್ಲಿ ಸ್ನಾನಮಾಡಬೇಕು. ಹೀಗೆ ಮಾಡಿದರೆ ಪಾಪಿಗೂ ಸ್ವರ್ಗವು ಸಿಕ್ಕುತ್ತದೆ.

೧೮-೨೩. ಎಲೈ ವಿದ್ವಾಂಸನೇ! ಚರಾಚರವಾದ ಪ್ರಾಣಿಗಳಿಗೆ ಈ ಯೋಗವು ಸಿಕ್ಕುವುದು ಕಷ್ಟ. ಈ ಯೋಗದಲ್ಲಿ ಪ್ರಯತ್ನಪಟ್ಟು ಮೂರುದಿನ ಸ್ನಾನಮಾಡಬೇಕು. ಆ ಪ್ರಯಾಗದಲ್ಲಿ ಈ ಮಕರಮಾಘಸಂಪರ್ಕದಲ್ಲಿ ಐದು ಆರು ಸ್ನಾನಗಳನ್ನು ಮಾಡಿದರೆ ಅವನು ಚಂದ್ರನಂತೆ ವೃದ್ಧಿಹೊಂದುತ್ತಾನೆ. ಅಲ್ಲಿ ಸ್ನಾನಮಾಡಿದ ಚರಾಚರ ಪ್ರಾಣಿಗಳೂ ಮನುಷ್ಯರೂ ವೈಕುಂಠವನ್ನು

ಪ್ರಯಾಗತೀರ್ಥಮಾಶ್ರಿತ್ಯ ವೈಕುಂಠಂ ಯಾಂತಿ ತೇ ನರಾಃ ।
ಯೇಽವಸಿಷ್ಠಾದಯಸ್ತತ್ರ ಋಷಯಃ ಸನಕಾದಯಃ ॥ ೨೦ ॥

ತೇಽಪಿ ಪ್ರಯಾಗಜಂ ತೀರ್ಥಂ ಸೇವಂತೇ ಚ ಪುನಃ ಪುನಃ ।
ಯತ್ರ ವಿಷ್ಣುಶ್ಚ ರುದ್ರಶ್ಚ ಯತ್ರೇಂದ್ರಶ್ಚ ತಥಾ ಪುನಃ ॥ ೨೧ ॥

ತೇಽಪಿ ಸರ್ವೇ ವಸಂತೀಹ ಪ್ರಯಾಗೇ ತೀರ್ಥಸತ್ತಮೇ ।
ದಾನಂ ತತ್ರ ಪ್ರಶಂಸಂತಿ ನಿಯಮಾಂಶ್ಚ ತಥೈವ ಚ ॥ ೨೨ ॥

ತತ್ರ ಸ್ನಾತ್ವಾ ಚ ಪೀತ್ವಾ ಚ ಪುನರ್ಜನ್ಮ ನ ವಿದ್ಯತೇ ॥ ೨೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಪತಿ ನಾರದ ಸಂವಾದೇ ಗಂಗಾ ಪ್ರಯಾಗ ಮಾಹಾತ್ಮ್ಯಂ ನಾಮ ಪಂಚವಿಂಶೋಽಧ್ಯಾಯಃ

---

ಹೊಂದುತ್ತಾರೆ. ವಸಿಷ್ಠಾದಿ ಋಷಿಗಳೂ ಸನಕಾದಿ ಋಷಿಗಳೂ ಪ್ರಯಾಗ ತೀರ್ಥದಲ್ಲಿ ಆಗಾಗ್ಗೆ ಬಂದು ಸ್ನಾನಮಾಡುತ್ತಾರೆ. ವಿಷ್ಣು ರುದ್ರ ಇಂದ್ರ ಮೊದಲಾದ ದೇವತೆಗಳೆಲ್ಲರೂ ಕೂಡಾ ಈ ಉತ್ತಮವಾದ ಪ್ರಯಾಗ ತೀರ್ಥದಲ್ಲಿ ವಾಸಿಸುತ್ತಾರೆ. ಅಲ್ಲಿ ಮಾಡುವ ದಾನಗಳನ್ನೂ ನಿಯಮಗಳನ್ನೂ ಎಲ್ಲರೂ ಉತ್ತಮವೆಂದು ಹೇಳುತ್ತಾರೆ. ಅಲ್ಲಿ ಸ್ನಾನಮಾಡಿ ಆ ತೀರ್ಥವನ್ನು ಕುಡಿದರೆ ಪುನರ್ಜನ್ಮವಿರುವುದಿಲ್ಲ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಪತಿ ನಾರದ ಸಂವಾದದಲ್ಲಿ ಪ್ರಯಾಗ ಮಹಿಮೆ ಎಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

